ಶ್ರೀಶೈಲ ಜಗದ್ಗುರು ಶ್ರೀ ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿ ಕೃಪಾಪೋಷಿತ
ಶ್ರೀ ವೀರಶೈವ ಧರ್ಮಾಲಯ ಹರಿಹರದ ಪ್ರಕಟನೆ.

---

# ಶ್ರೀ ಮರುಳ ಸಿದ್ಧಾಂಕ

ಶ್ರೀ ಮರುಳಾರಾಧ್ಯ ವಿಜಯ ಕಾವ್ಯದ ಗದ್ಯಾನುವಾದವನ್ನೂ ಉಜ್ಜಯಿನೀ ಪುಣ್ಯಸ್ಥಳದ
ಸುಂದರ ಚಿತ್ರಗಳನ್ನೂ ಒಳಗೊಂಡಿದೆ.



ಸಂಪಾದಕರು:

**ಪಂಡಿತ ಕವಲಿ ಚೆನ್ನಬಸವಪ್ಪ.**

**ವೇ. ಮಠದ ಮರಿದೇವ ಸ್ವಾಮಿಗಳು.**





೧೯೪೯

ಚಾ ವಿ. ಶತಕ ೮೭೨ ಗಾಂಧಿ ಶತಕ ೨

ಬೆಲೆ : ನಾಲ್ಕು ರೂಪಾಯಿಗಳು

ಮುದ್ರಕರು ಮತ್ತು ಮುದ್ರಣಾಲಯ :

**ಶ್ರೀ ಡಿ. ಟಿ. ಕಾಯಸ್ಥ.**

**ರವೀಂದ್ರ ಮುದ್ರಣಾಲಯ, ಧಾರವಾಡ.**



ಶ್ರೀ ಮರುಳಸಿದ್ಧಾಂಕ ಪುಸ್ತಕಗಳು ಸಿಗುವ ಸ್ಥಳ :

**ಶ್ರೀ ಚೆನ್ನಮಲ್ಲಸ್ವಾಮಿಗಳು, ಬಣ್ಣದಮಠ, ಹಾವೇರಿ.**

ಏಜಂಟ :

**ಶ್ರೀ ಜಗದ್ಗುರು, ಶ್ರೀಶೈಲ ಸೂರ್ಯಸಿಂಹಾಸನಮಠ**

**ಗುಂತಕಲ್ಲ, ಅನಂತಪೂರ ಜಿಲ್ಲಾ.**

*

# ಮುನ್ನುಡಿ



ಈಗ ಕೆಲವರ್ಷಗಳ ಹಿಂದೆ ದೇಪ (ಅಥವಾ ದೇವ) ಎಂಬೊಬ್ಬ ಕವಿಯಿಂದ ರಚಿತವಾದ "ಮರುಳಸಿದ್ಧಕಾವ್ಯ" ಎಂಬೊಂದು ಕಾವ್ಯವನ್ನು ಬೆಂಗಳೂರಿನ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ. ಅ. ನ. ಕೃಷ್ಣರಾಯರು ಸಂಪಾದಿಸಿ ಪ್ರಕಟಿಸಿದುದು ಕನ್ನಡ ಓದುಗರಿಗೆ ವಿದಿತವಿದ್ದ ಸಂಗತಿಯಾಗಿದೆ. ಈ ಕಾವ್ಯದಲ್ಲಿ ಮರುಳಸಿದ್ಧರು ಅಸ್ಪೃಶ್ಯ ಕುಲದಲ್ಲಿ ಜನಿಸಿ ತಮ್ಮ ತಪಃ ಸಾಮರ್ಥ್ಯದಿಂದ ಮುಂದೆ ವೀರಶೈವ ಪಂಚ ಆಚಾರ್ಯ ಪೀಠಗಳಲ್ಲಿ ಒಂದಾದ ಉಜ್ಜಯಿನೀ ಪೀಠಕ್ಕೆ ಅಧಿಕಾರಿಗಳಾದರೆಂದು ಒಟ್ಟಾರೆ ಬಣ್ಣಿಸಲಾಗಿದೆ. ಇತರ ಸಾಧನೆಗಳಾವವೂ ದೊರೆಯದ ಮು[illegible]ಕ್ಕ, ಈ ಸಂಗತಿಯನ್ನು ನಿಜವೆಂದು ಬಗೆದು ಜನ್ಮತಃ ಅಸ್ಪೃಶ್ಯನಾದೊಬ್ಬನು ಆಚಾರ್ಯ ಪೀಠಕ್ಕೇರುವಷ್ಟರ ಮಟ್ಟಿಗೆ ಆಸ್ಪದವನ್ನು ಕಲ್ಪಿಸಿಕೊಟ್ಟ ವೀರಶೈವದ ಹೆಚ್ಚಳವನ್ನೇ ಈ ಕಾವ್ಯ ಪ್ರದರ್ಶಿಸುತ್ತಿದೆ ಎಂದು ನೆರೆನಂಬಿ ಸಂಪಾದಕರು ಬಹುತ್ರಮವಹಿಸಿ ಈ ಕಾವ್ಯವನ್ನು ಪ್ರಕಟಿಸಿದ್ದಾರೆಂಬುವಲ್ಲಿ ಏನ ಸಂದೇಹವೂ ಇಲ್ಲ.

ಆದರೆ ದೇವಕವಿಯ ಕಾಲ ( ಕ್ರಿ ಶ ೧೫೮೬ ) ದ ವರೆಗೆ ಇನ್ನೂ ಹಲವು ಕವಿಗಳು ಮರುಳಸಿದ್ಧರ ಚರಿತ್ರೆಯನ್ನು ಬರೆದಿದ್ದರೂ ಇವರು ಅಸ್ಪೃಶ್ಯರಲ್ಲಿ ಜನಿಸಿದರೆಂಬುದನ್ನು ಯಾರೂ ಹೇಳದಿರುವುದು ವಿಚಾರಣೀಯವಾಗಿದೆ.

ಶ್ರೀ ಬಸವಣ್ಣನವರ ಕಾಲದಲ್ಲಿ ಅವರ ಪ್ರೋತ್ಸಾಹದಿಂದ ಹರಳಯ್ಯ (ಮಾದಿಗ) ಮಧುವಯ್ಯ ( ಬ್ರಾಹ್ಮಣ ) ನವರಿಗೆ ಉಂಟಾದ ಬಾಂಧವ್ಯವನ್ನು ಯಾವ ಮುಚ್ಚುಮರೆಯಿಲ್ಲದೆ ವರ್ಣಿಸಿದ ವೀರಶೈವ ಕವಿಗಳೂ, ಪುರಾಣ ಕರ್ತರೂ ಮರುಳಸಿದ್ಧರು ನಿಜವಾಗಿಯೂ ಅಂತ್ಯಜರಾಗಿದ್ದರೆ ಆ ಮಾತನ್ನು ಬಚ್ಚಿಡುತ್ತಿದ್ದರೆಂದು ಊಹಿಸುವುದು ತಪ್ಪೆಂದೇ ಹೇಳಬೇಕು. ಅಲ್ಲದೆ ಮರುಳಸಿದ್ಧರೆಂಬ ಹೆಸರಿನವರು ಇನ್ನೂ ಹಲವರು ಆಗಿ ಹೋಗಿರುವರು.

ಅವನೊಬ್ಬ ಮಹಿಮಾಪುರುಷನ ಹೆಸರನ್ನು ಬೇರೆ ಬೇರೆ ಕುಲದವರು ತಮ್ಮ ತಮ್ಮ ಮಕ್ಕಳಿಗಿಡುವುದು ಸ್ವಾಭಾವಿಕ. ಅಂತೆಯೇ ಶ್ರೀ ಮರುಳಸಿದ್ಧರ ಕಾಲದನಂತರ ಅವರ ಹೆಸರನ್ನು ಮಾದಿಗರಲ್ಲಿಯೂ ಇಟ್ಟಿರುವುದು ಸಾಧ್ಯವಿದೆ. ಅಂತಹನೊಬ್ಬ ಮರುಳಸಿದ್ಧನು ತನ್ನ ಆತ್ಮಬಲದಿಂದ ಮಹಿಮನಾಗಿರಬಹುದು. ಈ ಊಹೆಗೆ ಉಜ್ಜಯಿನಿಯಲ್ಲಿ ಈಗಲೂ ಮಾದಿಗರ

ಕೇರಿಯಲ್ಲಿ ಪ್ರತ್ಯೇಕವಾಗಿರುವ ಮರುಳಸಿದ್ಧನ ಗುಡಿಯೂ, ಅದರ ಪೂಜಾರಿಗೆ ಉಜ್ಜಯಿನೀ ಪೀಠಾಧಿಕಾರಿಗಳಿಂದ ದೊರೆಯುತ್ತಿರುವ ಸಾಂಪ್ರದಾಯಿಕ ಪೂಜಾರಿಕೆಯೂ ನಿದರ್ಶನವಾಗಿವೆ.

ಇತ್ತೀಚೆಗೆ ಶ್ರೀ ಮರುಳಸಿದ್ಧರ ಜೀವನ ಚರಿತ್ರೆಗಳನ್ನು ವರ್ಣಿಸುವ ಅನೇಕ ಬೇರೆ ಬೇರೆ ಪುರಾಣಗಳು ದೊರೆತುದು "ಶ್ರೀ ಮರುಳಸಿದ್ಧಾಂಕ" ವೆಂಬ ಇದೇ ಪುಸ್ತಕದಲ್ಲಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಕೆಲವು ಲೇಖನಗಳಿಂದ ಗೊತ್ತಾಗುತ್ತದೆ. ಈ ಯಾವ ಪುರಾಣಗಳಲ್ಲಿಯೂ ಶ್ರೀ ಮರುಳಸಿದ್ಧರು ಅಸ್ಪೃಶ್ಯ ಕುಲದವರೆಂಬ ಮಾತೇ ಇಲ್ಲ. ಆದುದರಿಂದ ಈಗಿನ ಪರಿಸ್ಥಿತಿಯಲ್ಲಿ ಅಪವಾದವಾಗಿರುವ ಒಂದೇ ಒಂದು, ಅದೂ ಅನೇಕ ಶತಮಾನಗಳ ತರುವಾಯ ಬರೆದ ಗ್ರಂಥವನ್ನೇ ಸತ್ಯವೆಂದು ಗ್ರಹಿಸಿ ಉಳಿದ ಬಹುಸಂಖ್ಯಾಕ ಗ್ರಂಥಗಳನ್ನೆಲ್ಲ ಕಡೆಗಣಿಸುವುದು ಸತ್ಯನಿಷ್ಠತೆಗೆ ಭಂಗತಂದಂತಾಗಬಹುದಾಗಿದೆ.

ಶ್ರೀ. ಅ. ನ ಕೃಷ್ಣರಾಯರು ತಾವು ಸಂಪಾದಿಸಿದ ಮರುಳಸಿದ್ಧ ಕಾವ್ಯದ ಪೀಠಿಕೆಯಲ್ಲಿಯೇ "ಪ್ರಾಚೀನ ಮಹಾವ್ಯಕ್ತಿಗಳ ಜೀವನದ ಐತಿಹಾಸಿಕ ಅಂಶಗಳನ್ನು ನಾಲ್ಕು ಆಧಾರಗಳ ಮೇಲೆ ಕಟ್ಟಬೇಕಾಗುತ್ತದೆ: ೧ ಕಾವ್ಯ ಪುರಾಣಗಳಲ್ಲಿ ಬರುವ ಉಲ್ಲೇಖ. ೨. ಅವರ ಕೃತಿಗಳಲ್ಲಿ ದೊರೆಯಬಹುದಾದ ಇತಿಹಾಸ. ೩. ಶಾಸನಾಧಾರ. ೪. ಪ್ರತೀತಿ, ಸ್ಥಳಪುರಾಣ" ಎಂದು ಹೇಳಿದುದನ್ನು ಅನುಲಕ್ಷಿಸಿದರೆ ಶ್ರೀ. ಮರುಳಸಿದ್ಧರ ವಿಷಯವಾಗಿ ಇದುವರೆಗೆ ದೊರೆತ ಆಧಾರಗಳು ಪ್ರತೀತಿಯನ್ನೇ ಅನುಮೋದಿಸುತ್ತಿವೆ ಎನ್ನಬಹುದಾಗಿದೆ.

ಪಂಡಿತರೂ ಚರಿತ್ರಕಾರರೂ ಸಂಶೋಧಕರೂ ಸತ್ಯಾನ್ವೇಷಣ ಬುದ್ಧಿಯಿಂದಲೇ ಇನ್ನೂ ಹೆಚ್ಚಿನ ಆಧಾರಗಳನ್ನು ಕಲೆಹಾಕಲು ಸರ್ವತೋಮುಖವಾಗಿ ಪ್ರಯತ್ನಿಸಬೇಕು. ಈ "ಮರುಳಸಿದ್ಧಾಂಕ" ದಲ್ಲಿ ಹಲವು ಹೊಸ ಆಧಾರಗಳನ್ನು ಕೊಡುವ ಯತ್ನ ಮಾಡಲಾಗಿದೆ. ಸಹೃದಯರು ಇವನ್ನೆಲ್ಲ ಆವ ಪೂರ್ವಗ್ರಹವೂ ಇಲ್ಲದೆ ವಿವೇಚಿಸಲಿ, ಸರಿಯಾದುದನ್ನು ಅಂಗೀಕರಿಸಲಿ.

— ಶಿ ಶಿ. ಬಸವನಾಳ

---

*

*

# ಅಭಿಪ್ರಾಯ

[ಶ್ರೀ. ಪಿ. ಆಯ್. ಹಿರೇಮಠ ಹಾಯಕೋರ್ಟ ವಕೀಲ ಮತ್ತು ಮುನಸಿಪಲ್ ಕೌನ್ಸಿಲರ, ಹುಬ್ಬಳ್ಳಿ ]



ಮರುಳಸಿದ್ಧ ಕಾವ್ಯ ಮತ್ತು ಅ. ನ. ಕೃಷ್ಣರಾಯರು ಈ ಜೋಡಣೆಯಿಂದ ಇತ್ತೀಚಿಗಾಗಿ ವೀರಶೈವ ಸಮಾಜದಲ್ಲಿ ಕಲುಷಿತ ಹವೆಯು ಬೀಸತೊಡಗಿದೆ. ಶ್ರೀಮಾನ್ ಅ. ನ ಕೃಷ್ಣರಾಯರ ಸಾಹಿತ್ಯ ಸಂಶೋಧನಾ ಶಕ್ತಿಯ ಬಗ್ಗೆ ಭಿನ್ನಾಭಿಪ್ರಾಯವಿಲ್ಲದಿದ್ದರೂ ಸಮಾಜದ ಹಿತಾಹಿತ ದೃಷ್ಟಿಯಿಂದ ಅವರು ತಮ್ಮ ಧೋರಣವನ್ನು ಇನ್ನೂ ಹೆಚ್ಚಿಸಿ ಮಂಥನ ಮಾಡಬೇಕಾಗಿತ್ತು. ಸಾಮಾನ್ಯಜನರು, ಗಾವಿಲರು ಅ. ನ. ಕೃಷ್ಣರಾಯರ ಮಾತೆತ್ತಿ ವಿಷಯಾಭಾಸವಿದ್ದ ಸಂಗತಿಗಳನ್ನು ಕೂಡ ಸಮರ್ಥನ ಮಾಡಲುಯತ್ನಿಸುತ್ತಾರೆ. ಇದರಿಂದ ಸಮಾಜದಲ್ಲಿ ಹಿತದ ಬದಲಾಗಿ ಅಹಿತವೇ ಹೆಚ್ಚಾಗುತ್ತದೆ. ಮತ್ತು ಧರ್ಮವಿಚಾರಗಳಲ್ಲಿ ಚ್ಯುತಿಯುಂಟಾಗಿ ಸ್ವೇಚ್ಛಾಚಾರ ವೃತ್ತಿಗೆ ಅನುವು ದೊರೆಯುತ್ತದೆ. ಸಂಶೋಧನೆಯ ಭರದಲ್ಲಿ ಅಪಕ್ವವಿಚಾರಗಳನ್ನು ಮುಂದೊಡ್ಡಿದ್ದಾದರೆ ಸಂಶೋಧಕರ ಪ್ರತಿಭೆಗೆ ಕುಂದು ಬರುವದಲ್ಲದೆ ಗ್ರಂಥದ ಪ್ರಾಮಾಣ್ಯವೂ ಕುಗ್ಗುತ್ತದೆ. ಕೃಷ್ಣರಾಯರು ಹಲಕೆಲವರ ಹೊಯ್ದಾಡುವ ಅಭಿಪ್ರಾಯಗಳನ್ನು ಮುಂದಿಟ್ಟು ಅವುಗಳನ್ನಪ್ಪಿ ಸಮಾಜದಲ್ಲಿ ಒಬ್ಬಣಗಳು ಅಲೆದಾಡುತ್ತವೆಂಬ ಅರಿವು ಇದ್ದಾಗ್ಯೂ ಮತ್ತೊಂದು ಬಗೆಯಾಗಿ ಕಾಣುವ ಆಚಾರ್ಯರ ಅಸ್ತಿತ್ವದ ಮತ್ತು ಪ್ರಾಚೀನತ್ವದ ಆಧಾರಗಳ ಗುಟ್ಟನ್ನು ತಟ್ಟದೆ ಒಂದು ನಿರ್ಣಯಕ್ಕೆ ಬರುವ ಬದಲು ಇನ್ನೂ ಆಳವಾಗಿ ಪ್ರಾಚೀನ ಗ್ರಂಥಗಳ ಸುಳಿಯನ್ನು ಕಾಣಬೇಕಾಗಿತ್ತು.

ಅ. ನ. ಕೃಷ್ಣರಾಯರ ಪೀಠಿಕೆಯಲ್ಲಿಯ ಸಾರವೆಂದರೆ ವೀರಶೈವ ಮತ ಸಂಸ್ಥಾಪನಾಚಾರ್ಯರಲ್ಲಿ ಒಬ್ಬರಾದ ಶ್ರೀ ಮರುಳಾರಾಧ್ಯರು ಮತ್ತು ಮಾದಿಗರಲ್ಲಿ ಹುಟ್ಟಿದ ಒಬ್ಬ ಮರುಳಸಿದ್ಧ ಶಿವಶರಣನು. ಇವರೀರ್ವರ ಹೆಸರಿನ ತೊಡಕಿನಿಂದ ಉದ್ಭೂತವಾದ ವಿಚಾರಗೊಂದಲ. ದೇಪ ಕವಿಯ "ಮರುಳಸಿದ್ಧ ಕಾವ್ಯವು" ಕಲ್ಪನಾತರಂಗಗಳ ಅಬ್ಬರದಲ್ಲಿ ಹೊರಸೂಸಿದೆಯೆಂದು ಹೇಳಬಹುದು. ಶಿಲಾದಮುನಿಯ ಹೆಂಡತಿ ಸುಪ್ರಭೆಯು ಶಿವಪೂಜಾ ಸಮಯದಲ್ಲಿ ರಜಸ್ವಲೆಯಾದದ್ದಕ್ಕೆ ಶಾಪ, ಹಾಗೇ ಬೀದಿಗೆ ಬಂದು ಬಾಚಿದೇವನ ಸೇವಕ ಕೂಚಿಮಾರನೆಂಬ ಮಾದಿಗನ ಹೆಂಡತಿಯಾಗಿ ಉಳಿಯುವದು" ಮುಂತಾದ ಕಲ್ಪನಾತೆರೆಗಳು ಲೌಕಿಕರ ತಲೆಗೆ ಹಿಡಿಯುವದು

ಕಷ್ಟ. ಹದಿನಾರನೇ ಶತಮಾನದಲ್ಲಿ ಹುಟ್ಟಿದುದು ಈ ಕಾವ್ಯ. ಕಥಾನಾಯಕ ನಾದ ಮರುಳಸಿದ್ಧನನ್ನು ಬಹು ಘನತೆಗೇರಿಸಿ ಆ ಮೊದಲು ಆಗಿಹೋದ ಶ್ರೀ ಮರುಳಾರಾಧ್ಯ ಮತ್ತು ಮರುಳಸಿದ್ಧ ಮಹಿಮರಿಗೆ ಹೋಲಿಸಿ ಅಥವಾ ಅವರಿಗಿಂತಲೂ ಮಿಗಿಲಾಗಿರುವಂತೆ ತೋರಿಸಿಯಾಗಲಿ ವರ್ಣಿಸುವದು ಮತ್ತು ಅತಿಶಯೋಕ್ತಿಯಾಗಿ ಬರೆಯುವದು ಕವಿಯ ಲಾಲಸೆಯಾಗಿದೆ. ಆದ್ದರಿಂದ ದೇಪ ಕವಿಯು ಕಥಾನಾಯಕ ಮರುಳಸಿದ್ಧನನ್ನು ಚಿತ್ರಿಸುವಾಗ್ಗೆ ಐತಿ ಹಾಸಿಕ ಪರಂಪರೆಗೆ ಸಂಬಂಧ ಪಡದ ಅನೇಕ ಅತಿಶಯೋಕ್ತಿ ವಿಷಯಗಳನ್ನು ಕೂಡಿಸಿದ್ದುದರಿಂದ ಅವುಗಳನ್ನು ಪ್ರಮಾಣವೆಂದು ಮನ್ನಿಸಲಾಗದು.

ವೀರಶೈವ ಮತಸ್ಥಾಪನಾಚಾರ್ಯರಲ್ಲಿ ಒಬ್ಬರಾದ ದಾರುಕಾಚಾರ್ಯರ ಪರಂಪರೆಗೆ ಹೊಂದಿದ ಮರುಳಾರಾಧ್ಯರ ಕಾಲ ರೀತಿಗಳನ್ನು ನಿಶ್ಚಯಗೊಳಿ ಸುವದು ಬಹು ಕಷ್ಟ. ಅದರಲ್ಲಿಯೂ ದೇಪಕವಿಯೆಂಬ ಹದಿನಾರನೇ ಶತ ಮಾನದ ಕಾಲದ ವ್ಯಕ್ತಿಯೊಬ್ಬನ ಕೃತಿಯಿಂದ ಸಂದಿಗ್ಧ ವಾತಾವರಣದ ಮುಸುಕಿನಲ್ಲಿ ಬಹು ಪ್ರಾಚೀನ ಕಾಲದಿಂದ ಪರಂಪರೆಯಾಗಿ ಬಂದ ಪಂಚ ಆಚಾರ್ಯರ ಪೀಠಗಳಲ್ಲಿ ಒಂದಾದ ಉಜ್ಜಯಿನೀ ಪೀಠದ ಮೂಲಾಚಾರ್ಯರ ಕಾಲ ನಿರ್ಣಯಿಸುವದು ಅಷ್ಟು ಹಗುರಲ್ಲ. ಕೃಷ್ಣರಾಯರೇ ತಮ್ಮ ಪೀಠಿಕೆ ಯಲ್ಲಿ ಒಪ್ಪಿಕೊಂಡಂತೆ "ಈ ಮರುಳಸಿದ್ಧನೇ ಆಚಾರ್ಯರಲ್ಲಿ ಒಬ್ಬನಾದ ಮರುಳಾರಾಧ್ಯರೋ ಅಲ್ಲವೊ ಎಂಬ ವಿಷಯ ತೊಡಕಿನದು" ಮತ್ತು "ಮರುಳಸಿದ್ಧ ಮಾದಿಗರಲ್ಲಿ ಜನಿಸಿ ....ತನ್ನ ತಪಃ ಪ್ರಭಾವದಿಂದ ಆಚಾರ್ಯ ಪದವಿಗೇರಿದ ಎನ್ನುವದು ನಮ್ಮ ಮನಸ್ಸಿಗೆ ಹಿಡಿದ ವಿಷಯ" ಈ ಸಂದಿಗ್ಧ ವಿಮರ್ಶೆಯಿಂದ ದೇಪ ಕವಿಯ "ಮರುಳಸಿದ್ಧನು" ಆಚಾರ್ಯ ಮರುಳ ಸಿದ್ಧರೆಂದು ಪರಿಗಣಿಸಲ್ಪಡಲಾರನು.

ಕೆಲವು ಸಂಶೋಧನಾ ಲಾಲಸೆಯುಳ್ಳವರು, ವೀರಶೈವ ಮತದ ಮೂಲ ಆಚಾರ್ಯರು ಶ್ರೀ ಬಸವಣ್ಣನವರ ಕಾಲದಲ್ಲಿಯೇ ಬೇರೆ ಬೇರೆ ಕಡೆಗೆ ಇದ್ದು ಮತಾಚಾರ್ಯರೆನಿಸಿಗೊಂಡು ತತ್ವಬೋಧ ಮಾಡಿದರೆಂದು ಅಭಿ ಪ್ರಾಯಪಡುತ್ತಾರೆ. ಈ ವಾದಸರಣಿಯು ನಿರಾಧಾರವಾದದ್ದೂ ಮತ್ತು ಆಚಾರ್ಯರ ಪ್ರಾಚೀನತ್ವವು ಅನೇಕ ಆಧಾರಗಳಿಂದ ಮತ್ತು ಪರಂಪರೆ ಯಿಂದ ತರ್ಕ್ಯವಿದ್ದ ಮಟ್ಟಿಗೆ ಒತ್ತಿ ಹೇಳಲ್ಪಟ್ಟಾಗ್ಗೂ ಅದನ್ನು ಬದಿಗೊತ್ತುವ ಅನುಚಿತ ವೃತ್ತಿಯಿಂದ ಕೂಡಿದ್ದು ಅದೆ. ಉಪನಿಷದಾಗಮ ಪುರಾಣ ಗಳಲ್ಲಿ ಪಂಚ ಜಗದಾಚಾರ್ಯರ ಅಸ್ತಿತ್ವದ ಬಗ್ಗೆ ವರ್ಣನೆ ಇರುವದಲ್ಲದೆ ಉಜ್ಜಯಿನೀ ಪೀಠಕ್ಕೆ ಸಮಾನ ಧರ್ಮಪೀಠಗಳಾದ ಕೇದಾರ ವಾರಣಾಶೀ (ಕಾಶಿ) ರಂಭಾಪುರಿ ಮತ್ತು ಶ್ರೀಶೈಲ ಪೀಠಗಳ ಪರಂಪರೆ, ಪಟ್ಟವಲ್ಲರಿ

ಮತ್ತು ಇತಿಹಾಸ ಬಹು ಪ್ರಾಚೀನ ಕಾಲದಿಂದ ಧಾರಾಳವಾಗಿ ಬಂದಿದೆಯೆಂದು ಹೊಳೆಯುತ್ತವೆ ಈ ದಿಶೆಯಲ್ಲಿ ಇನ್ನೂ ಹೆಚ್ಚೆಚ್ಚಾಗಿ ಶೋಧ ನಡೆದಲ್ಲಿ ಪೀಠಾಚಾರ್ಯರ ಪ್ರಾಚೀನತ್ವದ ಬಗ್ಗೆ ಇನ್ನೂ ಹೆಚ್ಚಾಗಿ ಬೆಳಕು ಬೀಳುವ ವೆಂಬುದಕ್ಕೆ ಸಂದೇಹವಿಲ್ಲ.

ಸ್ವಲ್ಪ ಮಟ್ಟಿಗೆ ಹೇಳಬೇಕೆಂದರೆ: ಶ್ರೀ ಕಾಶಿ ಜಗದ್ಗುರು ವಿಶ್ವಾರಾಧ್ಯ ಪೀಠಕ್ಕೆ ಕ್ರಿ. ಶ. ೫೭೪ರಲ್ಲಿ ಗಂಗಾ ನದಿಯ ದಂಡೆಯ ಮೇಲಿದ್ದ ಭೂಮಿಯ ಭಾಗವನ್ನು ಕಾಶಿರಾಜನಾದ ಜಯಾನಂದ ದೇವನು ಆಗಿನ ಕಾಲದ ಸಿಂಹಾಸ ನಾಧಿಪತಿಗಳಾದ ಮಲ್ಲಿಕಾರ್ಜುನ ಶಿವಾಚಾರ್ಯರಿಗೆ ದಾನ ಶಾಸನದಿಂದ ಕೊಟ್ಟಿದ್ದಾರೆ. ಹೀಗೆ ರೀವಾ, ಮೈಹರ, ಮೈಸೂರ ಮೊದಲಾದ ಹಿಂದು ಮಹಾ ರಾಜರೂ ಮತ್ತು ಹುಮಾಯೂನ, ಅಕಬರ, ಜಹಂಗೀರ, ಶಹಜಾನ್, ಔರಂಗಜೇಬ ಮೊದಲಾದ ಮುಸಲ್ಮಾನ ಚಕ್ರವರ್ತಿಗಳೂ ಕೊಟ್ಟ ದಾನ ಪತ್ರಗಳು ಈಗ್ಗೂ ಪೀಠದಲ್ಲಿವೆ. ಪರಮಶ್ರೀಯುರಾದ ಶ್ರೀಮಾನ್ ಜಿ. ಆರ್. ಜೋಯಿಸರ್. ಎಂ. ಎ. (ಆನರ್ಸ) ಎಫ್. ಆರ್. ಇ. ಎಸ್. ಇವರು ತಮ್ಮ "ಪೊಲಿಟಿಕ್ಸ ಫಿಲೊಸೊಫಿ ಆ್ಯಂಡ ಫ್ಯಾಂಟಾಸಿ" ಎಂಬ ಗ್ರಂಥದ ೧೬೦ನೇ ಪಾನಿನಲ್ಲಿ ಮತ್ತು ಉತ್ತರ ಹಿಂದುಸ್ತಾನದ ಕೈ. ರಾಮದಾಸಗೌಡಾ ಎಂ. ಎ. ಇವರು ತಮ್ಮ 'ಹಿಂದುತ್ವ' ಎಂಬ ಗ್ರಂಥದ ೬೯ನೇ ಪಾನಿನಲ್ಲಿ ಶ್ರೀ. ಪಂಚಾಚಾರ್ಯರ ಪ್ರಾಚೀನತ್ವದ ಬಗ್ಗೆ ಸ್ಪಷ್ಟೀಕರಿಸಿದ್ದಾರೆ.

ಇದೇ ರೀತಿಯಾಗಿ ಕೇದಾರ ಪೀಠಕ್ಕೆ ಜನಮೇಜಯರಾಯನು ಬಹು ಪ್ರಾಚೀನ ಕಾಲದಲ್ಲಿ ಅಂದರೆ ಸಾವಿರಾರು ವರ್ಷಗಳ ಪೂರ್ವದಲ್ಲಿ ದಾನವಾಗಿ ಕೊಟ್ಟ ಭೂಮಿಯಲ್ಲಿ ಒಂದು ಸಾವಿರದ ವರೆಗೆ ಗ್ರಾಮಗಳಿದ್ದು ಅವುಗಳಲ್ಲಿ ಬ್ರಿಟಿಶ್ ಸರಕಾರದವರು ಎಷ್ಟೋ ಗ್ರಾಮಗಳನ್ನು ವಶಪಡಿಸಿಕೊಂಡದ್ದರಿಂದ ಸದ್ಯಕ್ಕೆ ೧೪೩ ಗ್ರಾಮಗಳು ಈ ಪೀಠದ ಆಡಳಿತೆಯ ಕೆಳಗೆ ಇರುತ್ತವೆ. ಈ ಪೀಠದ ಅಧಿಪತಿಗಳಿಗೆ " ರಾವಲ್ " ಎಂಬ ಘನವಾದ ಪದವಿಯೂ ಇದೆ. ಅದರಂತೆ ಶ್ರೀಶೈಲ ಮತ್ತು ರಂಭಾಪುರಿ ಪೀಠಗಳಿಗೆ ಪ್ರಾಚೀನದ ಸಾಂಪ್ರ ದಾಯ ಪರಂಪರೆ ಇದೆ.

ವೀರಶೈವಾಚಾರ್ಯ 'ಮರುಳಾರಾಧ್ಯ' ಮತ್ತು ದೇವಕವಿಯ "ಮರುಳ ಸಿದ್ಧ" ಇವರ ಬಗ್ಗೆ ಶ್ರೀಶೈಲ ಸೂರ್ಯ ಸಿಂಹಾಸನಾಧೀಶ ಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳವರು ಮತ್ತು ಇತರ ವೀರಶೈವ ಪಂಡಿತರು ವಿಮರ್ಶಾತ್ಮಕ ಮತ್ತು ಸಂಶೋಧನಾತ್ಮಕ. ಲೇಖಗಳನ್ನು ಬರೆದು ವೀರಶೈವ ಸಮಾಜವೇ ಅ. ನ. ಕೃಷ್ಣರಾಯರ ಕೃತಿಯನ್ನು

ಹೇಗೆ ಪ್ರತಿಭಟಿಸಿದೆಯೆಂಬದನ್ನು ತೋರಿಸಿದ್ದಲ್ಲದೆ ದೇವ ಕವಿಯ ಕಾವ್ಯ ನ್ಯೂನತೆಗಳನ್ನು ಕೂಡ ಬಯಲಿಗಿಟ್ಟಿದ್ದಾಗಿದೆ. ಕೃಷ್ಣರಾಯರ ಪೀಠಿಕೆಯು ವೀರಶೈವ ಸಮಾಜಕ್ಕೆ ಒಂದು ಬಗೆಯಾಗಿ ಉಪಕಾರ ಮಾಡಿದೆಯೆಂದು ಹೇಳಬಹುದು. ಹದಿನಾರನೇ ಶತಮಾನದಲ್ಲಿ ತಲೆ ಎತ್ತಿದ ದೇವಕವಿಯ "ಮರುಳಸಿದ್ಧಕಾವ್ಯ" ವೆಂಬ ಕಲ್ಪನಾ ಸೃಷ್ಟಿಯ ಕೃತಿಯೊಂದರ ಮೇಲಿಂದ ಕೃಷ್ಣರಾಯರು ವೀರಶೈವ ಸದ್ಧರ್ಮ ಪೀಠಕ್ಕೆ ಕಪ್ಪು ಬಳಿಯುವ ಹವ್ಯಾಸವನ್ನು ಬಹು ಮುಕ್ತಸ್ಪದ್ದಿಗಿರಿಯಿಂದ ತೋರಿಸಿ ಸಮಾಜವನ್ನೇ ಅಲ್ಲೋಲಕಲ್ಲೋಲ ಮಾಡಿದ ಕೃತಿಗೆ ಸರಿಯಾದ ರೀತಿಯಲ್ಲಿ ಖಂಡನೆ ದೊರಕಿದೆ. ಸಾಹಿತ್ಯದ ಮರೆಯಲ್ಲಿ ಇತಿಹಾಸ ಸಂಶೋಧನೆಯು ಎಂದೂ ಮಾಯವಾಗಲಾರದು. ಅದು ತಕ್ಕ ರೀತಿಯಲ್ಲಿ ಬೆಳಕಿಗೆ ಬರಲೇ ಬೇಕು.

ಪೀಠ ಪರಂಪರೆ, ಧರ್ಮ ಸಂಸ್ಕೃತಿ, ಮತ್ತು ವೀರಶೈವರ ನಡವಳಿಕೆ ಇವುಗಳ ಶೃಂಖಲೆಗಳಿಂದ ಬಿಗಿದಾಗಿ ಹೆಣೆದ ವೀರಶೈವ ಪಂಚ ಧರ್ಮ ಪೀಠಗಳು ವಿಶೇಷತಃ ಉಜ್ಜಯಿನೀ ಸದ್ಧರ್ಮ ಪೀಠವು ಪರ್ವತದಂತೆ ಅಚಲವಾಗಿದ್ದು ಈ ಪ್ರಕಾರದ ಕೃಷ್ಣರಾಯರ ದೂಷಿತ ಹವೆಯಿಂದ ಸಡಿಲಾಗಲಾರದು. ಈ ಗುರು ಪೀಠಕ್ಕೆ ಪರಿಶುದ್ಧ ಚರಿತ್ರವಿದೆ. ಅಖಂಡ ಪರಂಪರೆ ಇದೆ. ಉಪನಿಷದಾಗಮ ಪುರಾಣೇತಿಹಾಸಗಳ ಅಡಿಗಲ್ಲಿದೆ.

ಕೃಷ್ಣರಾಯರ ಕಲಾಕೃತಿಯನ್ನು ಮತ್ತು ದೇವಕವಿಯ ಕಾವ್ಯಕತೆಯನ್ನು ಈ ಗ್ರಂಥದಲ್ಲಿ ವಿವಿಧ ರೀತಿಯಿಂದ ಚರ್ವಣ ಮಾಡಿದ್ದಾಗ್ಗೆ ನಾನೇಕೆ ಹೆಚ್ಚಾಗಿ ಅದರ ಗೋಜಿಗೆ ಹೋಗಲಿ !

ದೇವಕವಿಯ "ಮಾದಿಗ ಮರುಳಸಿದ್ಧನು" ಉಜ್ಜಯಿನಿ ಪೀಠಸ್ಥಾಪನಾಚಾರ್ಯ 'ಮರುಳಾರಾಧ್ಯ' ನಾಗಿರದೆ ಬೇರೊಬ್ಬ "ಮರುಳಸಿದ್ಧ" ಎಂಬ ಹೆಸರಿನ ಶಿವಶರಣನು ಎಂಬ ವಿಷಯವು ನಂದೀಶ ಕವಿಯ "ಮರುಳಾರಾಧ್ಯ ವಿಜಯ" ಕಾವ್ಯದಿಂದ ಸ್ಪಷ್ಟವಾಗುತ್ತದೆ. ಇದಲ್ಲದೆ ನಾಗಭೂಷಣ ಕವಿಯ "ಮರುಳಸಿದ್ಧೇಶ್ವರ ಸಾಂಗತ್ಯ"ದಲ್ಲಿಯಂತೂ ಮಾದಿಗ ಮರುಳಸಿದ್ಧನ ತಂದೆ ತಾಯಂದಿರಾದ ಕೂಚಿಮಾರ ಮತ್ತು ಆತನ ಹೆಂಡತಿಯ ಸುಳಿವೇ ಇರುವದಿಲ್ಲ. ಶಿಲಾದ ಸುಪ್ರಭೆಯರ ಹೆಸರೂ ಕೂಡ ಇಲ್ಲ. ಇದರ ವಿರುದ್ಧವಾಗಿ, ಮಾರಯ್ಯ ಸೊನ್ನಲೆಯರಿಗೆ ಅವರ ಭಕ್ತಿಗೆ ಮೆಚ್ಚಿ ಲೀಲಾಮಾತ್ರದಿಂದ ಅವರು ಮಲಗಿದಾಗ್ಗೆ ಮರುಳಸಿದ್ಧನು ಅವರ ನಡುವೆ ಪ್ರಕಟವಾದನೆಂದು ವರ್ಣನೆ ಇದೆ.

ಈ ಪ್ರಕಾರವಾಗಿ ಬೇರೆ ಬೇರೆ ಗ್ರಂಥಗಳು ಬೇರೆ ಬೇರೆಯಾಗಿ ಮರುಳಾರಾಧ್ಯ ಮತ್ತು ಮರುಳಸಿದ್ಧರನ್ನು ಚಿತ್ರಿಸುವಾಗ್ಗೆ ಕೃಷ್ಣರಾಯರು ಅನುಮಾನ, ಅಪಮಾನಗಳ ಸಮ್ಮಿಶ್ರ ಭಾವದ ಕುಂಚದಿಂದ ಮರುಳಸಿದ್ಧನ ಚಿತ್ರವನ್ನು ಬರೆದಿರಬಹುದೆಂದು ತಿಳಿಯಲಾಗಿದೆ.

ಈ ಕಾವ್ಯದಲ್ಲಿ "ಮರುಳಸಿದ್ಧನು" ವೀರಶೈವ ಗುರುಪೀಠ ಸ್ಥಾಪಕನಾದ ಬಗ್ಗೆ ಉಲ್ಲೇಖವಿಲ್ಲ. ವೀರಶೈವ ಗುರುತ್ವವನ್ನು ಹೊಂದಿದ ಬಗ್ಗೆ ಎಲ್ಲಿಯೂ ಬರೆದಿಲ್ಲ. ಹಾಗೇ ವೀರಶೈವ ಸಿದ್ಧಾಂತ ಬೋಧೆಯನ್ನು ಮಾಡಿದನೆಂದು ಹೇಳಿಲ್ಲ. ಕಾವ್ಯದ ಕಟ್ಟುಕತೆಯ ಮಾತನ್ನಿಟ್ಟುಕೊಂಡೇ ಹೇಳುವದಾದರೆ ಪವಾಡಗಳನ್ನು ಮಾಡಿ ತೋರಿಸಿದ, ಮಾದಿಗರ ಹೊಟ್ಟೆಯಲ್ಲಿ ಹುಟ್ಟಿದ ಮರುಳಸಿದ್ಧನೆಂಬ ಹೆಸರನ್ನಿಟ್ಟುಕೊಂಡ ಒಬ್ಬ ಸಿದ್ಧ ಪುರುಷನೆಂದು ಹೇಳಬಹುದು.

ವೀರಶೈವರ ಬಹು ಪ್ರಾಚೀನ ಸಂಪ್ರದಾಯ ಪರಂಪರೆ, ಪಂಚಧರ್ಮ ಪೀಠಗಳ ಹೊದಿಕೆ, ಅಷ್ಟಾವರಣ ಷಟ್ಸ್ಥಲವಿಚಾರ, ಪಂಚಪೀಠಗಳಿಗೆ ಅಂಟಿದ ಶಾಖಾ, ಸೂತ್ರ ಗೋತ್ರ ಪ್ರವರಾದಿಗಳು, ಪೀಠಾಚಾರ್ಯರಿಗೆ ಇದ್ದ ರೇಣುಕ, ದಾರುಕ, ವಿಶ್ವಕರ್ಣ, ಮುಂತಾದ ಋಷಿಯುಗದ ಹೆಸರು, ವೀರಶೈವರ ಪ್ರಮಾಣಧರ್ಮಗ್ರಂಥ, ಇವೆಲ್ಲವುಗಳನ್ನು ತುಸು ಹೊತ್ತು ಶುದ್ಧ ಮನಸ್ಸಿನಿಂದ ಸುದೀರ್ಘವಾಗಿ ವಿಚಾರ ಮಾಡಿದರೆ, ಬಸವಣ್ಣನವರ ಕಾಲದಲ್ಲಿ ವೀರಶೈವ ಮತದ ಮೂಲಾಚಾರ್ಯರು ಕಾಣಿಸಿಕೊಳ್ಳದೆ ಅದಕ್ಕೂ ಬಹಳ ವರ್ಷಗಳ ಪೂರ್ವದಲ್ಲಿ ಅಂದರೆ ಋಷಿಗಳ ಕಾಲದಲ್ಲಿ ಇರಬೇಕೆಂದೂ ಮತ್ತು ವೀರಶೈವ ಧರ್ಮದ ತಳಹದಿಯಾದ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ಆ ಕಾಲದಿಂದ ಅನೂಚಾನವಾಗಿ ಪ್ರತಿಪಾದಿಸಲ್ಪಟ್ಟಿರಬೇಕೆಂದೂ ಸಾಮಾನ್ಯ ಮತಿಗೂ ತೋಚುತ್ತದೆಂದು ಒತ್ತಿ ಹೇಳಬಹುದು.

ಆದ್ದರಿಂದ ತತ್ವಾನ್ವೇಷಿಗಳೂ ಸಂಶೋಧನಾಪರರೂ ಆದ ವಾಚಕರು ದೇಪಕವಿಯ "ಮರುಳಸಿದ್ಧ ಶಿವಶರಣನೇ" ವೀರಶೈವ ಮಠ ಸ್ಥಾಪನಾಚಾರ್ಯರಲ್ಲೊಬ್ಬರಾದ ಮರುಳಾರಾಧ್ಯ ಶಿವಾಚಾರ್ಯರೆಂದು ತಪ್ಪು ತಿಳುವಳಿಕೆಯನ್ನಿಟ್ಟುಕೊಳ್ಳದೆ ಉಜ್ಜಯಿನಿ ಸದ್ಧರ್ಮಪೀಠ ಪರಂಪರೆಯಲ್ಲಿ ಅಕಳಂಕ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡು ನಡೆಯುವದೇ ಧರ್ಮ ನೀತಿಯಾಗಿದೆಯಲ್ಲವೇ !

# ಹಿನ್ನೆಲೆ

(೧) ಶ್ರೀ ಗಿರಿಮಲ್ಲೇಶನ ಕೃಪೆಯಿಂದ ಶ್ರೀ ಮರುಳಸಿದ್ಧಾಂಕವನ್ನು ಆತನ ಭಕ್ತವೃಂದದಲ್ಲಿ ಬಿತ್ತರಿಸುವ ಸುಸಮಯವೊದಗಿದುದಕ್ಕಾಗಿ ನಮಗೆ ಅತ್ಯಾನಂದವಾಗಿದೆ. ಆದರೆ, ತತ್ಪೂರ್ವದಲ್ಲಿ ಈ ಕಾರ್ಯಕ್ಕೊದಗಿದ ವಿಘ್ನ ಪರಂಪರೆಯುನ್ನು ಹೇಳಬೇಕೆಂದೆನಿಸುತ್ತಿದೆ.

(೨) ಮರುಳಸಿದ್ಧಾಂಕದ ಸಿದ್ಧತೆಯ ಬಗೆಗೆ ನಾವು ಪಟ್ಟ ಶ್ರಮವನ್ನೆಲ್ಲ ನಮ್ಮ ಸಂಪಾದಕೀಯ ಲೇಖನದಲ್ಲಿ ಹೇಳಿದ್ದೇವೆ. ಸಾಹಿತ್ಯವೆಲ್ಲ ಸಿದ್ಧವಾದ ಮೇಲೆ, ಮುದ್ರಣ ಕಾರ್ಯವನ್ನು ಕೈಕೊಳ್ಳುವಾಗ ನಮ್ಮ ಮನದೆಣಿಕೆಯೆಲ್ಲ ಮನಸಿನ ಮುಂಡಿಗೆಯಾಗುವ ಹೊತ್ತು ಬಂದಿತು. ತಂಡುಲವಿಲ್ಲದೆ ಸಮಾರಂಭ ಸಾಗುವುದು ಹೇಗೆ ? ಶ್ರೀಶೈಲದ ಶ್ರೀಮದ್ಗಿರಿರಾಜ ಸೂರ್ಯ ಸಿಂಹಾಸನಾಧೀಶ್ವರ ೧೦೮ ಜಗದ್ಗುರು ಶ್ರೀ ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳವರ ದಿವ್ಯಸನ್ನಿಧಿಯಲ್ಲಿ ನಮ್ಮ ಅಂತರಂಗವನ್ನು ಅರಿಕೆಮಾಡಿಕೊಂಡೆವು. ಅವರು ಕಾಲಕಾಲಕ್ಕೆ ಧನಸಹಾಯ ಮಾಡುವುದಾಗಿ ಶ್ರೀಮುಖದಿಂದ ಅಪ್ಪಣೆ ಕೊಡಿಸಿದರು. ಅವರ ಅನುಗ್ರಹದಿಂದಲೇ ಈ ಮಹಾಕಾರ್ಯವನ್ನು ಕೈಕೊಳ್ಳುವಂತಾಯಿತು ; ಕೊನೆಮುಟ್ಟಿಸುವಂತಾಯಿತು. ಅದಕ್ಕಾಗಿ ಆ ಮಹಾಸ್ವಾಮಿಗಳವರ ಪಾದಾರವಿಂದಗಳನ್ನು ಚಿರಂತನವಾಗಿ ಸ್ಮರಿಸುತ್ತಿದ್ದೇವೆ

(೩) ಅಚ್ಚಿನ ಕಾರ್ಯ ಆರಂಭವಾದ ಕೂಡಲೆ, ಇನ್ನು ನಾಲ್ಕು ತಿಂಗಳುಗಳಲ್ಲಿ ಪುಸ್ತಕ ಬೈಲಿಗೆ ಬರುವುದೆಂದು ಹುಲುಬಿಸಿದೆವು. ಭಕ್ತರೂ-ಆಸ್ತಿಕರೂ-ಸಹೃದಯರೂ ಚಾತಕ ಪಕ್ಷಿಯಂತೆ ಅದರ ದಾರಿಯನ್ನು ನೋಡತೊಡಗಿದರು· ಆದರೆ ಆಗಂತುಕವಾದ ಅಸಂಖ್ಯ ಕಷ್ಟನಷ್ಟಗಳಿಂದಾಗಿ ಕಾರ್ಯ ನೆನೆಗುದಿಗೆ ಬೀಳತೊಡಗಿತು. ನಮ್ಮ ದುರ್ದೈವದಿಂದಾಗಿ ಮಹಾಸ್ವಾಮಿಗಳವರಿಗೂ ಕೆಟ್ಟ ಹೆಸರು ಬರುವಂತಾಯಿತು. ಆದರೂ ಅವರ ಅನುಗ್ರಹದಿಂದಲೇ ಕಷ್ಟ ಪರಂಪರೆಯುನ್ನು ದಾಟಿದೆವು; Better late than never ಎಂದು ಹೇಳುವ ಹಾಗೆ, ತಡವಾಗಿಯಾದರೂ ಕಾರ್ಯವನ್ನು ಕೊನೆಗಾಣಿಸಿದುದು ಸಾಹಸವೇ ಎನಬೇಕಾಗಿದೆ. ಆದರೂ ಹುಲುಬಿಸಿದ ಹೊತ್ತಿಗೆ ಸರಿಯಾಗಿ ಹೊತ್ತಿಗೆಯುನ್ನು ಹೊರಡಿಸದಿದ್ದುದಕ್ಕೆ ವಾಚಕ ಮಹಾಶಯರ ಕ್ಷಮೆಯುನ್ನು ಕೋರುತ್ತೇವೆ.

(೪) ಈ ಮರುಳಸಿದ್ಧಾಂಕದಲ್ಲಿ ಧಾರ್ಮಿಕ-ಸಾಹಿತ್ಯ-ಲೌಕಿಕ-ವಿಚಾರಗಳನ್ನು ಕುರಿತು ಆಳವಾದ ಅನುಭವ-ವಿದ್ವತ್ಪೂರ್ವ ಬರೆಹಗಳಿವೆಯುಲ್ಲದೆ, ಭಕ್ತವೃಂದದ ಸೌಕರ್ಯಕ್ಕಾಗಿ ಮರುಳಾರಾಧ್ಯ ವಿಜಯ ಕಾವ್ಯವನ್ನು ಗದ್ಯದಲ್ಲಿ ಪರಿ

ವರ್ತಿಸಿದೆ. ಸಾಧ್ಯವಿದ್ದ ಮಟ್ಟಿಗೂ ಆವಶ್ಯಕವಾದ ಚಿತ್ರಗಳನ್ನು ಸೇರಿಸಿದ್ದೇವೆ. ಪುಸ್ತಕದ ಅಚ್ಚುಕಟ್ಟುಗಳು ಅಂದವಾಗುವಂತೆ ಒಳ್ಳೆಯ ಸಾಧನ—ಸಲಕರಣಗಳನ್ನೇ ಉಪಯೋಗಿಸಲಾಗಿದೆ. ಇಷ್ಟಾದರೂ ಗ್ರಾಹಕರಿಗೆ ಭಾರವಾಗಲಾರದೆಂದು ನಾಲ್ಕು ರೂಪಾಯಿಗಳನ್ನು ಮಾತ್ರ ಬೆಲೆ ಇರಿಸಿದ್ದೇವೆ. ಧಾರ್ಮಿಕ ಗ್ರಂಥಗಳ ದೃಷ್ಟಿಯಿಂದ ಈ ಬೆಲೆ ಹೆಚ್ಚಾಗಲಾರದೆಂದು ನಮ್ಮ ಭಾವನೆ. ಸರ್ವಮಹನೀಯರೂ ಸಕ್ರಿಯವಾಗಿ ಸಹಕರಿಸುವರೆಂದು ನಂಬಿರುವೆವು.

(೫) ಶ್ರೀ ಮರುಳಸಿದ್ಧಾಂಕದ ಸರ್ವಾಂಗ ಸೌಂದರ್ಯಕ್ಕೆ ತಕ್ಕ ಬರೆಹಗಳನ್ನು ಬರೆದುಕೊಟ್ಟ ವಿದ್ವನ್ಮಣಿಗಳಿಗೂ, ಸಮಯೋಚಿತವಾದ ಐತಿಹಾಸಿಕ ಸತ್ಯ ಸಂಶೋಧನೆಯ ದೃಷ್ಟಿಯಿಂದ ಮುನ್ನುಡಿಯನ್ನು ಬರೆದುಕೊಟ್ಟ ಪ್ರೊ. ಶಿ. ಶಿ. ಬಸವನಾಳ ಎಮ್. ಎ. ಅವರಿಗೂ, ಸದಭಿಪ್ರಾಯವನ್ನಿತ್ತ ವೇ. ಮೂ. ಪಿ. ಆಯ್. ಹಿರೇಮಠ ವಕೀಲರು ಹುಬ್ಬಳ್ಳಿ ಅವರಿಗೂ, ನಮ್ಮೊಡನೆ ಬಂದು ಅಲ್ಲಲ್ಲಿಯ ಆವಶ್ಯಕ ದೃಶ್ಯಗಳ ಚಿತ್ರ (ಫೋಟೊ) ಗಳನ್ನು ತೆಗೆದುಕೊಟ್ಟಿದ್ದಕ್ಕಾಗಿ ಶ್ರೀ ಪತಂಗೆ ಫೋಟೋಗ್ರಾಫರ ಬ್ಯಾಡಗಿ ಅವರಿಗೂ, ಅಚ್ಚುಪಡಿಗಳನ್ನು ಅಂದವಾಗಿ ಮಾಡಿಕೊಟ್ಟ ಶ್ರೀ ಫಾಟಕ ಹುಬ್ಬಳ್ಳಿ ಅವರಿಗೂ, ಮುದ್ರಣ ಕಾರ್ಯದಲ್ಲಿ ಸಾಧ್ಯವಿದ್ದ ಮಟ್ಟಿಗೂ ನಮ್ಮೊಡನೆ ಸಹಕರಿಸಿ ಕಾವ್ಯವನ್ನು ಕೊನೆಗಾಣಿಸಿಕೊಟ್ಟ ಧಾರವಾಡದ ರವೀಂದ್ರ ಮುದ್ರಣಾಲಯದ ಒಡೆಯರಿಗೂ ಧನ್ಯವಾದಗಳು

ಚಿತ್ರಗಳನ್ನು ಒದಗಿಸುವ ಕಾರ್ಯದಲ್ಲಿ ಅನುಗ್ರಹ ಮಾಡಿದ ಉಜ್ಜಯಿನೀ ಸದ್ಧರ್ಮ ಪೀಠದ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳಿಗೂ, ಹಸುಮಕ್ಕಳನ್ನು ಎತ್ತಿಕೊಂಡು ನಡೆಸುವಂತೆ ಹೆಜ್ಜೆ ಹೆಜ್ಜೆಗೂ ನಮ್ಮನ್ನು ಈ ಕಾರ್ಯದಲ್ಲಿ ಮುನ್ನಡೆಸಿದ ಶ್ರೀಶೈಲ ಶ್ರೀಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳವರಿಗೂ ಮತ್ತೆ ಮತ್ತೆ ನಮ್ಮ ಕೃತಜ್ಞತಾಪೂರ್ವಕವಾದ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಸಂಪಾದಕರು.



# ಅ ರ್ಪ ಣ



ಶ್ರೀ ಮದ್ವಾರಾಣಸೀ, ಜ್ಞಾನಸಿಂಹಾಸನಾಧೀಶ್ವರ, ಶ್ರೀ ೧೦೮ ಜಗದ್ಗುರು,

ಲಿಂಗೈಕ್ಯ ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳವರ

**ದಿವ್ಯಾತ್ಮಜ್ಯೋತಿಗೆ**

**ಭಕ್ತಿಪೂರ್ವಕವಾಗಿ ಸಮರ್ಪಿತವಾಗಿದೆ.**

— **ಸಂಪಾದಕರು.**

# ಶಾರದೆಯ ಅಪರಾವತಾರಿಯಾಗಿ ಮೆರೆದ
# ಕೈ। ಕಾಶಿಯ ಜಗದ್ಗುರುಗಳ ಪರಿಚಯ

ಇವರೊಮ್ಮೆ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯರ ಪೂರ್ವಾಶ್ರಮದಲ್ಲಿ ಸಹಾಧ್ಯಾಯಿ ಮಿತ್ರರಾಗಿದ್ದರು. ಆ ಬಳಿಕ ತಾ॥ ೭-೭-೪೦ರಲ್ಲಿ ಸೆರವೇರಿದ ಶ್ರೀಶೈಲಪೀಠದ ಅಧಿಕಾರ ಕಾಲದಲ್ಲಿ ವೈದಿಕರಾಗಿದ್ದರು. ಅನಂತರ ಕಾಶೀ ಪೀಠದ ಅಧಿಪತಿಗಳಾಗಿ ಕೆಲ ದಿನಗಳಲ್ಲೇ ಆ ಪೀಠವನ್ನು ಮಹೋನ್ನತ ಸ್ಥಿತಿಗೆ ತಂದರು ಅವರೇ ಮೊದಲಿನ ಪಂಡಿತ ಕುಲತಿಲಕ ಚಿ। ಮ। ವೀರಭದ್ರ ಶಾಸ್ತ್ರಿಗಳವರು (!) ಅವರೇ ಶಿವೈಕ್ಯರಾದ ಕಾಶೀ ವಿಶ್ವಾರಾಧ್ಯ ಸಿಂಹಾಸನಾಧಿಪತಿಗಳಾದ ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳವರು. ಅವರ ವಿದ್ವತ್ತನ್ನರಿಯದ ಪ್ರಪಂಚವೇ ಇಲ್ಲ !

ಅವರು ತಾ॥ ೧೮-೩-೪೭ರಲ್ಲಿ ೩೩೧ರ ನಂಬರಿನ ಶ್ರೀಮುಖದಲ್ಲಿ ಶ್ರೀಶೈಲ ಜಗದ್ಗುರುಗಳವರನ್ನು ಕುರಿತು ಮರುಳ ಸಿದ್ಧಾಂಕದ ಸಲುವಾಗಿ ಹೀಗೆ ಅಪ್ಪಣೆ ಕೊಡಿಸಿರುವರು.—"ಶ್ರೀ ಮಹಾಪಾದದಿಂದ ಮರುಳಾರಾಧ್ಯ ವಿಜಯ ಕಾವ್ಯವೂ ಮರುಳ ಸಿದ್ಧಾಂಕದ ಲೇಖಗಳೂ ರಜಿಷ್ಟರ್ ಪಾರ್ಸಲಿನಿಂದ ಬಂದಿವೆ ಸನ್ಮಾನದಿಂದ ಇದನ್ನು ಸ್ವೀಕರಿಸಿದೆ. ಶ್ರೀ ದಾರುಕ ಮರುಳಸಿದ್ಧರ ಬಗ್ಗೆ ಇಷ್ಟು ಶ್ರದ್ಧೆ ವಹಿಸಿ ಕಾರ್ಯ ನಡೆಸುತ್ತಿರುವುದು ವಿಶೇಷ ಪ್ರಶಸ್ತವೇ ಸರಿ. ಅಪ್ಪಣೆಯಂತೆ ಸಾಧ್ಯವಾದಷ್ಟು ಬೇಗನೆ ಎಲ್ಲ ಸರಿ ನೋಡಿ ಸಮರ್ಪಿಸಲಾಗುವುದು."

ಹೀಗೆ ಅಪ್ಪಣೆ ಕೊಡಿಸಿದ ಆ ಮಹಾವ್ಯಕ್ತಿ ವೀರಶೈವ ಸಮಾಜದ ದುರ್ದೈವದಿಂದ ಅಥವಾ ದಕ್ಷಿಣ ದೇಶದ ವಿದ್ವತ್ಸಮಾಜದ ದುರ್ಭಾಗ್ಯದಿಂದ ಕಣ್ಮರೆಯಾಯಿತು. ವೀರಶೈವ ಧಾರ್ಮಿಕ ಸಾಹಿತ್ಯ ಪ್ರಚಾರಕ್ಕೆ ತುಂಬಿ ಬಾರದ ಹಾನಿಯುಂಟಾಯಿತು.

ಮರುಳ ಸಿದ್ಧಾಂಕವು ಪ್ರಕಟವಾಗಿರುವ ಈ ಸಮಯದಲ್ಲಿ ಆ ಮಹಾತ್ಮರು ನಮ್ಮ ಕಣ್ಮುಂದಿಲ್ಲ. ಆದರೆ ಅವರು ಪ್ರಪಂಚೋದ್ಧಾರಕ್ಕೆ ಸಲ್ಲಿಸಿರುವ ಸೇವೆಯಿಂದ ಅಮೃತರೆಂದೇ ನಾವು ಭಾವಿಸುತ್ತೇವೆ

ಈ ಅಂಕವು ಅಚ್ಚಾಗುವುದಕ್ಕೆ ಮೊದಲೇ ಅವರದನ್ನು ಸನ್ಮಾನದಿಂದ ಸ್ವೀಕರಿಸಿರುವುದಾಗಿ ಒಪ್ಪಿರುವುದರಿಂದ ಈ ಅಂಕವನ್ನು ಅವರ ಅಮೃತ ಆತ್ಮಕ್ಕೆ ವಿದ್ಯಾನಿಧಿಯಾದ ಅವರ ಅಶರೀರ ವಾಣಿಗೆ ಸಾದರ ಸದ್ಭಕ್ತಿಗಳಿಂದ ಅರ್ಪಿಸಿರುವೆವು.

ಮರುಳ ಸಿದ್ಧಾಂಕದ
ವಿನೀತ ಸಂಪಾದಕರು.

# ಪರಿವಿಡಿ







ಉಜ್ಜಯಿನಿ: ಮರುಳಸಿದ್ಧೇಶ್ವರ ದೇವಾಲಯದ ಮಹಾದ್ವಾರ

# ಶ್ರೀ ಮರುಳಸಿದ್ಧಾಂಕ

## ಸಂಪಾದಕೀಯ

ಶ್ರೀಶೈಲೇಶ್ವರ ಮಲ್ಲಿಕಾರ್ಜುನನ ಕರುಣಾಕಟಾಕ್ಷ ಬಲದಿಂದ, ಅಸಾಧ್ಯವೆನಿಸಿದ್ದ ಕಾರ್ಯವನ್ನು ಸುಸಾಧ್ಯಗೊಳಿಸಿಕೊಂಡು **ಶ್ರೀ ಮರುಳಾರಾಧ್ಯ** ಹಾಗೂ **ಮರುಳಸಿದ್ಧರ** ವಿಷಯವಾಗಿ ವಿಸ್ತೃತವಾದ ಸಂಪಾದಕೀಯವನ್ನು ವಾಚಕರ ಮುಂದಿಡಲು ಸಂತೋಷಿಸುತ್ತೇವೆ.

**ಶ್ರೀ ಕೇದಾರ-ಕಾಶಿ-ಶ್ರೀಶೈಲ-ಉಜ್ಜಯಿನಿ-ರಂಭಾಪುರೀ** ಕ್ಷೇತ್ರಗಳಲ್ಲಿ ಅತಿ ಪ್ರಾಚೀನಕಾಲದಿಂದಲೂ ಪ್ರಸಿದ್ಧವಾಗಿ ಮೆರೆಯುತ್ತ ಬಂದಿರುವ **ಪಂಚ ಪೀಠಗಳ** ಹಾಗೂ ಪೀಠಾಚಾರ್ಯರಾದ **ಶ್ರೀ ಜಗದ್ಗುರು ಪಂಚಾಚಾರ್ಯರ** ಹೆಸರುಗಳನ್ನು ಪ್ರಪಂಚದಲ್ಲಿ ಸರ್ವರೂ ಕೇಳುತ್ತ ಬಂದಿದ್ದಾರೆ. ವೇದಾಗಮ ಸ್ಮೃತಿ ಪುರಾಣಗೋಚರವಾದ ಈ ಮಹಾಚಾರ್ಯರ ಮಹಿಮಾತಿಶಯಗಳನ್ನು ಇತ್ತಲಾಗಿ ಅನೇಕರು ಇತಿಹಾಸದ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸಲು ಯತ್ನಿಸಿದ್ದಾರೆ. ಈಗಲೂ ಪ್ರಯತ್ನ ಸಾಗಿಯೇ ಇದೆ. ಈ ವಿಧವಾದ ಪರೀಕ್ಷಣವು ಸ್ತುತ್ಯವಾದರೂ ಕೆಲವರ ದೃಷ್ಟಿಕೋನದಲ್ಲಿ ವೈಷಮ್ಯಾಂಧತೆಯು ಅಂಟಿರುವುದರಿಂದ ಅವರು ಮಾಡುತ್ತಿರುವ ಸಾಹಿತ್ಯ ಶೋಧನೆಯು ಜನರ ಭಕ್ತಿಶೂನ್ಯತೆಗೂ ಅನಾಚಾರವರ್ತನೆಗೂ ನಿಂದನೆಗೂ ಕಾರಣವಾಗುತ್ತಿದೆ.

ಪರಮತಗಳ ಅಭಿವೃದ್ಧಿಯನ್ನು ತ್ರಿಕರಣದಲ್ಲಿಯೂ ಸಹಿಸದ ಕೆಲ ಇತಿಹಾಸಕಾರರು ತಮ್ಮ ಲೆಕ್ಕಣಿಕೆಯಿಂದ ಮಾಡಿರುವ ಅನ್ಯಾಯವು ಪ್ರಪಂಚವೇ ಒಂದು ಕಡೆಯಿಂದ ಪ್ರಳಯವಾದರೂ ಮಾಸದ ಹಾಗೆ ಉಳಿದಿದೆ. ಈ ಕಲಂಕವನ್ನು ಯಾವ ಈಶ್ವರನ ಅವತಾರವು ನಿರ್ಮೂಲಗೊಳಿಸುವುದೋ ತಿಳಿಯದಾಗಿದೆ. ಜಗತ್ತಿನಲ್ಲಿ ಪ್ರಚಾರದಲ್ಲಿರುವ **ಹಿಂದೂ-ಬೌದ್ಧ-ಮಹಮ್ಮದೀಯ-ಕ್ರೈಸ್ತ** ಧರ್ಮಗಳು ತಮ್ಮ ತಮ್ಮ ಅರಸೊತ್ತಿಗೆಯಲ್ಲಿ ಸ್ವಕೀಯ ಧರ್ಮ ಪ್ರಚಾರಗಳನ್ನು ಮಾಡುವ ರೀತಿಯೇ ಒಂದು ವಿಧವಾಗಿದ್ದರೆ ಹಿಂದು-ಹಿಂದುಗಳೇ ತಮತಮಗೆ ಮೀಸಲಾಗಿರುವ ಪಂಗಡ

ಗಳಲ್ಲಿ ಆರ್ಯ-ಅನಾರ್ಯ, ವೈದಿಕ-ಅವೈದಿಕ ಭಾವನೆಗಳನ್ನು ಮೂಡಿಸಿ ಕೊಂಡು ತಿಕ್ಕಾಡಿರುವುದನ್ನು ನೋಡಿದರೆ ಅದು ವಿಶಾಲವಾದ ಹಿಂದೂ ಧರ್ಮಕ್ಕೇ ಕಲಂಕ ಪ್ರಾಯವಾಗಿದೆ ಎಂದು ಹೇಳಬಹುದು. ವಿಶ್ವ ವೇದಾಂತವನ್ನಾಶ್ರಿತ ಪ್ರಾಚೀನ ಕಾಲದ ಅನೇಕ ಮಹರ್ಷಿಗಳು ತಾತ್ವಿಕ ಸರಣಿಯಲ್ಲಿ ಸರ್ವಧರ್ಮಗಳ ಸಮತೆಯನ್ನು ಸಾರಿದ್ದರೂ ಕಾರ್ಮಿಕ ಜಾತೀಯತೆಯ ಭೂತಾವಿಷ್ಟರು ವಿಶಾಲವಾದ ತತ್ತ್ವ ಶಾಸ್ತ್ರವನ್ನೂ ಜಾತಿ ಶ್ರೇಷ್ಠತೆಯ ಕಾರ್ಯದಲ್ಲಿ ಉಪಯೋಗಿಸಿಕೊಂಡು ಅವುಗಳನ್ನು ಕಲಂಕ ಗೊಳಿಸಿದ್ದಾರೆ. ಈ ವಿಧವಾದ ವಾದ-ವಿವಾದಗಳನ್ನು ಎಲ್ಲಾ ಭಾಷೆಯ ಸಾಹಿತ್ಯದಲ್ಲಿಯೂ ಕಾಣಬಹುದಾಗಿದೆ.

ದೇಶ-ವಿದೇಶಗಳಲ್ಲಿಯಂತೆ ನಮ್ಮ ಕನ್ನಡ ನಾಡಿನಲ್ಲಿಯೂ ವೀರಶೈವ-ಜೈನ-ಸ್ಮಾರ್ತ-ವೈಷ್ಣವ ಮೊದಲಾದ ಪಂಥದವರಿಗೆ ಕಾಲಕಾಲಕ್ಕೆ ವಿತಂಡ ವಾದಗಳು ನಡೆದಂತೆಯೂ ಅವರು ತಮ್ಮ ಅರಸರ ಅಥವಾ ಧರ್ಮ ಗುರು ಗಳ ಮುಖೇನ ತಮಗಾಗದ ಧರ್ಮದವರನ್ನು ಹತ್ತಿಕ್ಕಿರುವಂತೆಯೂ ಅಥವಾ ಮತಾಂತರಗೊಳಿಸಿರುವಂತೆಯೂ ಕಾವ್ಯಗಳಿಂದ ಕಂಡು ಬರುತ್ತದೆ. ಸರ್ವ ಮತದವರೂ ಐಕ್ಯದಿಂದ ನಡೆದುಕೊಳ್ಳಬೇಕಾಗಿರುವ ಈ ಸಮಯ ದಲ್ಲಿಯೂ ಆಯಾ ಪಂಥದವರು ಮತ್ತೊಬ್ಬ ಪಂಥದವರನ್ನು ಅನೇಕ ಮಾರ್ಗಗಳಲ್ಲಿ ಹಿಂದೊತ್ತಬೇಕೆಂದು ಹವಣಿಸುತ್ತಿರುವುದು ಖಂಡನೀಯ ವೆಂದು ಎಲ್ಲರೂ ಒಪ್ಪುವುದಾದರೆ ನಾನೀಗ ಹೂಡಿರುವ ಮಹೋದ್ಯಮವು ಸ್ತುತ್ಯವಾದುದೆಂದು ನಂಬುತ್ತೇನೆ.

**ವೀರಶೈವ ಮತವು ಶಿವಲಿಂಗಧಾರಣೆಯೇ ಪ್ರಧಾನವಾಗುಳ್ಳುದಾಗಿ ಇತರ ವೈದಿಕ ಮತಗಳಲ್ಲಿ ಅಗ್ರಸ್ಥಾನವನ್ನು ಹೊಂದಿದೆ** ಎಂಬುದು ವೀರಶೈವ ಭಾಷ್ಯಾದಿಗಳಿಂದ ಸ್ಪಷ್ಟವಾಗಿ ತಿಳಿಯುತ್ತಿದೆ. ಇಂತಹ ಪವಿತ್ರವಾದ ಮತ ವನ್ನು ಸಮಾನಸ್ಕಂಧರಾದ ಪರಮತದ ನೇವರರು ಕೆಲವರು ಅವೈದಿಕಾ ರೋಪಣೆಯಿಂದ ಹಳಿದಿರುವುದೂ ಹಳಿಯುತ್ತಿರುವುದೂ ಸ್ವಹಸ್ತದಿಂದ ಸ್ವಕಪೋಲತಾಡನೆಯನ್ನು ಮಾಡಿಕೊಂಡಂತಾಗಿದೆ ಎಂದು ವಿವರಿಸಿದರೆ ಅನ್ಯಾಯವಾಗಲಾರದು. ವೇದವು ಅಪೌರುಷೇಯ-ಪರಮಾತ್ಮನ ವಾಣಿ-ಯಾಗಿರುವುದರಿಂದ ಪರಮಾತ್ಮನ ಮಕ್ಕಳಾದ ಎಲ್ಲಾ ಮಾನವರೂ ವೈದಿಕ ರೆಂದು ತತ್ತ್ವಶಾಸ್ತ್ರವು ಸಾರುತ್ತಿದೆ. ಹಿಂದಣ ಋಷಿ-ರಾಜ-ಸ್ತ್ರೀಪುರುಷರ

ುವನ್ನು ವಿವೇಚಿಸಿದರೆ ವೈದಿಕತ್ವದ ವ್ಯಾಪಕತೆಯು ಎಲ್ಲರನ್ನೂ ದಂಗು
ಗುವಂತಿದೆ. ಅಸ್ತು !

**ವೀರಶೈವ ಮತದ ಮೂಲ ಗುರುಗಳ ಹಾಗೂ ಶಿಷ್ಯರ ಉತ್ಪತ್ತಿಯು ್ರಕೃತ ಶಿವನ ಇಚ್ಛಾಮಾತ್ರದಿಂದಾಯಿತೆಂದು ಶಿವಸಿದ್ಧಾಂತವು ಸಾರು**

ಆದುದರಿಂದ ಮೂಲ ಪಂಚಾಚಾರ್ಯ ಗುರುಗಳೂ ಅವರ ರೂ ಅವರಷ್ಟೇ ಪ್ರಾಚೀನರೆಂದು ಶಿವಾಗಮ ವಾಣಿಯಿಂದ ನಿರ್ಧಾರ ದೆ. ಶಿವಲೋಕದ ಈ ಅಪ್ರಾಕೃತ ವೀರಶೈವ ತತ್ತ್ವವು ಜಗತ್ತಿನಲ್ಲಿ ಗೆ ಬಂದ ಕಾಲ ಆದಿಯುಗಾರಂಭ ಕಾಲವೆಂದು ಸ್ಥೂಲವಾಗಿ ಸರ್ವ ಶಾಸ್ತ್ರವೇತ್ತರೂ ತಿಳಿಯುವಂತಿದೆ. ಆದರೆ ಲಿಪಿಯುಗವು ಪ್ರಾರಂಭವಾದ ಕ ಈ ವೀರಶೈವವನ್ನು ಜಗತ್ತಿನಲ್ಲಿ ಮೊದಲು ಅಂದು ಊರಿದವರಾರು, ವಿಚಾರವಾಗಿ ಶಾಸನಕಾರರು ಅಲ್ಲಲ್ಲಿಯೇ ಸ್ಮಾರಕಗಳನ್ನು ಮಾಡಿದ್ದರೆ ಶೈವ ಸಂಶೋಧನೆಯ ವಿಷಯದಲ್ಲಿ ಇಂದಿನ ಇತಿಹಾಸಕಾರರಿಗೆ ಬಹಳ ಕೂಲವಾಗಬಹುದಿತ್ತು. ಅಥವಾ ಇಂತಹ ಸಂಶೋಧನೆ ನಡೆಯು ದೆಂದು ಹಿಂದಣ ಶಾಸನಕಾರರು ಊಹಿಸಿರಲಿಕ್ಕಿಲ್ಲ ತಾನೆ? ಕಸದಿಂದ ತೆಗೆಯುವ ಈಗಿನ ವಿಜ್ಞಾನದಲ್ಲಿ ಸಿಕ್ಕ ಅಲ್ಪಸ್ವಲ್ಪ ಸಾಹಿತ್ಯದಿಂದಲೇ ಪರ್ವತದಷ್ಟು ಊಹೆಗಳನ್ನು ಕಟ್ಟುವುದೂ ಅಥವಾ ಯಾವುದೊಂದು ುದ ಬಗ್ಗೆ ಪೂರ್ಣ ಪರಿಶೀಲನೆ ಮಾಡಲು ಅನುಕೂಲವಿದ್ದರೂ ವಸರದಿಂದ "ಇದಮಿತ್ಥಮೇವ" ಎಂದು ನಿರ್ಣಯ ಹೇಳುವುದೂ ತ ಅಸಹಿಷ್ಣುತೆಯೆಂದು ಬೇರೆ ಹೇಳುವುದೇ ಬೇಕಿಲ್ಲ.

ಜಗದ್ಗುರು ಪಂಚಾಚಾರ್ಯರ ಲೀಲೆ ಮತ್ತು ಅವರ ಕಾಲಮಾನ ರವಾಗಿ ಪ್ರಾಚೀನ ಪಂಡಿತರಿಂದ ಹಿಡಿದು ಆಧುನಿಕ ಪಂಡಿತರವರೆಗೆ ಭಿಪ್ರಾಯಗಳು ಇರುವುದು ಕಂಡು ಬರುತ್ತಿದೆ. **ರಾಮಕಾಲದಿಂದ ಣ್ಣನ ಕಾಲದವರೆಗೆ ಈ ಆಚಾರ್ಯ ಪಂಚಕದ ಲೀಲಾವಳಿಯು ು ಬಂದಿರುವಂತೆ ಹೇರಳವಾಗಿ ಆಧಾರಗಳು ದೊರೆಯುತ್ತಿವೆ.** ಆದ ಲ ಪಂಚಾಚಾರ್ಯರೇ ಇಷ್ಟು ದೀರ್ಘಕಾಲ ಭೂಖಂಡಗಳಲ್ಲಿ ಮಹಿಮೆ ಷ್ಟು ನಡೆಯಿಸಿದರೆಂದು ಐತಿಹಾಸಿಕ ಮಾರ್ಗದಿಂದ ನಂಬಲು ಸಾಧ್ಯವಿಲ್ಲ. ದರಿಂದಲೇ ಇತಿಹಾಸ ಶೋಧನೆಯ ಅವಶ್ಯಕತೆಯು ಆಧುನಿಕ ಂಸರೆಲ್ಲರಲ್ಲಿಯೂ ತಲೆದೋರಿತು. ಅದರ ಫಲವಾಗಿ ಕಾಲಕಾಲಕ್ಕೆ ಪಂಚಪೀಠಗಳಲ್ಲಿ ಒಂದೇ ಹೆಸರಿನ ಬೇರೆಬೇರೆ ಗುರುಗಳು ನೆಲೆಸಿದ್ದ

ರೆಂಬುದು ನಿರ್ಣಯವಾಗಹತ್ತಿ ಐತಿಹಾಸಿಕರಿಗೆ ಜಗದ್ಗುರು ಪಂಚಪೀಠಗಳ ವಿಷಯದ ಭಕ್ತಿ ವಿಶ್ವಾಸಗಳು ನೆಲೆಸುವಂತಾಗಿರುವುದು ಸಂತೋಷಕರವಾದ ಸಂಗತಿ.

ಜಗದ್ಗುರು ಪಂಚಾಚಾರ್ಯ ಪೀಠಗಳ ಗುರುಪರಂಪರೆಯು ಇಂದಿನ ವರೆಗೂ ಓತಪ್ರೋತವಾಗಿ ಸಾಗಿಬಂದಿರುವುದು ಸರ್ವರಿಗೂ ಪ್ರತ್ಯಕ್ಷ ವಾಗಿಯೇ ಇದೆ. ಆದರೆ ಈ ಮಹಿಮರ ಸಮಗ್ರ ವಿಷಯಗಳನ್ನು ನಿರೂಪಿಸುವ ಒಂದು ಮಾರ್ಗ ಗ್ರಂಥವು ಇಲ್ಲದಿರುವುದೂ, ಇದ್ದರೂ ಒಬ್ಬೊಬ್ಬರ ಮಹಿಮೆಯನ್ನೇ ಉಟ್ಟಂಕನ ಮಾಡಿರುವುದೂ ಪಂಚಾಚಾರ್ಯರ ಪೂರ್ಣ ಚರಿತ್ರೆಯನ್ನು ಕಟ್ಟಲು ಅಡ್ಡಿಯನ್ನೊಡ್ಡಿದೆ ಎಂಬುದು ಸಂಶೋಧಕರಿಗೆಲ್ಲಾ ತಿಳಿದಂತವಾಗಿದೆ ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀಜಗದ್ಗುರು ರೇಣುಕಾಚಾರ್ಯ, ಅವರ ತರುವಾಯದ ಶ್ರೀ ರೇವಣಸಿದ್ಧ, ಅವರಿಂದೀಚೆಯ ಶ್ರೀ ರೇವಣಾರಾಧ್ಯರ ಬಗ್ಗೆ ಅನೇಕ ಪ್ರಾಚೀನಾರ್ವಾಚೀನ ಕವಿಗಳು ಕಾವ್ಯ ಗಳನ್ನು ಕಟ್ಟಿ ಹಾಡಿಹರಸಿರುವರು. **"ಕೊಲನುಪಾಕ ಮಾಹಾತ್ಮ್ಯ"** ಅಥವಾ ಅದರಿಂದ ಕನ್ನಡಕ್ಕಿಳಿದ **"ಚತುರಾಚಾರ್ಯ ಪುರಾಣ"** ದಲ್ಲಿ ಈ ಮಹಾಚಾರ್ಯರ ವಿಷಯವು ವರ್ಣಿಸಲ್ಪಟ್ಟಿರುವುದಾದರೂ ಸುಸಂಗತ ವಾಗಿರುವುದಿಲ್ಲ. ಸದ್ಯಃ ಪಂಚಾಚಾರ್ಯ ಚರಿತೆಯನ್ನು ಕಟ್ಟಿರುವವರು ಬೇರೆ ಬೇರೆ ಗ್ರಂಥಗಳಲ್ಲಿ ಬಂದಿರುವ ಕೆಲವು ಟಿಪ್ಪಣೆಗಳನ್ನು ಪ್ರಯತ್ನ ಪೂರ್ವಕವಾಗಿ ಸಂಗ್ರಹಿಸಿರುವರಾದರೂ ಅವುಗಳಲ್ಲಿಯೂ ಒಂದು ತಾಳ ಮೇಳವಿಲ್ಲವಾಗಿದೆ.

ಆದಿಪಂಚಾಚಾರ್ಯರಲ್ಲೊಬ್ಬರಾದ **ಜಗದ್ಗುರು ದಾರುಕಾಚಾರ್ಯರ** ಎರಡನೆಯ ಅವತಾರವಾದ **ಶ್ರೀ ಮುರುಳಾರಾಧ್ಯರ** ಹಾಗೂ ಅವರ ತರುವಾಯದ **ಶ್ರೀ ಮುರುಲಸಿದ್ಧರ** ವಿಷಯವಾಗಿ ಸದ್ಯಃ ಮೂರು ಕಾವ್ಯಗಳು ದೊರೆತಿದ್ದು ಅವುಗಳು ಒಂದಕ್ಕೊಂದು ವಿಷಯ ವೈಪರೀತ್ಯದಿಂದ ಕೂಡಿವೆ. ಹಿಮಗಿರಿಯ ನಾಗಭೂಷಣ ಕವಿಯ "ಮುರುಳಸಿದ್ಧೇಶ್ವರ ಸಾಂಗತ್ಯ"ವು ಲಿಪಿಕಾರರ ಅಶುದ್ಧಿಯನ್ನು ಹೊತ್ತುಕೊಂಡೇ ದಾವಣಗೆರೆಯಲ್ಲಿ ಅಚ್ಚಾಗಿದೆ. ದೇವಕವಿಯ "ಸಿದ್ಧಲಿಂಗ ಚಾರಿತ್ರ್ಯ" (ಮುರುಳಸಿದ್ಧ ಕಾವ್ಯ) ವು ಬೆಂಗಳೂರಿನ ಶ್ರೀಮಾನ್ ಅ. ನ. ಕೃಷ್ಣರಾಯರ ಸಂಪಾದನೆಯಲ್ಲಿ ಅಶುದ್ಧ ವಾಗಿಯಾದರೂ ಮುದ್ರಿತವಾಗಿ ಬಯಲಿಗೆ ಬಂದಿದೆ **ಹೂಳಿಯ ಪಂಚವಣ್ಣಿಗೆ ನಂದೀಶ ಕವಿಯ "ಮುರುಳಾರಾಧ್ಯ ವಿಜಯ"ವು** ಇದೇ ಈಗ

ದೊರೆತಿದೆ. ಈ ಮೂರು ಕಾವ್ಯಗಳ ಬಲದಿಂದ ಶ್ರೀ ಮುರುಳಸಿದ್ಧರ ಪೂರ್ಣ ಚರಿತ್ರೆಯನ್ನು ಅಲಂಕಾರವಾಗಿ ಕಟ್ಟಲು ಸಾಧ್ಯವಿದೆ. "ಮುರುಳಾರಾಧ್ಯ ವಿಜಯ" ಕಾವ್ಯವು ದೊರೆತ ಮೇಲೆ ಅದನ್ನು ಪೂರ್ಣವಾದ ಸಂಶೋಧನೆಯಿಂದ ಅಭ್ಯಾಸ ಮಾಡಿದ್ದರಲ್ಲಿ **ದೇಪಕವಿಯ ಮುರುಳಸಿದ್ಧ ಕಾವ್ಯವು ಅಪ್ರಮಾಣ ಭೂಯಿಷ್ಠವೂ, ಅಸಂಗತವೂ, ಅಸತ್ಯಮಯವೂ** ಆದುದೆಂದು ತಿಳಿಯಿತು ಆದರೆ ಅವಿದ್ಯಾವಂತನ ಧಾಟಿಯಲ್ಲಿ ಕೇಳಿದುದನ್ನೆಲ್ಲಾ ಲಾವಣಿ ಕಟ್ಟಿ ಹಾಡಿ ಕುಣಿದು ಒಬ್ಬ ಕವಿಯೆನಿಸಿಕೊಳ್ಳುವ ಅಪೇಕ್ಷೆಯುಳ್ಳ ನಿಮ್ನ ವರ್ಗದ ದೇವನು ತನ್ನವನೇ ಆದ ಸಿಂದೋಗಿಯ ಮಾದರ ಮಗ ಮುರುಳಸಿದ್ಧನನ್ನು ಮೂಲ ಮುರುಳಸಿದ್ಧನ ಸ್ಥಲದಲ್ಲಿರಿಸಿ ಕಾವ್ಯ ಕಟ್ಟಿ ಜಗತ್ತಿಗೆ ವಿವಂಚನೆ ಮಾಡಿರುವುದು ಸಣ್ಣ ಕೆಲಸವೇನೂ ಅಲ್ಲ. ದೇಪನಲ್ಲಿ ಈ ವಿವಂಚನೆಗೆ ಸಾಕಷ್ಟು ವಿದ್ಯೆಯಿದ್ದರೆ ತಾನು ಸಾಧಿಸಿರುವ ವಿಷಯವನ್ನೇ ಸಂದೇಹಬಾರದಂತೆ ಬರೆಯಲು ಯತ್ನಿಸುತ್ತಿದ್ದನೋ ಏನೋ! ಅವಿದ್ಯಾಪ್ರಭಾವದಿಂದಲೂ, ಐತಿಹಾಸಿಕ ಜ್ಞಾನಶೂನ್ಯತೆಯಿಂದಲೂ, ತನ್ನ ತಪ್ಪುಗಳನ್ನು ತಾನೇ ಒಪ್ಪಿಕೊಳ್ಳುವವನಂತೆ ಈ ದೇಪನು ಮುರುಳಸಿದ್ಧ ಕಾವ್ಯರಚನೆಯಲ್ಲಿ ಹೆಜ್ಜೆ ಹೆಜ್ಜೆಗೂ ಮುಗ್ಗರಿಸಿ ಸಾಹಿತ್ಯ ಪ್ರಪಂಚದ ಅವಹೇಳನೆಗೆ ಗುರಿಯಾಗಿದ್ದಾನೆ.

ದೇಪನ ಮುರುಳಸಿದ್ಧ ಕಾವ್ಯವನ್ನು ಓದಿದವರೆಲ್ಲರೂ ಅವನಿಗೆ ಯೋಗ್ಯವಾದ ಪ್ರಶಸ್ತಿಯನ್ನು ಕೊಟ್ಟಿದ್ದಾರೆ. ಆದರೆ ಈ ಪ್ರಶಸ್ತಿಯನ್ನು ದಿವಂಗತನಾದ ಆತನು ಸ್ವೀಕರಿಸಲು ಸಾಧ್ಯವಿಲ್ಲವಾಗಿರುವುದರಿಂದ ಅವನ ಪಲ್ಲವಿಯಿಂದಲೇ ಮೃದು ಮಧುರವಾದ ಶೈಲಿಯಲ್ಲಿ ಮುರುಳಸಿದ್ಧರ ಬಗ್ಗೆ ನಿರ್ಣಯವನ್ನು ಕೊಟ್ಟಿರುವ ಶ್ರೀಮಾನ್ ಅ. ನ. ಕೃಷ್ಣರಾಯರು ಆ ಪ್ರಶಸ್ತಿಯನ್ನು ನಿರ್ವಾಹವಿಲ್ಲದೆ ಸ್ವೀಕರಿಸಲೇ ಬೇಕಾಗಿದೆ ಎಂದು ನಾವಿಲ್ಲಿ ಸ್ಪಷ್ಟಪಡಿಸಬೇಕಾಗಿದೆ. ರಾಯರು ಮುರುಳಸಿದ್ಧರ ಬಗೆಗೆ ನಿಜವಾದ ಬೆಳಕನ್ನು ಕನ್ನಡ ಸಾಹಿತಿಗಳ ಮುಂದೆ ಇಡಬೇಕೆಂದು ನಿರ್ಧರಿಸಿದ್ದರೆ ತಮ್ಮ ಪ್ರಸ್ತಾವನೆಯಲ್ಲಿ ತೆಗೆದುಕೊಂಡಿರುವ ಸಾಹಿತಿಗಳ ಅಭಿಪ್ರಾಯವನ್ನು ಹಾಗೆ ಅಪಾರ್ಥಗೊಳಿಸಲು ಸಾಧ್ಯವಿರಲಿಲ್ಲ. ಮಹಾಚಾರ್ಯರ ಮೇಲೆ ಅಸ್ಪೃಶ್ಯಾಸ್ತ್ರವನ್ನು ಪ್ರಯೋಗಿಸುವ ಮನೋಧ್ಯೇಯವನ್ನು ಸಾಧಿಸುವ ಭರದಲ್ಲಿ ಕನ್ನಡ ಸಾಹಿತ್ಯ ಧುರಂಧರರನೇಕರ ಅಲ್ಲಲ್ಲಿಯ ಟಿಪ್ಪಣಿಗಳನ್ನು ಸಂಗ್ರಹಿಸಲು ಯತ್ನಿಸಿದರೂ ರಾಯರ ಅಭಿಪ್ರಾಯಕ್ಕೆ ಅವು ಸ್ವಲ್ಪವೂ ಬೆಂಬಲ ಕೊಟ್ಟಿರುವುದಿಲ್ಲ.

**ಅಪೂರ್ಣ ಸಾಹಿತ್ಯಗಳು ಮಾಡುವ ಸಾಹಿತ್ಯೋದ್ಧಾರವು ಎಂದಿಗೂ ವೈಷಮ್ಯ ಪೂರ್ಣವೂ ಕಲಹಾಗ್ನಿ ಪ್ರದೀಪವೂ ಆಗಿರುವುದು** ಎಂಬುದನ್ನು ಈ ರಾಯರ ಪ್ರಕಟನೆಯಿಂದ ಎಲ್ಲ ಸಾಹಿತಿಗಳೂ ತಿಳಿದುಕೊಳ್ಳಬಹುದಾಗಿದೆ.

ಶ್ರೀಮಾನ್ ರಾಯರ ಪ್ರಕಟನೆ ಅಸತ್ಯಪೂರ್ಣವಾಗಿದ್ದರೂ ಅದರಿಂದ ಸತ್ಯಾಂಶವನ್ನು ಕಂಡು ಹಿಡಿಯಲು ನಮಗೆ ಸಾಧಕವಾಯಿತೆಂದು ಹೇಳಬಹುದು. ಈ ಸಂದರ್ಭದಲ್ಲಿ "ವಿಭಿನ್ನ ಶಕ್ತಿಗಳ ತಿಕ್ಕಾಟದಿಂದ ಸತ್ಯಾಂಶವು ಹೊರಬೀಳುವುದು" ಎಂದು ೧೯೩೮ ನೆಯ ಇಸ್ವಿಯಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ತರುಣ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ವೇ। ಟಿ. ಹೆಚ್. ಯಂ. ಸದಾಶಿವಯ್ಯನವರು ಎಂ .ಎ. ಡಿಸ್ಟ್ರಿಕ್ಟ್ ಮುನಸೂಬರು (ಗುತ್ತಿ) ಅವರು ವಿವರಿಸಿದ ನುಡಿಯನ್ನು ನಾವು ಜ್ಞಾಪಿಸಿಕೊಳ್ಳುವುದು ಸೂಕ್ತವಾಗಿ ತೋರುತ್ತದೆ. ತಾ॥ ೭-೯-೪೬ ರಲ್ಲಿ ಸದರಿಯವರು ಶ್ರೀಶೈಲ ಜಗದ್ಗುರು ಮಹಾಸನ್ನಿಧಿಗೆ ಈ ಕೆಳಗೆ ಕಾಣಿಸುವಂತೆ ನಿವೇದಿಸಿ ಕೊಂಡಿದ್ದಾರೆ. ಅದನ್ನಿಲ್ಲಿ ಮಹಾಸನ್ನಿಧಿಯ ಆಜ್ಞೆಯಿಂದ ಉದ್ಧರಿಸುವೆವು.

ಶ್ರೀ ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನಮಠಾಧ್ಯಕ್ಷ ಶ್ರೀ ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಗೆ

ಕೃಪಾಪಾತ್ರನ ಶಿ। ಸಾ। ಬಿನ್ನಹಂಗಳು.

ಮಹಾಸನ್ನಿಧಿಯ ಆಶೀರ್ವಾದ ಪತ್ರಿಕೆಯು ತಲುಪಿತು. "ಮರುಳಸಿದ್ಧಾಂಕ"ದ ಸಲುವಾಗಿ ಲೇಖನವೊಂದನ್ನು ಕಳುಹಿಸುವುದಾಗಿ ಅಪ್ಪಣೆಯಾಗಿದೆ........................................ಶ್ರೀ ಆಚಾರ್ಯರ ಬಗ್ಗೆ ದೊರೆತ ಎಲ್ಲ ಸಾಹಿತ್ಯವನ್ನು ಸಂಗ್ರಹಿಸಿ ಒಂದು ಸ್ವತಂತ್ರ ಮತ್ತು ಅಧಿಕೃತ ಗ್ರಂಥ ಪ್ರಕಟಿಸಬೇಕೆಂಬ ಹವ್ಯಾಸದಲ್ಲಿರುವೆನು. ಆ ಬಗ್ಗೆ ತೆಲಗು ವಾಙ್ಮಯದಲ್ಲಿರುವ ಕೆಲ ಅಮುದ್ರಿತ ಹಸ್ತ ಪ್ರತಿಗಳನ್ನು ಶೇಖರಿಸಿರುವೆನು. ಮದ್ರಾಸ ವಿಶ್ವವಿದ್ಯಾಲಯ ಗ್ರಂಥ ಭಾಂಡಾರದಲ್ಲಿಯೂ ಕಲಕತ್ತೆಯ ಇಂಪೀರಿಯಲ್ ಲಾಯಬ್ರರಿಯಲ್ಲಿಯೂ ಆಚಾರ್ಯರ ಚರಿತ್ರೆಯ ಮೇಲೆ ಬೆಳಕನ್ನು ಬೀರುವ ಕೆಲ ಪುರಾತನ ಗ್ರಂಥಗಳಿರುವವು. ಅವುಗಳನ್ನು ಸಂಗ್ರಹಿಸಲೂ ಪತ್ರವ್ಯವಹಾರ ನಡೆಸಿರುವೆನು. ಸಲಕರಣೆಗಳೆಲ್ಲ ಸಿಕ್ಕ ಮೇಲೆ ಗ್ರಂಥ ರಚನೆಗೆ ಪ್ರಾರಂಭಿಸುವೆನು. ಸತ್ಯಾನ್ವೇಷಣೆಯೇ ನನ್ನ ಧ್ಯೇಯವಾಗಿದ್ದು

ಆ ಧ್ಯೇಯವನ್ನು ಸಾಧಿಸಲೂ ಮಾಡಬೇಕಾದ ಪ್ರಯತ್ನಗಳನ್ನೆಲ್ಲ ಮಾಡ ಬೇಕೆಂದಿರುವೆನು.

ಇತ್ತೀಚೆಗೆ ಶ್ರೀ. ಅ. ನ. ಕೃಷ್ಣರಾಯರಿಗೂ ನನಗೂ ಪತ್ರವ್ಯವಹಾರ ನಡೆದಿಲ್ಲ. ಕಳೆದ ತಿಂಗಳು ಆದವಾನಿಯಲ್ಲಿ ನಡೆದ ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷನಾಗಿ ಹೋಗಿದ್ದೆ. ಶ್ರೀ ಕೃಷ್ಣರಾಯರು ಆ ಸಮಾರಂಭದ ಉದ್ಘಾಟಕರಾಗಿ ಬರಬೇಕಾಗಿದ್ದು ಅವರೊಡನೆ ಶ್ರೀ ಮುರುಳಸಿದ್ಧರ ಬಗ್ಗೆ ವಿಚಾರ ವಿನಿಮಯ ಮಾಡಬೇಕೆಂದಿದ್ದೆನು. ಆದರೆ ಅವರು ಆ ಕಾಲಕ್ಕೆ ಆದವಾನಿಗೆ ಬರಲಿಲ್ಲವಾದ್ದರಿಂದ ಆ ಯೋಗವು ತಪ್ಪಿತು.

ಮಹಾಸನ್ನಿಧಿಯು ಸೂಚಿಸಿರುವ ಸಿಂದೋಗಿಯ ಮುರುಳಸಿದ್ಧನ ಬಗ್ಗೆ ಐತಿಹಾಸಿಕ ಸಾಹಿತ್ಯವೇನಾದರೂ ಇದ್ದರೆ ವಿವರಿಸುವ ಕೃಪೆಯಾಗಬೇಕು. ಅದು ನನ್ನ ಶೋಧನೆಗೆ ಅನುಕೂಲವಾಗುವುದು.

ಇತ್ಯನೇಕ ಶಿ। ನಾ। ಬಿನ್ನಪಗಳು
ಪಿ. ಹೆಚ್. ಎಂ. ಸದಾಶಿವಯ್ಯ
ಗುತ್ತಿ. ೭—೯—೪೭

ಬೆಂಗಳೂರಿನ "ಶರಣ ಸಾಹಿತ್ಯ" ಪತ್ರಿಕೆಯ ಸಂಪಾದಕರೂ ಮೈಸೂರ ಮಹಾರಾಜರ ಆಸ್ಥಾನ ವಿದ್ವಾಂಸರೂ ಆಗಿರುವ ವೇ॥ ಬಿ. ಶಿವಮೂರ್ತಿಶಾಸ್ತ್ರಿ ಗಳವರು ಶ್ರೀಶೈಲ ಜಗದ್ಗುರು ಸನ್ನಿಧಿಗೆ ಅರಿಕೆ ಮಾಡಿಕೊಂಡ ೨೯-೮-೪೭ರ ಪತ್ರವನ್ನು ಮಹಾಸನ್ನಿಧಿಯ ಆಜ್ಞೆಯಂತೆ ಉದ್ಧರಿಸುವೆವು.

ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿಗಳವರು ಶ್ರೀಶೈಲ ಸೂರ್ಯ ಸಿಂಹಾಸನಾಧ್ಯಕ್ಷರು ಮು. ಶಿಕಾರಿಪುರ ಅವರ ದಿವ್ಯ ಸನ್ನಿಧಿಯಲ್ಲಿ

ಸಾಷ್ಟಾಂಗ ಪ್ರಣಾಮಪೂರ್ವಕ ಬಿನ್ನಪಗಳು.

ತಪೋಧನರೇ ! ತಮ್ಮ ದಿನಾಂಕ ೨೪—೮—೪೭ ರ ಆಶೀರ್ವಾದ ಪತ್ರ ಕೈಸೇರಿದೆ. ತಮ್ಮ ನೇತೃತ್ವದಲ್ಲಿ "ಶ್ರೀ ಮುರುಳಸಿದ್ಧಾಂಕ" ಪ್ರಾರಂಭ ವಾಗುವುದು ಸ್ತೋತ್ರಾರ್ಹವಾದುದು. ಮಾದಿಗ ಮುರುಳಸಿದ್ಧನ ವಿಚಾರ ದಲ್ಲಿ ಹೊಸ ಸಂಶೋಧನೆಯಾಗಿರುವುದು ಕುತೂಹಲ ಜನಕವಾದುದು. ಆ ಬಗ್ಗೆ ಒಂದು ಲೇಖವನ್ನು ನಮ್ಮ ಶರಣ ಸಾಹಿತ್ಯಕ್ಕೆ ಕಳಿಸಿದರೆ ತುಂಬಾ

ಉಪಕಾರವಾಗುತ್ತದೆ. ನಾನು ಮರುಳಸಿದ್ಧ ಪುರಾಣದ ಮೇಲೆ ಬರೆದ ಲೇಖನವನ್ನೇ ತಮ್ಮ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಬಹುದು.

ಇಂತು ತಮ್ಮ ಕೃಪಾಪಾತ್ರ

ಬಿ. ಶಿವಮೂರ್ತಿಶಾಸ್ತ್ರೀ.

ಮೇಲ್ಕಂಡ ಇಂತಹ ಸಂಶೋಧನ ಶಿಖಾಮಣಿಗಳೇ ಈ ಮಹಾತ್ಮರ ವಿಷಯದಲ್ಲಿ ಇನ್ನೂ ಪ್ರಯತ್ನದಲ್ಲಿರುವಾಗ ಶ್ರೀ. ಅ. ನ. ಕೃಷ್ಣರಾಯರು ಪೂರೈಸಿರುವ ಈ ಅವಸರ ಪ್ರಯತ್ನವು ನಿಷ್ಫಲವಾದುದೆಂದು ಸ್ಪಷ್ಟವಾಗಿ ಬರೆಯಬೇಕಾಗುತ್ತದೆ. ಪಾಪ! ರಾಯರು ಇತಿಹಾಸ ಶೋಧನೆಯಲ್ಲಿ ಇನ್ನೂ ಹೊಸಬರು. ಸರಳ ಸಾಹಿತ್ಯದ ಕತೆಗಳನ್ನು ಒರೆದು ಬೆಳಗಿಸುವಷ್ಟು ಶಕ್ತಿಯುಳ್ಳ ಇವರು "ಅಟ್ಟಕ್ಕೆ ಹಾರದ ಬೆಕ್ಕು ಬೆಟ್ಟಕ್ಕೆ ಹಾರಲು ಯತ್ನಿಸಿದಂತೆ" ಒಮ್ಮೆಲೇ ಒಂದು ಹೊಸ ವಾತಾವರಣವನ್ನು ಹರಡಿ ಹೇರಳವಾದ ಕೀರ್ತಿ ಸಂಪಾಸದಿಬೇಕೆಂಬ ಹಂಬಲದಿಂದ ಮಹಾ ಮಹಾ ಎಂಬವರಿಗೂ ನಿಲುಕದ ವಿಷಯದಲ್ಲಿ ಕೈ ಹಾಕಿ ಹಾಸ್ಯಾಸ್ಪದರಾಗಿದ್ದಾರೆ. ಆದರೆ ಇದರಿಂದ ಅವರಿಗೆ ಏನಾದರೂ ಪ್ರಯೋಜನವಾಗಿದೆಯೆ? ಆಗಿದ್ದರೆ ಸಂತೋಷ! ಇಲ್ಲವಾದರೆ, ಮೊದಲೇ ಹೊಗೆಯಾಡುತ್ತಿರುವ ವೀರಶೈವ ಸಮಾಜದಲ್ಲಿ ಕಾರಣವಿಲ್ಲದೆ ಕೊಳ್ಳಿಯಿಕ್ಕಿ ಸುಮ್ಮನೆ ಅದರ ಜಳ ತಾಗಿಸಿಕೊಂಡುದೇಕೆ? ಈ ವಿಘ್ನ ಸಂತೋಷಗುಣ ಸಾಹಿತಿಗಳಿಗೆ ಸಲ್ಲತಕ್ಕುದಲ್ಲ ಎಂದು ಧಾರಾಳವಾಗಿ ಹೇಳುತ್ತೇವೆ. ವೀರಶೈವರಲ್ಲಿ ಕವಿಗಳೂ ಲೇಖಕರೂ ವ್ಯಾಖ್ಯಾತರೂ ಪಂಡಿತರೂ ಸಕಲ ಭಾಷೆಗಳನ್ನು ಬಲ್ಲವರೂ ಅನೇಕರಿದ್ದರೂ ಪಾಕ್ಷಿಕ ಭಾವನೆಯನ್ನು ತಂದುಕೊಂಡು ಶಕ್ತಿ ಹೀನರಂತೆ ಮೂಲೆಯಲ್ಲಿ ನಿದ್ರಿಸುತ್ತಿರುವುದು ಸರ್ವಥಾ ಸಮಾಜ ಸಾಹಿತ್ಯ ದ್ರೋಹಕ್ಕಾಗಿಯೇ ಹೊರತು ಬೇರೆಯಲ್ಲವೆಂದು ಇನ್ನಾದರೂ ತಿಳಿದುಕೊಳ್ಳಲೆಂದು ಇಲ್ಲಿ ನಾವು ಅವರೆಲ್ಲರಿಗೂ ನಿವೇದಿಸುತ್ತೇವೆ.

ಶ್ರೀ. ಅ. ನ. ಕೃಷ್ಣರಾಯರ ಕಲುಷಿತ ಮುನ್ನುಡಿ—ಪ್ರಸ್ತಾವನೆಗಳಿಂದ ಹೊರಹೊರಟ "ಮರುಳಸಿದ್ಧ ಕಾವ್ಯ"ವು ವಿದ್ಯುತ್ ವೇಗದೊಡನೆ ಪ್ರಚಾರಿತವಾಯಿತೆನ್ನಲು ಅಡ್ಡಿಯಿಲ್ಲ. "ಸತ್ಯಂ ಜನವಿರೋಧಂ ಚ ಅಸತ್ಯಂ ಜನರಂಜನಂ" ಎಂದು ಹಿಂದಿನ ಹಿರಿಯರು ಅದಕ್ಕಾಗಿಯೇ ಹಾಡಿರುವರು. ವೀರಶೈವ ಸಮಾಜದ ಅನೈಕ ಮತ್ಯವನ್ನು ಚನ್ನಾಗಿ ಕಂಡುಕೊಂಡವರಿಂದ ಇಂತಹ ಕೃತಿಗಳು ಹೊರಬೀಳುವಲ್ಲಿ ಆಶ್ಚರ್ಯವೇನೂ ಇಲ್ಲ. ವೀರಶೈವ

ಸಮಾಜದ ಸಾಂಘಿಕ ಶಕ್ತಿ ಪ್ರತಿವಿಷಯದಲ್ಲಿಯೂ ಕುಗ್ಗುತ್ತ ಬಂದಿದೆ ಎಂಬುದನ್ನು ಸಮಾಜ ನಾಯಕರು ಇನ್ನೂ ಕಂಡುಕೊಳ್ಳದಿರುವುದು ಶೋಚನೀಯವೇ ಸರಿ! ಸಣ್ಣದೊಡ್ಡ ಎಲ್ಲ ಗ್ರಾಮ ಪಟ್ಟಣಗಳಲ್ಲಿಯೂ “ ವೀರಶೈವ ಏಕೀಕರಣ ಸಂಘ ” ಗಳು ಏರ್ಪಡುವುದು ಅತ್ಯವಶ್ಯಕವೆಂದು ಇಲ್ಲಿ ಒತ್ತಿ ಹೇಳಬೇಕಾಗಿದೆ. ವೀರಶೈವರ ಗುರುಮಠಗಳೂ— ವಿರಕ್ತ ಮಠಗಳೂ ಸಮಾಜದ ಎರಡು ಕಣ್ಣುಗಳೆಂದು ಸಮಾಜದವರು ಕಂಡು ಕೊಳ್ಳ ಬೇಕಲ್ಲದೆ ಈ ಭಾವನೆಯನ್ನು ಮೇಲ್ಕಂಡ ಉಭಯ ಮಠಗಳವರೂ ತ್ರಿಕರಣ ಪೂರ್ವಕವಾಗಿ ತಂದು ಕೊಂಡು ಸಮಾಜದ ಐಕಮತ್ಯಕ್ಕೂ ಸರ್ವಾಂಗೀಣ ಉನ್ನತಿಗೂ ಕಾರಣರಾಗುವುದು ಶ್ರೇಯಸ್ಕರವಾಗಿದೆ. ಏಕೆಂದರೆ ಇವರಿರ್ವರೂ ಮಾಹೇಶ್ವರರೇ ಆಗಿದ್ದಾರೆ.

ಮಾಹೇಶ್ವರರಲ್ಲಿಯ ಈ ಅನೈಕ್ಯವೇ ಅಶಾಸ್ತ್ರೀಯವಾದ ಮೂರನೆಯ ವಾದಕ್ಕೆ ಕಾರಣವಾಯಿತೆಂದು ಒಪ್ಪದಿದ್ದರೆ ಗತ್ಯಂತರವೇ ಇಲ್ಲ. ಮನೆಯನ್ನು ಕಟ್ಟುವುದಕ್ಕೆ ಬೇಕಾಗುವಷ್ಟು ವೇಳೆ ಅದನ್ನು ಕೆಡಹುವುದಕ್ಕೆ ಬೇಕಾಗುವುದಿಲ್ಲ. ಪಾಲುಗಾರರಾದ ಅಣ್ಣತಮ್ಮಂದಿರು ತಮ್ಮ ಮನೆಯನ್ನು ಒಡೆದು ಕಟ್ಟಲುಜ್ಜುಗಿಸಿ ಅದನ್ನು ವಿಕಾರಗೊಳಿಸುವಂತೆ ಗುರು ವಿರಕ್ತರೆಂಬ ಅಣ್ಣತಮ್ಮಂದಿರು ಬಂಧುರವಾದ ಸನಾತನ ವೀರಶೈವ ಸಮಾಜ ಭವನವನ್ನು ಒಡೆದು ವಿಕಾರಗೊಳಿಸಲು ಯತ್ನಿಸುತ್ತಿರುವ ಸಮಯದಲ್ಲಿ ಇವರಿರ್ವರ ಏಕೀಕರಣಕ್ಕಾಗಿ ಧಾರವಾಡದಲ್ಲಿ “ ಅಖಿಲ ಭಾರತ ವೀರಶೈವ ಮಾಹೇಶ್ವರ ಸಂಘಟನಾಸಮಿತಿ”ಯು ಸ್ಥಾಪಿತವಾದುದು ಸಂತೋಷಕರವಾದ ಸಂಗತಿಯೇ ಸರಿ. ಶ್ರೀ. ಅ. ನ. ಕೃಷ್ಣರಾಯರು ಮರುಳಸಿದ್ಧರ ಬಗೆಗೆ ತಾಳಿರುವ ಅಸಂಗತ ಧೋರಣೆಯನ್ನು ನಿವಾರಿಸುವ ಮೂಲಕ ಅವಕ್ಕೆ ಸಾಧಾರವಾದ ಪ್ರತ್ಯುತ್ತರಕ್ಕಾಗಿ ಪ್ರಯತ್ನಿಸಿದವರು ಈ ಮೇಲ್ಕಂಡ ಸಮಿತಿಯವರೆಂದು ಬರೆದರೆ ಅತಿಶಯೋಕ್ತಿಯಾಗಲಾರದು. ಈ ಸಮಿತಿಯವರು ಸಮಾಜ ಪ್ರಮುಖರಿಗೆಲ್ಲ ಸತ್ಯಾಂಶ ಪ್ರಕಟನೆಗೆ ಕೋರಿಕೊಂಡಂತೆ ತಿಳಿಯುತ್ತದೆ. ಶ್ರೀಶೈಲ ಜಗದ್ಗುರು ಸನ್ನಿಧಿಯವರಿಗೆ ಅರಿಕೆಮಾಡಿರುವ ಅವರ ಒಂದು ಪತ್ರವನ್ನು ಇಲ್ಲಿ ಉದ್ಧರಿಸುವೆವು. ಇದರಿಂದ ಅವರಲ್ಲಿ ಸಮಾಜೋದ್ಧಾರದ ಲವಲವಿಕೆ ಎಷ್ಟಿದೆ ಎಂಬುದು ಒಡೆದುಕಾಣುತ್ತಿದೆ.

No. 4
20—9—45

ಶ್ರೀಮದ್ಘನಲಿಂಗ ಚಕ್ರವರ್ತಿಗಳಾದ ಶ್ರೀ ೧೦೮ ಜಗದ್ಗುರು ವೀರಶೈವ ಧರ್ಮ ಪೀಠಾಧೀಶ್ವರ ಶ್ರೀ ವಾಗೀಶ್ವರ ( ಪಂಡಿತಾರಾಧ್ಯ ) ಶಿವಾಚಾರ್ಯ ಮಹಾಸ್ವಾಮಿಗಳು.

ಶ್ರೀಶೈಲ ಸಂಸ್ಥಾನಮಠ, ಗುಂತಕಲ್ಲು ಇವರ ಮಹಾ ಸನ್ನಿಧಿಗೆ.

ಧಾರವಾಡ ವೀರಶೈವ ಮಹೇಶ್ವರ ಸಂಘಟನಾ ಸಮಿತಿಯ ಗೌರವ ಕಾರ್ಯದರ್ಶಿಗಳು ಈ ಮೂಲಕ ಸನ್ನಿಧಿಗೆ ವಿನಂತಿಮಾಡಿಕೊಳ್ಳುವುದೇನೆಂದರೆ:

ನವಸಂದೇಶ ತಾ|| ೫-೯-೧೯೬೫ ನೆಯ ಸಂಚಿಕೆಯಲ್ಲಿ ಹಾಗೂ ಶರಣಸಂದೇಶದಲ್ಲಿ ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀ ಮರುಳಸಿದ್ಧರು ಯಾರು ? ಎಂಬ ಶಿರೋಲೇಖನದ ಕೆಳಗೆ ಕೊಟ್ಟ ಲೇಖವನ್ನು ಕುರಿತು ತಾ|| ೧೧-೯-೧೯೬೫ ಮಂಗಳವಾರ ಸಂಜೆ ೬ ಘಂಟೆಗೆ ಧಾರವಾಡ ಶುಕ್ರವಾರ ಪೇಟೆಯ ಹಿರೇಮಠದ ಪಟ್ಟದ ದೇವರ ಮಠದಲ್ಲಿ ಮೇ|| ಸಿ. ಕೆ ಒಡೆಯರು ವಕೀಲ ಧಾರವಾಡ ಇವರ ಅಧ್ಯಕ್ಷತೆಯಲ್ಲಿ ನಮ್ಮ ಸಮಿತಿಯ ಸಾಧಾರಣ ಸಭೆ ಕೂಡಿ ಅದರಲ್ಲಿ ಕೆಳಗಿನಂತೆ ಠರಾವು ಮಾಡಲ್ಪಟ್ಟಿತು. ಅದ್ದರಿಂದ ತಾವು ಸದರಿ ಠರಾವಿನ ಮೇರೆಗೆ ತಮ್ಮ ಆಧಾರಯುಕ್ತವಾದ ಉತ್ತರ ಪರಲೇಖವನ್ನು ತಯಾರಿಸಿ ಶೀಘ್ರ ಪ್ರಕಟಗೊಳಿಸಬೇಕಾಗಿ ಸನ್ನಿಧಿಗೆ ಅರಿಕೆ ಮಾಡಿಕೊಂಡಿದೆ. ಈ ಬಗ್ಗೆ ತಯಾರಿಸಿದ ಉತ್ತರ ಪರಲೇಖನದ ಒಂದು ಪ್ರತಿಯನ್ನು ನಮ್ಮ ಸಮಿತಿಗೆ ಕಳಿಸಿಕೊಡಬೇಕಾಗಿ ವಿನಂತಿಯುಂಟು.

## ಪಾಸಾದ ಠರಾವು

" ನವಸಂದೇಶ ತಾ|| ೫-೯-೬೫ನೆಯ ಸಂಚಿಕೆಯಲ್ಲಿ ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ಮರುಳಸಿದ್ಧರು ಯಾರು ? ಎಂಬ ಶಿರೋಲೇಖದ ಕೆಳಗೆ ಕೊಟ್ಟ ಲೇಖವನ್ನು ಓದಿ ನೋಡಿ ವಿಚಾರಮಾಡಿತು. ಸದರ ಲೇಖದಿಂದ ವೀರಶೈವ ಸಮಾಜಕ್ಕೆ ಆದ ಅಪಮಾನವನ್ನು ಹೋಗಲಾಡಿಸುವುದಕ್ಕೆ ಈ ಬಗ್ಗೆ ಎಲ್ಲ ಪೀಠಾಧಿಕಾರಿಗಳಿಗೆ ಆಧಾರಯುಕ್ತ ಉತ್ತರ ಪರಲೇಖವನ್ನು ಶೀಘ್ರ ತಯಾರಿಸಿ ಪ್ರಕಟಗೊಳಿಸಲಿಕ್ಕೆ ಈ ಸಮಿತಿಯು ವಿನಂತಿ ಮಾಡಿಕೊಳ್ಳುತ್ತದೆ " ಸೂಚಕರು— ಮೆ|| ಪೀ. ಪೀ. ಶಿವಳ್ಳಿ ವಕೀಲರು. ಅನುಮೋದಕರು ಮೆ|| ಪಿ. ಎಸ್. ಮಳಿಮಠ. ಸದರಿ ಠರಾವು ಸರ್ವಾನುಮತದಿಂದ ಸ್ವೀಕರಿಸಲ್ಪಟ್ಟಿತು.

**ಗೌರವಕಾರ್ಯದರ್ಶಿಗಳು**

ಗುರುಲಿಂಗ ಶಾಸ್ತ್ರಿ ಹಿರೇಮಠ

ಚಂದ್ರಶೇಖರಸ್ವಾಮಿ ಚುಳಕಿಮಠ.
ಚನ್ನಬಸವಾರ್ಯ ಗುರುಸ್ಥಲಮಠ.

ಶ್ರೀಶೈಲ ಜಗದ್ಗುರುಗಳವರು ಈ ಮೇಲ್ಕಂಡ ಸಮಿತಿಯವರ ಕೋರಿಕೆಯಂತೆ ಕಾರ್ಯವನ್ನು ಕೈಕೊಳ್ಳುವೆವಾಗಿ ಆಗಲೇ ಉತ್ತರವನ್ನು ದಯಪಾಲಿಸಿದರು.

ಇದೇ ವಿಷಯವನ್ನು ಕುರಿತು ಈ ಸಮಿತಿಯವರು ಉಜ್ಜಯಿನೀ ಪೀಠಾಧೀಶ್ವರರಾದ ಶ್ರೀ ೧೦೮ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ರಾಜದೇಶಿಕೇಂದ್ರ ಮಹಾಸ್ವಾಮಿಗಳವರಿಗೂ ಅರಿಕೆಮಾಡಿದ್ದಾರೆ. ಅದಕ್ಕೆ ಉತ್ತರರೂಪವಾಗಿ ಉಜ್ಜಯಿನೀ ಜಗದ್ಗುರುಗಳವರು $\frac{\text{No- 266}}{\text{7—10—45}}$ ರಲ್ಲಿ ಸಮಿತಿಯವರಿಗೆ ಈ ಕೆಳಗಿನಂತೆ ಅಪ್ಪಣೆ ಕೊಡಿಸಿದ್ದಾರೆ.

" ನೀವು ಸನ್ನಿಧಿಗೆ ಬಿನ್ನೈಸಿದ $\frac{\text{No. 1}}{\text{19—9—45}}$ ರ ಪತ್ರ ತಲುಪಿತು. "ಮರುಳಸಿದ್ಧ ಕಾವ್ಯ "ವನ್ನು ಈ ಶ್ರಾವಣ ಶು॥ ಪಾಡ್ಯ ಮೊದಲೇ ಶ್ರೀ ಶೈಲ ಜಗದ್ಗುರುಗಳ ಒಟ್ಟಿಗೆ ಅವಲೋಕಿಸಿದೆ. ಸದರಿ ಗುರುಗಳು ವಿಮರ್ಶಿಸಲು ಒಡಂಬಟ್ಟಿದ್ದಾರೆ.

ಹೀಗೆ ಶ್ರೀ ಶೈಲ ಜಗದ್ಗುರುಗಳವರು ಮರುಳಸಿದ್ಧರ ವಿಷಯವಾಗಿ ಸತ್ಯಾಂಶವನ್ನು ಪ್ರಕಟಿಸುವ ಹೊರೆಯನ್ನು ಹೊತ್ತುಕೊಂಡು " ಮೂಲ ಮರುಳಸಿದ್ಧರ ಬಗೆಗೆ ದೇಪಕವಿಯು ಮತ್ತು ಇತರರ ತಪ್ಪು ಕಲ್ಪನೆಗಳು " ಎಂಬ ಲೇಖನವನ್ನು ಬರೆದು ಪೂರ್ಣಮಾಡಿ ಕೆಲ ಪಂಡಿತರ ನಿರೀಕ್ಷಣೆಗೆ ಆ ಲೇಖನವನ್ನು ಒಪ್ಪಿಸಿದಾಗ ಮರುಳಸಿದ್ಧರ ಬಗ್ಗೆ ಇನ್ನೂ ಅನೇಕ ವಿದ್ವಾಂಸರು ಲೇಖಗಳನ್ನು ಬರೆಯುವವರಿರುವುದರಿಂದ ಎಲ್ಲವನ್ನೂ ಒಟ್ಟಾಗಿ ಸೇರಿಸಿ " ಮರುಳಸಿದ್ಧಾಂಕ " ಎಂಬ ಹೆಸರಿನಲ್ಲಿ ವಿಶಾಲವಾದ ಗ್ರಂಥವನ್ನು ಪ್ರಕಟಿಸಲು ಕೆಲವರು ಅಭಿಪ್ರಾಯಪಟ್ಟರು. ಆಗ ಅವನ್ನೆಲ್ಲವನ್ನೂ ಸೇರಿಸಿ ಅಚ್ಚು ಹಾಕಿಸುವುದಾದರೆ ಒಂದು ಸಂಸ್ಥೆಗೊಪ್ಪಿಸುವುದು ಮೇಲೆಂದೂಹಿಸಿ ಹರಿಹರದಲ್ಲಿ ಸ್ಥಾಪಿತವಾಗಿರುವ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಕೃಪಾಪೋಷಿತ ವೀರಶೈವ ಧರ್ಮಾಲಯ ಸಂಸ್ಥೆಯವರಿಗೆ ಈ ಕಾರ್ಯವನ್ನು ವಹಿಸಿಕೊಟ್ಟರು. ಆ ಸಂಸ್ಥೆಯ ಕಾರ್ಯಕರ್ತರಾದ ಶ್ರೀ॥ ಯಂ. ವಿ

ಮಠರವರು ತಮ್ಮ ಗೃಹಕೃತ್ಯಗಳನ್ನೆಲ್ಲಾ ಬದಿಗಿಟ್ಟು ಗುರು ಕಾರ್ಯವೆಂದು ಲೇಖ ಸಂಗ್ರಹಕ್ಕಾಗಿಯೂ ಇತಿಹಾಸ ಕೋವಿದರ ಅಭಿಪ್ರಾಯ ಸಂಗ್ರಹಕ್ಕಾಗಿಯೂ ಅವಿಶ್ರಾಂತವಾಗಿ ಸಂಚರಿಸಿದರು. ಪಕ್ಷವಿಪಕ್ಷಗಳನ್ನೂ ವ್ಯಕ್ತಿ ವೈಷಮ್ಯಗಳನ್ನೂ ಕನಸಿನಲ್ಲಿಯೂ ನೆನೆಸದ ಹರಿಹರದ ವೀರಶೈವ ಧರ್ಮಾಲಯ ಸಂಸ್ಥೆಯವರು ತಾ|| ೨೦—೨– ೪೬ರಲ್ಲಿ ಈ ಕೆಳಗೆ ಕಾಣಿಸಿದ ಪ್ರಕಟನೆಯನ್ನು ಹೊರಡಿಸಿದರು. ಅದನ್ನಿಲ್ಲಿ ಉದ್ಧರಿಸಿದ್ದೇವೆ.

# ಪ್ರಕಟನೆ

## "ಶ್ರೀ ಮರುಳ ಸಿದ್ಧಾಂಕ"

ಸಕಲ ಭಾಷಾ ಇತಿಹಾಸ ಕೋವಿದರಾದ ಮಹನೀಯರೇ! ಜಗತ್ಪ್ರಸಿದ್ಧಗಳಾದ ಪಂಚಾಚಾರ್ಯ ಪೀಠಗಳು ಕಾಶೀ ಕೇದಾರ ಶ್ರೀಶೈಲ-ಉಜ್ಜಯಿನೀ-ಹಾಗೂ ರಂಭಾಪುರೀಕ್ಷೇತ್ರಗಳಲ್ಲಿ ಬಹು ಪ್ರಾಚೀನಕಾಲದಿಂದ ಇಲ್ಲಿಯವರೆಗೂ ಮೆರೆಯುತ್ತಾ ಬಂದಿರುವುದು ಎಲ್ಲರಿಗೂ ತಿಳಿದಂತವೇ ಆಗಿದೆ. ಜಗದ್ಗುರು ಪಂಚಾಚಾರ್ಯರ ಬಗೆಗೆ ಇಲ್ಲಿಯವರೆಗೆ ಎಷ್ಟೋಜನ ದೇಶ—ವಿದೇಶಗಳ ಐತಿಹಾಸಿಕ ಪಂಡಿತರು ಸಂಶೋಧನೆ ನಡೆಸಿದರೂ ಈ ಮಹಾತ್ಮರ ಸಮಗ್ರ ಇತಿಹಾಸವನ್ನು ಕಂಡು ಹಿಡಿಯಲು ಸಾಧ್ಯವಿಲ್ಲವಾಗಿದೆ.

ಭಾರತಮಾತೆಯ ಗುಪ್ತ ಗರ್ಭದಲ್ಲಿ ಅಡಗಿರುವ ಅವೆಷ್ಟೋ ಐತಿಹಾಸಿಕ ಅವಶೇಷಗಳು ಸಂಶೋಧಕರಿಗೆ ದೊರೆಯುತ್ತಿರುವವಾದರೂ ಅವುಗಳನ್ನು ಪೂರ್ಣವಾಗಿ ವಿಮರ್ಶಿಸದೆ ಪ್ರಕಟಿಸುವುದರಿಂದ ಸಾಹಿತ್ಯಕ್ಕೆ ಲಾಭವಾಗುವ ಬದಲು ಹಾನಿಯೂ, ಸಂತೋಷವಾಗುವ ಬದಲು ದ್ವೇಷವೂ ಸಂಭವಿಸುವುದರಲ್ಲಿ ಸಂದೇಹವಿಲ್ಲ. ಅಂತಹ ಪ್ರಕಟನೆಗಳಲ್ಲಿ ಬೆಂಗಳೂರಿನ ತರುಣ ಸಾಹಿತಿಗಳಾದ ಶ್ರೀ. ಅ. ನ. ಕೃಷ್ಣರಾಯರ ಶೋಧನೆಯಲ್ಲಿ ಹೊರಬಿದ್ದ "ಮರುಳಸಿದ್ಧ ಕಾವ್ಯ"ವೂ ಒಂದು.

ಶ್ರೀಮಾನ್ ರಾಯರು ಈ ಕಾವ್ಯದ ಆಶ್ರಯದಿಂದ ವೀರಶೈವ ಮತ ಸ್ಥಾಪಕ ಪಂಚಾಚಾರ್ಯರಲ್ಲಿ ಒಬ್ಬರಾದ ಉಜ್ಜಯಿನಿಯ ಮೂಲ ಮತಾಚಾರ್ಯ ಮರುಳಸಿದ್ಧರು ಜನ್ಮತಃ ಮಾದಿಗರೆಂದು ಸಾಧಿಸಿ ವೀರಶೈವ ಸಮಾಜ

ದಲ್ಲಿ ಗೊಂದಲವನ್ನೆಬ್ಬಿಸಿದ್ದಾರೆ. ಇದರಿಂದ ಬಹು ಜನರು ಸಂಶಯಕ್ಕೊಳಗಾಗಿದ್ದಾರೆ. ಅದು ಮೂಲ ಮರುಳಸಿದ್ಧರ ಬಗ್ಗೆ ಅಸತ್ಯ ಹಾಗೂ ವಿಪರ್ಯಾಸ ಬರವಣಿಗೆಗಳಿಂದ ಕೂಡಿದ್ದಾಗಿದೆ. ಆ ಕಾರಣ ಶ್ರೀ ಶೈಲ ಜಗದ್ಗುರುವಾಗೀಶ ಪಂಡಿತಾರಾಧ್ಯ ಕೃಪಾಪೋಷಿತ "ವೀರಶೈವಧರ್ಮಾಲಯ" ಸಂಸ್ಥೆಯವರು ಆಚಾರ್ಯ ಮರುಳಸಿದ್ಧರ ವಿಷಯದಲ್ಲಿ ದೊರೆಯಬಹುದಾದ ಸರ್ವವಿಷಯಗಳನ್ನೊಳಗೊಂಡ "ಮರುಳಸಿದ್ಧಾಂಕ" ಎಂಬ ಗ್ರಂಥವನ್ನು ತೀವ್ರದಲ್ಲಿಯೇ ಪ್ರಕಟಗೊಳಿಸುವ ಪ್ರಯತ್ನಮಾಡಿದ್ದಾರೆ. ಕಾರಣ ಕನ್ನಡ ಹಿಂದೀ, ಮರಾಠಿ, ತೆಲಗು, ಇಂಗ್ಲೀಷ್ ಮೊದಲಾದ ಯಾವ ಭಾಷೆಯಲ್ಲಾದರೂ ಸರಿಯೆ; ಐತಿಹಾಸಿಕ ಸಂಶೋಧನಾ ಪೂರ್ಣವಾದ ಲೇಖಗಳನ್ನು ಕಳುಹಿಕೊಡಬೇಕಾಗಿ ವಿದ್ವಾಂಸರಾದ ಲೇಖಕರಲ್ಲಿ ಪ್ರಾರ್ಥಿಸುತ್ತೇವೆ."

ಈ ಪ್ರಕಟನೆಯನ್ನು ಅನೇಕ ಕನ್ನಡ ಮರಾಠಿ ವಾರಪತ್ರಿಕೆಗಳಿಗೂ ಮತ್ತು ಸುಪ್ರಸಿದ್ಧರಾದ ಎಲ್ಲ ದೇಶದ ಲೇಖಕರಿಗೂ ಕಳುಹಿದ್ದಾಯಿತು. ವಿಷಯವು ಅಪರಿಚಿತವಾಗಿರುವುದರಿಂದಲೂ ರಾಯರು ಏನು ಬರೆದಿರುವುದು ತಿಳಿಯದಿರುವುದರಿಂದಲೂ "ಮರುಳಸಿದ್ಧ ಕಾವ್ಯವನ್ನೇ ಕಳುಹಬೇಕೆಂದು ಕೆಲವು ಲೇಖಕರು ಸಂಸ್ಥೆಗೆ ಬರೆಯುತ್ತಿದರು. ಸಂಸ್ಥೆಯು ಆ ಕಾರ್ಯವನ್ನೂ ಮಾಡಿತು. ಹಲಕೆಲವರ ಲೇಖಗಳೂ ಬಂದವು ಅಷ್ಟರಲ್ಲಿ "ಮರುಳಸಿದ್ಧೇಶ್ವರ ಸಾಂಗತ್ಯ" ಎಂಬ ಆಚ್ಚಾದ ಕಾವ್ಯವು ಸಮಗ್ರವಾಗಿ ದೊರೆತಿತು. ಅದನ್ನು ಆ ಮೂಲಾಗ್ರವಾಗಿ ಶೋಧಿಸಿದ್ದರಲ್ಲಿ "ಮರುಳಸಿದ್ಧ ಕಾವ್ಯ"ಕ್ಕೂ ಅದಕ್ಕೂ ವ್ಯತ್ಯಾಸಗಳು ತೋರಿಬಂದವು. ಅದೇ ಸಮಯದಲ್ಲಿ ಕೆಲ ಪತ್ರಿಕೆಯವರು ರಾಯರು ಪ್ರಕಟಿಸಿರುವ "ಮರುಳಸಿದ್ಧ ಕಾವ್ಯ"ದ ವಿಮರ್ಶೆಯನ್ನು ಮನಸ್ಸಿಗೆ ಬಂದಂತೆ ಮಾಡಿದರು. ಅವೆಲ್ಲ ಅಪ್ರಾವಕಾಶದ ಕಲ್ಪನೆಗಳೆಂದು ಅವರವರೇ ಒಪ್ಪುವಂತಿದೆ. ಅಸ್ಪೃಶ್ಯ ವರ್ಗದಲ್ಲಿ ಒಬ್ಬ ಮರುಳಸಿದ್ಧರ ಹೆಸರಿನ ಶರಣನಾಗಿರಬೇಕು ಎಂಬುದರ ಶೋಧನೆಯನ್ನು ಅವಿಚ್ಛಿನ್ನವಾಗಿ ನಡೆಯಿಸಲಾಯಿತು. ಮೊದಲಿನ ಶೋಧನೆಯಲ್ಲಿ ಕೊಟ್ಟೂರು ಬಳಿಯಿರುವ ಉಜ್ಜಯಿನಿ ಕ್ಷೇತ್ರದ ಮಾದಿಗರಕೇರಿಯಲ್ಲಿ ಒಂದು ಮರುಳಸಿದ್ಧರ ಗದ್ದುಗೆಯಿದೆ ಎಂದು ವಾರ್ತೆಬಂದಿತು. ಅಲ್ಲಿಗೆ ಹೋಗಿ ವಿಚಾರಿಸಿದ್ದರಲ್ಲಿ ಮಾದಿಗರ ಪೂಜೆಯಲ್ಲಿರುವ ಆ ಗದ್ದುಗೆಯು "ಸಿಂದೋಗಿ ಮರುಳಪ್ಪ"ನದೆಂದು ಮಾದಿಗರಿಂದ ಸ್ಪಷ್ಟವಾಯಿತು. ಆಗ ಸಂಸ್ಥೆಯವರು ಕೊಪ್ಪಳ ಜಿಲ್ಲಾ ಸಿಂದೋಗಿಗೂ ಪ್ರಯಾಣಿಸಿದರು. ಕೊಪ್ಪಳದ ಗವಿಮಠದಲ್ಲಿ ವಾಸಿಸಿ ಅಲ್ಲಿಯ ಅಧಿಪತಿಗಳಾದ ಪೂಜ್ಯ ಶ್ರೀಗಳಿಂದ ಅನೇಕ ಐತಿಹಾಸಿಕ

ವಿಷಯಗಳ ಸಂಗ್ರಹಮಾಡಿಕೊಂಡರಲ್ಲದೆ ಅವರ ಸಹಾಯದಿಂದ ಸಿಂದೋಗಿಯ ಮರುಳಪ್ಪನ ದೇವಸ್ಥಾನವನ್ನೂ ಸಂಶೋಧಿಸಿದರು. ಅಲ್ಲಿಯೂ ಮಾದಿಗರೇ ಅರ್ಚಕರಾಗಿ ಅವರ ಅಧೀನದಲ್ಲಿಯೇ ಆ ದೇವಸ್ಥಾನವಿರುವುದನ್ನು ಕಂಡುಕೊಂಡರು. ಈ ಬಲವಾದ ಎರಡು ನಿದರ್ಶನಗಳಿಂದ, ಪ್ರಸಿದ್ಧವಾದ ಮರುಳಸಿದ್ಧರ ದೇವಾಲಯವೇ ಬೇರೆ, ಆ ಮಹಿಮರ ಸೇವಕ ವರ್ಗವಾದ ಮಾದಿಗರ ಸಿಂದೋಗಿಯ ಮರುಳಪ್ಪನ ಸಮಾಧಿ ಅಥವಾ ದೇವಾಲಯವೇ ಬೇರೆಯೆಂಬುದು ಆಗ ಸ್ಪಷ್ಟವಾಯಿತು. ಆದರೆ ಸಿಂದೋಗಿಯ ಮಾದಿಗ ಮರುಳಪ್ಪನ ಜನನ, ಅವನಿಗೆ ಆ ಹೆಸರು ಬರಲು ಕಾರಣ, ದೇಪಕವಿಯ ಕಥಾನಾಯಕನು ಇವನೇ ಇರಬಹುದೆ ಎಂಬ ವಿಚಾರಗಳನ್ನು ನಿರ್ಧರವಾಗಿ ತಿಳಿಯಲು ಉಜ್ಜಯಿನಿಯಲ್ಲಾಗಲಿ ಸಿಂದೋಗಿಯಲ್ಲಾಗಲಿ ಲಿಪಿಸಾಹಿತ್ಯ ದೊರೆಯಲಿಲ್ಲ. ಇದರಿಂದ ನಾವು ಮತ್ತಷ್ಟು ಸಂದೇಹಕ್ಕೆ ಬಿದ್ದೆವು. ಅಷ್ಟರಲ್ಲಿಯೇ ತಾ|| ೧೮---೮---೪೬ರಲ್ಲಿ ಹೂಲಿಯ ಬೃಹನ್ಮಠದ ಪೂಜ್ಯ ಶ್ರೀ ನೀಲಕಂಠ ಶಿವಾಚಾರ್ಯರವರು ಶ್ರೀಪೂವಲ್ಲೀ ಪಂಚವಣ್ಣಿಗೆ ನಂದೀಶಕವಿರಚಿತವಾದ "ಮರುಳಾರಾಧ್ಯ ವಿಜಯ" ವೆಂಬ ಕಾವ್ಯ ದೊರೆತಿದೆ ಎಂಬ ಆನಂದವಾರ್ತೆಯನ್ನು ಶ್ರೀಶೈಲ ಜಗದ್ಗುರುಗಳಿಗೆ ಈ ಕೆಳಗಿನಂತೆ ಅರಿಕೆಮಾಡಿಕೊಂಡರು. ಅದನ್ನಿಲ್ಲಿ ಉದ್ಧರಿಸಿದ್ದೇವೆ.

### ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

ಶ್ರೀ ಮಜ್ಜಗದ್ಗುರು ಸದ್ಧರ್ಮಸಿಂಹಾಸನಾಧೀಶ ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿನಾಂ ಸನ್ನಿಧಾನಂ ಪ್ರತಿ.

ಶ್ರೀ ಮಜ್ಜಗದ್ಗುರು ಸೂರ್ಯಸಿಂಹಾಸನಾಧೀಶ ಶ್ರೀವಾಗೀಶಪಂಡಿತಾರಾಧ್ಯ ಮಹಾಸ್ವಾಮಿನಾಂ ಸನ್ನಿಧಾನಂ ಪ್ರತಿ.

ಉಭಯ ಜಗದ್ಗುರು ಸನ್ನಿಧಿಯ ಕೃಪಾಪಾತ್ರರಾದ ತರ್ಕ ತೀರ್ಥ ಶ್ರೀ ನೀಲಕಂಠಶಿವಾಚಾರ್ಯರು ಸಿಂಹಾಸನ ಬೃಹನ್ಮಠ ಹೂಲಿ ಸವಿನಯ ಕೃತಾನಂತ ಸಾಷ್ಟಾಂಗ ಪತ್ರಿಕಾ ಮುಖೇನ ವಿದಿತ ಪಡಿಸುವುದೇನೆಂದರೆ:

ಅ. ನ. ಕೃಷ್ಣರಾಯರು ಮಾದಿಗ ಮರುಳಸಿದ್ಧನನ್ನು ಸಿಂಹಾಸನ ಸ್ವಾಮಿಯೆಂದು ಬರೆದು ಈ ಉತ್ತರ ಕರ್ನಾಟಕದಲ್ಲಿ ಗೊಂದಲವನ್ನೆಬ್ಬಿಸಿರುವರಲ್ಲದೆ ಅವರಿಗೆ ಉತ್ತೇಜನ ಕೊಟ್ಟ ವಿರೋಧಿ ಪಂಗಡದವರು ಶ್ರೀ ಸದ್ಧರ್ಮ ಪೀಠದ ಬಗ್ಗೆ ಅನಾದರವನ್ನೂ ಅವಹೇಳನೆಯನ್ನೂ ಹುಟ್ಟಿಸುತ್ತಿದ್ದಾರೆ.

ಈ ವಿಷಯವನ್ನು ತಿಳಿದು ನಾವು ಶ್ರೀ ಮರುಳಾರಾಧ್ಯರ ಪ್ರೀತ್ಯರ್ಥ ಏಕಭೋಜನವ್ರತವನ್ನು ಹಿಡಿದು ಅವರ ಪ್ರಾಚೀನ ಇತಿಹಾಸ ಗ್ರಂಥಗಳನ್ನು ಶೋಧಿಸುತ್ತಿರಲು "ಮರುಳಾರಾಧ್ಯ ವಿಜಯ" ವೆಂಬ ಅಪ್ರತಿಮ ಗ್ರಂಥವು ದೊರೆಯಿತು.

ಇದು ಸರಸವೂ ಹೃದಯಂಗಮವೂ ಇರುವುದಲ್ಲದೆ ಇದೊಂದು ವೀರಶೈವ ಸಮಾಜದ ಹೆಗ್ಗುರುತಾಗಿದೆ. ಈ ವಿಜಯ ಗ್ರಂಥದಲ್ಲಿ ಒಟ್ಟಿಗೆ ೧೮ ಸಂಧಿಗಳಿವೆ. ೧೧ ಸಂಧಿ ಶ್ರೀ ಜಗದ್ಗುರು ಮರುಳಾರಾಧ್ಯರ ವಿಷಯವಾಗಿಯೂ, ೧೨ನೆಯ ಸಂಧಿಯು ೧೫ ಜನ ಆಚಾರ್ಯ ಪರಂಪರೆಯ ಸದ್ಧರ್ಮ ಪೀಠದ ವಿಷಯದಲ್ಲಿಯೂ, ಮುಂದೆ ೪ ಸಂಧಿಗಳು ಶ್ರೀ ಜಗದ್ಗುರು ಮರುಳಸಿದ್ಧರ ವಿಷಯದಲ್ಲಿಯೂ ಇವೇ ಮುಂದಿನ ೨ಸಂಧಿಗಳಲ್ಲಿ ಮತ್ತೊಬ್ಬ ಮರುಳಸಿದ್ಧರ ಮತ್ತು ೯ ಜನ ಪೀಠಾಚಾರ್ಯರ ವಿಷಯವು ತುಂಬಿಕೊಂಡಿದೆ. ಈ ಗ್ರಂಥದಲ್ಲಿ ಕಲಿಯುಗದ ಆದಿಯಿಂದ ೧೫ನೆಯ ಶತಮಾನದವರೆಗೆ ೨೫ ಜನ ಸದ್ಧರ್ಮ ಪೀಠದ ಪಟ್ಟಾವಲಿಯೂ ದೊರೆತಿದೆ. ಆದಿಯಿಂದ ೧೬ನೆಯ ಆಚಾರ್ಯರವರೆಗೆ ಉತ್ತರದೇಶದ ಕ್ಷಿಪ್ರಾ ನದಿಯ ತೀರದಲ್ಲಿರುವ ಉಜ್ಜಯಿನೀ ಪಟ್ಟಣದಲ್ಲಿ ನೆಲೆಸಿದ ಸದ್ಧರ್ಮ ಪೀಠದ ಚರಿತ್ರವೂ, ಆ ಮೇಲೆ ಈಗ ಕರ್ನಾಟಕದಲ್ಲಿರುವ ಉಜ್ಜಯಿನಿಯ ಸ್ಥಾಪನೆಯೂ ಇನ್ನೂ ಅನೇಕ ವಿಷಯಗಳಿಂದ ತುಂಬಿಕೊಂಡಿದೆ

ಶ್ರೀ ಸದ್ಧರ್ಮ ಪೀಠದ ಜಗದ್ಗುರುಗಳಾದ ಶ್ರೀ ಸಿದ್ಧಮಲ್ಲರಾಜ ದೇಶಿಕೇಂದ್ರರ ಅನುಗ್ರಹದಿಂದ ಮಾದಿಗ ಮರುಳಸಿದ್ಧನ ಉತ್ಪತ್ತಿಯೂ ಇನ್ನೂ ಅನೇಕ ಚರಿತ್ರಗಳೂ ಅಡಕವಾಗಿವೆ. ಈ ಗ್ರಂಥವು ಸದ್ಧರ್ಮ ಪೀಠಕ್ಕಷ್ಟೇ ಅಲ್ಲ, ಸಮಸ್ತ ಮತದ ಆಚಾರ್ಯರಿಗೂ ವೀರಶೈವ ಸಮಾಜಕ್ಕೂ ಸಪ್ರಮಾಣ ಗ್ರಂಥವಾಗಿದೆ. ಮೊದಲು ಇದನ್ನು ಮುದ್ರಿಸಿ ಪ್ರಕಟಿಸಿದ ಮೇಲೆ ಖಂಡನ ಗ್ರಂಥ ಬರೆಯಿಸಿದರೆ ಉತ್ತಮವಾಗುವುದು. ಇಲ್ಲದಿದ್ದರೆ ಪಂಡಿತರು ಬರೆಯತಕ್ಕ ಲೇಖನಗಳು ಒದಕ್ಕೊಂದು ವಿರೋಧವಾಗುವ ಸಂಭವವುಂಟು. ವೇ|| ಮರಿದೇವಯ್ಯನವರು ( ಯಂ. ವಿ. ಮಠರು ) ನಮಗೊಂದು ಖಂಡನ ಲೇಖವನ್ನು ಬರೆಯಲಿಕ್ಕೆ ತಿಳಿಸಿದ್ದರು ಆದರೆ ಅವರ ಹೇಳಿಕೆಯ ಪ್ರಕಾರ ಆಗಮದ ಆಧಾರದ ಮೇಲಿಂದ ಒಂದು ಲೇಖವನ್ನು ಬರೆದು ಕಳುಹಿಸಬೇಕೆಂದು ಆಲೋಚನೆಮಾಡಿದ್ದೆವು. ಶ್ರೀ ಮರುಳಾರಾಧ್ಯ ವಿಜಯ ಗ್ರಂಥವನ್ನು ದೊರ

ಕಿಸಿ ಶೋಧಿಸಿದ ಕೂಡಲೇ ಮೊದಲು ನಾವು ಆಲೋಚಿಸಿದ ವಿಷಯವೆಲ್ಲವೂ ನಿರಾಧಾರವಾಗಿ ಏನೂ ತಿಳಿಯದೆ ಖಂಡನ ಲೇಖ ಬರೆದಿದ್ದರೆ ಅಸಮಂಜಸ ವಾಗುತ್ತಿತ್ತೆಂದು ಹೊಳೆಯಿತು. ಈ ಅವಸ್ಥೆಯು ಇನ್ನುಳಿದವರಿಗೆ ಸಂಭವಿಸ ಬಾರದೆಂದು ಮೊದಲು ಈ ಗ್ರಂಥವನ್ನು ಪ್ರಕಟಿಸುವ ಏರ್ಪಾಟು ಮಾಡಬೇ ಕಾಗುವುದು. ಈ ಪತ್ರಕ್ಕೆ ಉಭಯ ಸನ್ನಿಧಿಯಿಂದ ಆಶೀರ್ವಾದ ಪತ್ರವು ದೊರೆಯುವುದೆಂದು ನಿರೀಕ್ಷಿಸುತ್ತಿದ್ದೇವೆ. " ಮುಂತಾಗಿ ಅರಿಕೆಮಾಡಿದ ಅವರ ಪತ್ರದಿಂದ ನಮಗೆ ಸ್ವಪ್ನದ ಸಿರಿಯು ಹಸ್ತಗತವಾದಂತೆ ಅತ್ಯಾನಂದ ವಾಯಿತು. ಶೀಘ್ರವಾಗಿ "ಮರುಲಾರಾಧ್ಯ ವಿಜಯ" ಕಾವ್ಯದ ಪ್ರತಿಲಿಪಿ ಯನ್ನು ೨೫೦ ರೂಪಾಯಿಗಳಷ್ಟು ಧನವ್ಯಯ ಮಾಡಿ ತರಿಸಿಕೊಂಡೆವು. ಈ ಕಾವ್ಯವನ್ನು ಕುರಿತು ಪ್ರತ್ಯೇಕ ಲೇಖವೂ ಈ ಅಂಕದಲ್ಲಿ ಮುಂದೆ ನಿರೂಪಿತ ವಾಗಿದೆ. ಸದ್ಯಃ ನಾವು ಸಂಪಾದಕೀಯದಲ್ಲಿ ಈ ಕಾವ್ಯಾಧಾರದ ಮೇಲಿಂದ ಇಷ್ಟನ್ನು ಮಾತ್ರ ಸ್ಪಷ್ಟವಾಗಿ ವಿವರಿಸುತ್ತೇವೆ. ಏನೆಂದರೆ:—ಉಜ್ಜಯಿನೀ ಕ್ಷೇತ್ರಗಳು ಎರಡು: ಉತ್ತರ ಹಿಂದುಸ್ಥಾನದಲ್ಲಿ ಕ್ಷಿಪ್ರಾನದೀ ದಂಡೆಯ ಮೇಲಿರುವ ಅವಂತಿ ಅಥವಾ ಕಾಲಿಕಾ ಉಜ್ಜಯಿನಿಯು ಒಂದನೆಯದು; ಈಗ ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲೂಕು ಕೊಟ್ಟೂರು ಬಳಿ ಇರುವ ಉಜ್ಜಯಿನಿಯು ಎರಡನೆಯದು. ದಾರುಕಾಚಾರ್ಯರ ಅವತಾರವೇ ದ್ವಾಪರ ಯುಗದಲ್ಲಿ ಮರುಳಾರಾಧ್ಯರ ರೂಪದಲ್ಲಿ ಪ್ರಕಟವಾಗಿ ಮೊದಲನೆಯ ಉಜ್ಜಯಿನಿಯಲ್ಲಿಯೇ ಸದ್ಧರ್ಮ ಪೀಠದ ಮಠದಲ್ಲಿ ವಿರಾಜಿಸಿ ಅಲ್ಲಿಯ ಅರಸಾದ ಶ್ರೌತಪಾಲ, ಅರ್ಧಾಂಗಿನಿ ಭಾನುಮತಿಯರಿಗೆ ವೀರಶೈವ ದೀಕ್ಷೆ ಯನ್ನಿತ್ತು ಕಾಪಾಡುವುದು.

ಅಲ್ಲಿಂದ ಕೇದಾರನಾಥಿಗಳಾದ ಮುಕ್ತಿ ಮುನಿಗಳು ಪಟ್ಟಕ್ಕೇರುವರು. ಮೂರನೆಯವರು ಸಿದ್ಧ ಮುನಿಗಳೆಂಬವರು ಬುದ್ಧಾವತಾರದ ಅನಂತರ ಅಶೋಕ ಚಕ್ರವರ್ತಿಯ ಸಮಯದಲ್ಲಿ ಪಟ್ಟಕ್ಕೇರುವರು. ಆ ಮೇಲೆ ಶಿವ ಮುನಿಗಳೆಂಬವರು ಅಧಿಕಾರಕ್ಕೆ ಬರುತ್ತಾರೆ. ಈ ಪೀಠದಲ್ಲಿ ಐದನೆಯವರು ಶಾಂತಮುನಿಗಳೆಂಬವರು ಅಧಿಕಾರಕ್ಕೆ ಬರುವರು. ಅವರು ಶ್ರೀ ಶಂಕರಾ ಚಾರ್ಯರ ಗುರುಗಳಾದ ಗೋವಿಂದಪಾದರಿಗೆ ಶ್ರುತಿಧರ್ಮವನ್ನು ಬೋಧಿ ಸಿದ ಗೋಕರ್ಣದ ಶ್ರೀ ನೀಲಕಂಠ ಶಿವಾಚಾರ್ಯರ ಕಾಲದಲ್ಲಿ ಪ್ರಸಿದ್ಧರಾಗಿ ದ್ದಂತೆಯೂ ಆ ಕಾಲದ ಭೂಪಾಲರಾದ ರಾಷ್ಟ್ರಕೂಟರು ನೀಲಕಂಠ ಶಿವಾ ಚಾರ್ಯರಿಗೆ ಶಿಷ್ಯರಾಗಿದ್ದಂತೆಯೂ ತಿಳಿಯುತ್ತಿದೆ. ಆರನೆಯವರು ಭವಭೂತಿ ಅಧಿಕಾರಕ್ಕೆ ಬರುತ್ತಾರೆ. ಅವರೇ ಭೋಜರಾಜನ ಆಸ್ಥಾನ ವಿದ್ವಾಂಸರಾದ

ಮುನಿಗಳು ಅಧಿಕಾರಕ್ಕೆ ಬರುತ್ತಾರೆ. ಅವರೇ ಭೋಜರಾಜನ ಆ ಸ್ಥಾನ ವಿದ್ವಾಂಸರಾದ ಭವಭೂತಿ ಕವೀಶ್ವರನೆಂತಲೂ ತಿಳಿಯುತ್ತಿದೆ. ಅಲ್ಲಿಂದ ಇಮ್ಮಡಿ ಮುಕ್ತಿಮುನಿ, ಶಕ್ತಿಮುನಿ, ಸಿದ್ಧಮುನಿ, ಇಮ್ಮಡಿ ಶಾಂತಮುನಿ, ಮುಮ್ಮಡಿ ಸಿದ್ಧಮುನಿ, ಸಾಂಬಮುನಿ, ಇಮ್ಮಡಿ ಶಿವಮುನಿ, ಈಶಾನಮುನಿ, ಎಂಬವರು ಕ್ರಮವಾಗಿ ಪಟ್ಟವಾಳುವರು. ಹದಿನೈದನೆಯ ಆಚಾರ್ಯರಾದ "ಶಂಭುಮುನಿ"ಯೆಂಬವರು ತಮ್ಮ ಕಾಲಕ್ಕೆ ಜೈನಮತದ "ವೀರಸೇನ"ನೆಂಬ ಮಹಾರಾಜನೊಡನೆ ಮನಸ್ತಾಪಮಾಡಿಕೊಂಡು ಅವನೊಡನೆ ಯುದ್ಧ ಮಾಡಿ ಮಠದಲ್ಲಿರಲಾರದೆ ಶಿಷ್ಯರೊಡನೆ ದೇಶಾಂತರಕ್ಕೆ ಹೊರಟು ಒಂದೆಡೆ ಪರ್ಣಶಾಲೆಮಾಡಿಕೊಂಡು ವಾಸಿಸುತ್ತ ಲಿಂಗೈಕ್ಯರಾಗುವ ಸಮಯದಲ್ಲಿ "ಮರುಳಸಿದ್ಧಾರಾಧ್ಯ" ಎಂಬವರಿಗೆ ಉತ್ತರಾಧಿಕಾರವನ್ನು ಸಲ್ಲಿಸುವರು. ಜೈನರು ಇವರ ಗುರುಕುಲಕ್ಕೂ ದಾಳಿಯಿಡುವರು. ಅವರು ಆಗ ಮನ ನೊಂದು ಉತ್ತರದಿಂದ ದಕ್ಷಿಣ ದೇಶಕ್ಕೆ ಪ್ರಯಾಣಮಾಡಿ ಪರಳಿಯಲ್ಲಿ ಬಂದು ವಾಸಮಾಡುವರು. "ಸಿದ್ಧಗಿರಿ"ಯಲ್ಲಿ ಸುಪ್ರಸಿದ್ಧರಾದ "ಶ್ರೀ ರೇವಣಸಿದ್ಧ"ರನ್ನು ಕಂಡು ಅವರ ಅಭಿಪ್ರಾಯದಂತೆ ಈಗಿರುವ ಕರ್ನಾಟಕದ ಉಜ್ಜಯಿನಿ ಗ್ರಾಮವನ್ನೂ ಮಠಮಂದಿರಗಳನ್ನೂ ಕಟ್ಟಿಸಿ ಅಲ್ಲಿಯೇ ನೆಲೆಸುವರು.

ಇವರ ತರುವಾಯ ಮುಕ್ತಿಮುನಿ ಎಂಬ ಮತ್ತೊಬ್ಬರಿಗೆ ಉತ್ತರಾಧಿಕಾರ ದೊರೆಯುತ್ತದೆ. ಸಿದ್ಧಲಿಂಗ, ಸಿದ್ಧೇಶ, ಸಿದ್ಧನಾಥ, ಎಂಬ ಇಪ್ಪತ್ತನೆಯ ಪಟ್ಟದವರೆಗೂ ಸಾಗಿದ ಬಳಿಕ "ಹೂಲಿಯ ಗುರುಕುಲ" ಸಂಭವರಾದ ಇನ್ನೊಬ್ಬ "ಮರುಳಸಿದ್ಧ" ಎಂಬವರು ಅಧಿಕಾರ ವಹಿಸುತ್ತಾರೆ. ಆಬಳಿಕ "ಸಿದ್ಧಮಲ್ಲ" ರಾಜದೇಶಿಕೇಂದ್ರರೆಂಬವರು ಪಟ್ಟಕ್ಕೆಬರುತ್ತಾರೆ. ಇವರು ಮಹಿಮರಾಗಿ ಮಕ್ಕಳಿಲ್ಲದವರಿಗೆ ಮಕ್ಕಳ ಫಲವನ್ನು ಕರುಣಿಸುವಲ್ಲಿ ಸಿದ್ಧರಾಗಿದ್ದರು. ಸಾವಿರಕ್ಕೊಂದು ಸಂತಾನಕೊಡುವಂತೆ ಇವರ ವ್ರತವಿದ್ದಿತು. ಒಮ್ಮೆ ಸಿಂದೋಗಿಗೆ ಇವರು ದಯಮಾಡಿಸಿದಾಗ ಆಊರ ಗೌಡನಿಗೆ ಸಾವಿರ ರೂಪಾಯಿಗೊಂದು ಸಂತಾನವೆಂದು ಆಶೀರ್ವದಿಸಿದರು. ಆತನಿಗೆ ಅದರಂತೆ ಪುತ್ರ ಸಂತಾನ ವಾಗಲು ಆ ವಿಷಯವನ್ನು ಅವನ ಮನೆಯ ಆಳಾದ ಮಾರನೆಂಬ ಮಾದಿಗನು ತಿಳಿದು ಸಂತಾನಹೀನನಾದುದರಿಂದ ತಾನೂ ಬಂದು ಗುರುಗಳಲ್ಲಿ ಮಕ್ಕಳನ್ನು ಕೇಳಿದನು. ಹಣವಿಲ್ಲದ್ದಕ್ಕಾಗಿ ತಮ್ಮ ನೇಮದಂತೆ ಸಾವಿರ ಕುಳ್ಳು ಕೊಡಲು ಒಪ್ಪಿಸಿ ಅವನಿಗೆ ಪುತ್ರ ಸಂತಾನವಾಗುವಂತೆ ಮಾಡಿದರು. ಅವನು ಸಂತೋಷಭರಿತನಾಗಿ ಗುರುಕೃಪೆಯಿಂದ ಹುಟ್ಟಿದ

ಅತಿಶುವಿಗೆ " ಮರುಳಸಿದ್ಧ "ನೆಂದು ಹೆಸರಿಟ್ಟನು. ಅವನು ದೊಡ್ಡವನಾದ ಬಳಿಕ ಗುರು ಸೇವೆಗೆ ಪ್ರಾರ್ಥಿಸಿದ್ದರಲ್ಲಿ ಮರುಳಸಿದ್ಧನ ಹೆಸರಿನಲ್ಲಿ ಸಿಂದೋಗಿಯಲ್ಲಿ ಒಂದು ಮಂದಿರವನ್ನೇ ಕಟ್ಟಿಸಿ ಪೂಜಿಸೆಂದು ಆಜ್ಞಾಪಿಸುತ್ತಾರೆ. ಅದೆ ಈಗ ಮಾದಿಗರು ಪೂಜಿಸುತ್ತಿರುವ ಗುಡಿ.

ಇವರ ತರುವಾಯ ಸಿದ್ಧನಾಥ, ಸಿದ್ಧೇಶ, ಸಿದ್ಧಲಿಂಗ ಎಂಬವರು ಈ ಪೀಠದ ಗುರುಗಳಾಗಿ ಮೆರೆದಂತೆ ಈ ಕಾವ್ಯದಲ್ಲಿ ಉಕ್ತವಾಗಿದೆ. ಆದುದರಿಂದ ಸಿಂದೋಗಿಯ ಈ ಮಾದಿಗಮರುಳಸಿದ್ದಪ್ಪನನ್ನೇ ಕುಲಾಭಿಮಾನದಿಂದ ದೇಪನು ಕೃತ್ರಿಮಕೈವಾಡಗಳಿಂದ ಆಚಾರ್ಯ ಮರುಳಸಿದ್ಧರ ಸ್ಥಲದಲ್ಲಿರಿಸಿ ಮೆರೆಸಲು ಯತ್ನಿಸಿರುವುದು ಎಷ್ಟು ಅನ್ಯಾಯ ಎಷ್ಟು ಪಾಪಮಯ ಎಂಬುದನ್ನು ವಿದ್ವಾಂಸರಾದ ವಾಚಕರು ತಿಳಿದುಕೊಂಡು ಸಂದೇಹ ನಿವೃತ್ತರಾಗಿ ಆದ್ಯಮರುಳಸಿದ್ಧರ ವಿಷಯದಲ್ಲಿ ತಿಲಾಂಶವೂ ಭಕ್ತಿವಿಮುಖರಾಗದೆ ವರ್ತಿಸಬೇಕಾಗಿ ನಾವಿಲ್ಲಿ ಸೂಚಿಸುವೆವು.

ನಾವುಗಳು ಸಂಕಲ್ಪಿಸಿದಂತೆ ಈ ಗ್ರಂಥವನ್ನು " ಮರುಳ ಸಿದ್ಧಾಂಕ " ಎಂಬ ಹೆಸರಿನಿಂದಲೇ ಹೊರಡಿಸಬೇಕಾಗಿದೆ; ಅದರೂ ಸಿದ್ಧರಿಗಿಂತ ಮರುಳಾರಾಧ್ಯರೇ ಪ್ರಾಚೀನರೆಂತ ನಿರ್ಧಾರವಾಗಿ ತಿಳಿದು ಬಂದಕಾರಣ ಈ ಗ್ರಂಥದಲ್ಲಿ " ಶ್ರೀ ಜಗದ್ಗುರು ಮರುಳಾರಾಧ್ಯರು ಮತ್ತು ಮರುಳಸಿದ್ಧರು ಬೇರೆ "ಯೆಂಬ ವಿಷಯುವನ್ನೂ ಸ್ಪಷ್ಟಪಡಿಸಿದೆ. ಈ ಗ್ರಂಥದಲ್ಲಿ ಪ್ರಕಟನೆಗಾಗಿ ವಿದ್ವಾಂಸರನೇಕರು ಮುಂಚೆಯೇ ಲೇಖನಗಳನ್ನು ಬರೆದು ಕಳುಹಿದ್ದಾರೆ. ಆದರೆ ನಾವು ಪ್ರಕಟಿಸುವ ಈ ಗ್ರಂಥವಿಸ್ತರಕ್ಕೆ ತಕ್ಕಂತೆ ಅವರವರ ಲೇಖನಗಳ ಕೆಲವಂಶಗಳನ್ನು ತಿದ್ದಿಯೂ ಕೆಲವಿಷಯಗಳನ್ನು ಕಡಮೆಮಾಡಿಯೂ ಪ್ರಕಟಿಸಬೇಕಾಯಿತು. ಅದಕ್ಕಾಗಿ ಲೇಖಕರ ಕ್ಷಮೆಯನ್ನು ಯಾಚಿಸುತ್ತೇವೆ.

ಈಗ ಪ್ರಕಟಿಸಿರುವ ಈ ಗ್ರಂಥವನ್ನು ಇಂಗ್ಲೀಷನಲ್ಲಿಯೂ ಮರಾಠಿಯಲ್ಲಿಯೂ ತೆಲುಗಿನಲ್ಲಿಯೂ ಭಾಷಾಂತರಮಾಡಿಸಬೇಕೆಂದೂ ನಿರ್ಧರಿಸಿದ್ದೇವೆ. ಅಲ್ಲದೆ " ಶ್ರೀ ಮರುಳಾರಾಧ್ಯ ವಿಜಯ " ಚರಿತ್ರಕಾವ್ಯವನ್ನು ಅಲಂಕಾರವಾಗಿ ಅಚ್ಚುಮಾಡಿಸಬೇಕೆಂತಲೂ ಸಂಕಲ್ಪಸಿದ್ದೇವೆ. ಮಹಾಪೀಠಾಚಾರ್ಯರ ಕೃಪೆಯಿಂದಷ್ಟೇ ಈ ಕಾರ್ಯಗಳು ಪೂರ್ಣಗೊಳ್ಳುವುದಿಲ್ಲ; ಸಮಾಜದ ಶ್ರೀಮಂತರ ಧನ ಸಹಾಯುವೂ ಅತ್ಯವಶ್ಯಕವಾಗಿ ಬೇಕಾಗುತ್ತದೆ. ಪ್ರಯುಕ್ತ ಈ ಗ್ರಂಥವನ್ನು ಪ್ರತಿಯೊಬ್ಬರೂ ಸಂಗ್ರಹಿಸುವ ಮೂಲಕ

ವೀರಶೈವ ಧರ್ಮಾಲಯದ ಸಂಪಾದಕ ಮಂಡಲವು ಮುಂದೆ ಶೀಘ್ರವಾಗಿ ಹೊರಡಿಸಬೇಕಾಗಿರುವ ಗ್ರಂಥಗಳ ವಿಷಯದಲ್ಲಿ ಪ್ರೋತ್ಸಾಹಿಬೇಕಾಗಿ ವಾಚಕರಲ್ಲಿ ಕೊನೆಗೊಮ್ಮೆ ನಿವೇದಿಸುತ್ತೇವೆ; ಅಲ್ಲದೆ ಈ ಸತ್ಯಪೂರ್ಣವಾದ ನಮ್ಮ ಬರಹವು ಶ್ರೀಮೂಲ ಮರುಳಸಿದ್ಧರ ಪಾದಕಮಲಗಳಿಗೆ ಅರ್ಪಣವಾಗಲೆಂದು ಪ್ರಾರ್ಥಿಸುವೆವು.

ಸಂಪಾದಕರು

ಶ್ರೀ ವೀರಶೈವ ಧರ್ಮಾಲಯ, ಹರಿಹರ



# ಉಜ್ಜಯಿನೀ ಕ್ಷೇತ್ರದ ಸಂಕ್ಷೇಪ ಪರಿಚಯ

ಸಂಗ್ರಾಹಕರು:— **ಯಂ. ವಿ. ಮಠದ, ಹರಿಹರ.**

ಉಜ್ಜಯಿನೀ ಕ್ಷೇತ್ರವು ೧೬ ಮೈಲು ವಿಸ್ತಾರವುಳ್ಳ ಭೂಮಿಯನ್ನು ವ್ಯಾಪಿಸಿದೆ. ಈ ಭೂಭಾಗದ ಮಧ್ಯದಲ್ಲಿ ಶ್ರೀ ಮರುಳಸಿದ್ಧೇಶ್ವರ ಮಹಾ ಲಿಂಗವುಂಟು. ಈಕ್ಷೇತ್ರದ ಒಂದೊಂದು ಪ್ರದೇಶವು ಒಂದೊಂದು ಹೆಸರಿನಿಂದ ೯ ಭಾಗವಾಗಿ ಪ್ರಸಿದ್ಧವಾಗಿದೆ.

| | | |
|---|---|---|
| ೧. | ಉಜ್ಜಯನೀ ಪಾದಕ್ಷೇತ್ರ | ಮಧ್ಯ |
| ೨. | ಬೆಳದೇರಿ ಪಾದ | ಪೂರ್ವ |
| ೩. | ಬೆನಕನಹಳ್ಳಿ ಪಾದ | ಅಗ್ನಿ |
| ೪. | ಗದ್ದಿಗೆ ಆಲಪಾದ | ಯಮ |
| ೫. | ಸೊಕ್ಕೆ ಪಾದ | ನೈರುತ್ಯ |
| ೬. | ಸಾಸ್ವಿಹಳ್ಳಿ ಪಾದ | ಪಶ್ಚಿಮ |
| ೭. | ಹಾರಕನಹಳ್ಳಿ ಪಾದ | ವಾಯುವ್ಯ |
| ೮. | ಭುಜಂಗ ಪಾದ | ಕುಬೇರ |
| ೯. | ಮಾಚೇನಹಳ್ಳಿ ಪಾದ | ಈಶಾನ್ಯ |

ಹೀಗೆ ಒಟ್ಟು ಒಂಬತ್ತು ಪಾದಗಳು ಪ್ರಸಿದ್ಧವಾಗಿವೆ. ಉಜ್ಜಯಿನೀ ಕ್ಷೇತ್ರ ಪ್ರದೇಶವು ಶಿವಲಿಂಗಗಳಿಂದ ತುಂಬಿಕೊಂಡಿದೆ. ಇಂಥ ಭೂಮಿಯಲ್ಲಿ ಪವಿತ್ರತೆಗೆ ಕೊರತೆಯಿಲ್ಲ. ಅದರಲ್ಲಿಯೂ ವೀರಶೈವರಿಗೂ ತದಾಶ್ರಿತರಿಗೂ ಗುರುಪೀಠವೆನಿಸಿದ ಜಗದ್ಗುರು ಸದ್ಧರ್ಮಪೀಠವು ವಿರಾಜಮಾನವಾಗಿರುವದರಿಂದ ವೀರಶೈವ ಭಕ್ತ ಮಾಹೇಶ್ವರರಿಗೆ ಮುಕ್ತಿದಾಯಕ ಪ್ರಥಮ ಕ್ಷೇತ್ರವೆಂದರೆ ಅತಿಶಯೋಕ್ತಿಯಾಗಲಾರದು. ಈ ಕ್ಷೇತ್ರಕ್ಕೆ (೧) ಸ್ಮಶಾನ (೨) ಊಷರ (೩) ವನ (೪) ಕ್ಷೇತ್ರ (೫) ಪೀಠ ಹೀಗೆ ಒಂದಕ್ಕಿಂತ ಒಂದು ಹೆಚ್ಚು ಶೋಭೆಯನ್ನುಂಟುಮಾಡತಕ್ಕವಾಗಿವೆ.

**"ಗುರುಯಾತ್ರಾ ದೇವಯಾತ್ರಾ ತೀರ್ಥಯಾತ್ರೇತಿ ಚ ತ್ರಿಧಾ"**

ಈ ಪ್ರಮಾಣಾನುಸಾರ ಉಜ್ಜಯಿನೀ ಕ್ಷೇತ್ರ ಭೂಮಿಯು ಗುರು-ದೇವ—ತೀರ್ಥ ಈ ಮೂರರಿಂದಲೂ ಕೂಡಿದುದಾಗಿದ್ದು ಸರ್ವಲಕ್ಷಣ

ಭರಿತವಾಗಿರುವುದು. ಈ ಕ್ಷೇತ್ರದಲ್ಲಿರುವ ಮುಖ್ಯ ದೇವತೆಗಳನ್ನು ತೀರ್ಥಗಳನ್ನು ಈ ಕೆಳಗೆ ವಿವರಿಸಿದೆ.

**ಶ್ರೀ ಮರುಳ ಸಿದ್ಧೇಶ್ವರನು ಈ ಕ್ಷೇತ್ರದ ಮುಖ್ಯ ಅಧಿಪತಿ.**

ವಾಪಿ ಬೈರವ ತಟಾಕ ನಂದಿ ಈಶ್ವರ ದೇವ ವಿಷ್ಣು ತೀರ್ಥ ವಿನಾಯಕ, ಗಿರಿ ವೀರಭದ್ರ ಚಲುಮಿ ವಟುವೃಕ್ಷ ಬಿಲ್ವವೃಕ್ಷ ಶಮೀವೃಕ್ಷ ಅತಗ್ವರ ವೃಕ್ಷ ಪಲಾಶ ವೃಕ್ಷ ದೇವದಾರು ವೃಕ್ಷ ಅಶ್ವತ್ಥವೃಕ್ಷ ಹರಿಚಂದನವೃಕ್ಷ ಕುಶಸ್ಥಲ ಇತ್ಯಾದಿಗಳಿಂದ ಈ ಕ್ಷೇತ್ರವು ಪವಿತ್ರವೂ ಮನೋಹರವೂ ಆಗಿದೆ.

**ನಂದಿವಿಚಾರ:—** ಅನಾದಿ ಸಿದ್ಧವಾದ ಧರ್ಮವು ನಂದಿರೂಪವೆಂತಲೂ ಆ ಶಬ್ದಕ್ಕೆ ವೃಷಭ ಬಸವ ಮುಂತಾದ ನಾಮಗಳೂ ಜನಜನಿತವಾಗಿರುವವು. ಈ ನಂದಿರೂಪ ಧರ್ಮವು ಕ್ರಿಯಾಪಾದ, ಜ್ಞಾನಪಾದ, ಯೋಗಪಾದ, ಚರ್ಯಾಪಾದಗಳೆಂದು ಆಗಮಗಳಲ್ಲಿ ನಾಲ್ಕು ವಿಧವಾಗಿ ಪ್ರತಿಪಾದಿತವಾಗಿದೆ. ಧರ್ಮವು ಚತುಷ್ಪಾದಿ ನಂದೀಶ್ವರರ ಆಕಾರವನ್ನು ತಳೆದು ಶಿವನ ವಾಹನವಾಗಿರುವುದೆಂದೂ ಕೃತಯುಗದಲ್ಲಿ ಧರ್ಮವು ನಂದಿರೂಪದಿಂದ ಚತುಷ್ಪಾಗಳನ್ನೂರಿನಿಂತಿರುವದೆಂದೂ ಆಗಮಗ್ರಂಥಗಳಲ್ಲಿ ಉಕ್ತವಾಗಿದೆ. ಇದರ ನಿದರ್ಶನವೋ ಎಂಬಂತೆ ಈ ಕ್ಷೇತ್ರದಲ್ಲಿ ಚತುಷ್ಪಾಗಳನ್ನೂರಿನಿಂತಿರುವ ಸದ್ಧರ್ಮ ರೂಪಿ ನಂದೀಶ್ವರನು ಮರುಳಸಿದ್ಧೇಶ್ವರ ದೇವಾಲಯದ ಶಿಖರದ ಗುಮ್ಮಟದಲ್ಲಿ ಪ್ರತಿಮಾರೂಪದಿಂದ ಸ್ಥಾಪಿಸಲ್ಪಟ್ಟಿರುವನು. ಮತ್ತು ಈ ಕ್ಷೇತ್ರದಲ್ಲಿ ಮರುಳಸಿದ್ಧೇಶ್ವರಸ್ವಾಮಿಯು ಜಗದಾಚಾರ್ಯರೂಪದಿಂದ ಶೋಭಿಸುತ್ತ ಸದ್ಧರ್ಮನಾಮಕ ಪೀಠವನ್ನು ನೆಲೆಗೊಳಿಸಿದ್ದಾನೆ. ಸದ್ಧರ್ಮವು ಸರ್ವರಿಂದಲೂ ಕೋರಲ್ಪಡತಕ್ಕದ್ದಾದ್ದರಿಂದ ಸದ್ಧರ್ಮ ರೂಪಿ ಬಸವನಿಗೆ “ ಕೋರುಬಸವ ” ನೆಂದು ರೂಢಿ ಇರುತ್ತದೆ. ಈ ಕೋರು ಬಸವೇಶ್ವರನ ಹೊರತು ಮತ್ತಾವ ನಂದಿರೂಪದ ಪ್ರತಿಮೆಗಳೂ ಯಾವ ದೇವಾಲಯದಲ್ಲಿಯೂ ಚತುಷ್ಪಾದವನ್ನೂರಿನಿಂತಿಲ್ಲ. ಮರುಳಸಿದ್ಧನಿಗೆ ಶಿವಾಗಮಗಳಲ್ಲಿ ನಂದಿಗೋತ್ರನಾಥನೆಂದು ಸ್ತುತಿಯಿದೆ.

**ಈ ಕ್ಷೇತ್ರದಲ್ಲಿರುವ ನಂದಿಗಳು**

೧. ಉನ್ನತ ಸದ್ಧರ್ಮನಂದಿ (ಕೋರುಬಸವ)

೨. ಮಹಾನಂದಿ (ದೊಡ್ಡಬಸವ)

೩. ಸುವರ್ಣನಂದಿ (ಬಂಗಾರಬಸವ)
೪. ಮುಗ್ಧನಂದಿ
೫. ಗುಪ್ತನಂದಿ (ಭಾನುಕೂಪಗತ)
೬. ಚಣನಂದಿ (ಕಡಲೆಬಸವ ಮಜ್ಜನಕೂಪಗತ)
೭. ಪುರದ್ವಾರನಂದಿ (ಊರಬಾಗಿಲ ಬಸವ)
೮. ಉತ್ತರನಂದಿ (ಕಾಶೀಬಸವ)
೯. ಮಾಶಿಲಾ ಏಕನಂದಿ (ಮಾಶಿಲ ಒಂಟಿಬಸವ (ಉಪಾರಾಮಗತ)
೧೦. ಪುಣ್ಯವೀಥಿನಂದಿ (ಪೇಟೆಬಸವ)
೧೧. ಆದಿನಂದಿ (ನಾಗಪಲ್ಲಿಬೀದಿ)
೧೨. ಸುಧಾಕರನಂದಿ
೧೩. ಊರಣಬಸವ (ಉಣ್ಣೆಬಸವ)
೧೪. ಮೂಕವೃಷಭ (ಮೂಗಬಸವ)
೧೫. ವಿನಾಯಕ ಪಲ್ಲಿನಂದಿ (ಬೆನಕನಹಳ್ಳಿ ಬಸವ)
೧೬. ಶುಕ್ಲತರಂಗನಂದಿ (ಬೆಳೆದರೆ ಬಸವ)

## ಈ ಕ್ಷೇತ್ರದಲ್ಲಿರುವ ಶಿವಲಿಂಗಗಳು

(೧) ಅನಾದಿ ಮರುಳಸಿದ್ಧೇಶ್ವರಲಿಂಗ (ಕ್ಷೇತ್ರಾಧಿಪತಿ) (೨) ವಿಶ್ವೇಶ್ವರಲಿಂಗ (೩) ವಿರೂಪಾಕ್ಷಲಿಂಗ (೪) ರಾಮೇಶ್ವರಲಿಂಗ (೫) ಮಲ್ಲಿಕಾರ್ಜುನಲಿಂಗ (೬) ಗೋಗಿರೆ ಸಿದ್ಧೇಶ (೭) ಮಂಡಿಯೋಗಿ ಸಿದ್ಧೇಶ (೮) ಜಟಾಯೋಗಿ.

## ಭೈರವರು

(೧) ಕ್ಷೇತ್ರಪಾಲ ಭೈರವ, (ಕ್ಷೇತ್ರನಾಥನ ಪಶ್ಚಿಮ ದ್ವಾರವೀಥಿಯಲ್ಲಿ)
(೨) ಗುಹಪಾಲ ಭೈರವ (ಭೈರವೇಶದುರ್ಗದಲ್ಲಿ)

## ದೇವಿಯರು

(೧) ಮಹಾಗೌರೀ (೨) ಚೌಡಾಂಬಾ (೩) ಸುವರ್ಣಾಂಬಾ (೪) ಗಜಲಕ್ಷ್ಮೀ (೫) ಸರ್ವೇಶ್ವರಿ (ಯಲ್ಲಮ್ಮ) (೬) ಕಪಾಲದುರ್ಗಾದೇವಿ (೭) ನಿಂಬಾವೀಥಿ ದುರ್ಗಾದೇವಿ ( ಬೇವಿನಮರದದುರ್ಗಿ ) (೮) ಮುಕ್ತಿಭಕ್ತಿಪ್ರದ ಭದ್ರದೇವಿಗಳು (೯) ಗೌರಸಮುದ್ರಗತಮಾರಿಕಾಂಬಾ

(೧೦) ವಟಸಾವಿತ್ರೀ (೧೧) ಬಿಲ್ವದೇವೀ (೧೨) ಶಮೀದೇವೀ (೧೩) ಬಾಷ್ಪಾಂಬಾ (ಕಣ್ಣೀರಮ್ಮ)

## ಈ ಕ್ಷೇತ್ರದಲ್ಲಿರುವ ವಿಷ್ಣುಗಳು

(೧) ಚತುರ್ಬಾಹುನಾರಾಯಣ (೨) ವೇಣುಗೋಪಾಲ (ಮಹಾ ದೇವಾಲಯಗತ) (೩) ವೇಣುಗೋಪಾಲ (ಶಿಖರಗತ) (೪) ನರಸಿಂಹ ಮೂರ್ತಿ (೫) ವರಾಹಮೂರ್ತಿ

## ಈ ಕ್ಷೇತ್ರದಲ್ಲಿರುವ ತೀರ್ಥಗಳು

(೧) ಗುರುಕೂಪ ಮಹಾತೀರ್ಥ (೨) ಸಿದ್ಧೇಶ್ವರ ಮಜ್ಜನಕುಂಡ ತೀರ್ಥ (೩) ಗೌರೀಮಜ್ಜನಕುಂಡ ತೀರ್ಥ (೪) ಗೌಪ್ಯನಂದಿ ಭಾನು ರೂಪ ತೀರ್ಥ (೫) ಸಿದ್ಧೇಶಕುಲ್ಯ ತಿರ್ಥ (೬) ಧ್ಯಾನಮಂಟಪ ಪುರೋ ಗತ ಶುದ್ಧ ತೀರ್ಥ.

## ಈ ಕ್ಷೇತ್ರದಲ್ಲಿರುವ ವಿನಾಯಕರು

(೧) ದೇವಪಾರ್ಶ್ವಸ್ಥ ವಿನಾಯಕ (೨) ಗುರುಪೀಠಗಳ ಸಿದ್ಧಿ ವಿನಾಯಕ (೩) ಗುರುಮಠಗಳ ಸುಂದರ ವಿನಾಯಕ (೪) ಮೋದಕ ಪ್ರಿಯ ವಿನಾಯಕ (೫) ಪ್ರತಿಗ್ರಹೇ ಉಚ್ಛಿಷ್ಟಗಣನಾಥ (ಗಣೇಶಪತ್ಯ ಪ್ರತಿಷ್ಠಿತ)

## ಈ ಕ್ಷೇತ್ರದಲ್ಲಿರುವ ಗಿರಿಗಳು

(೧) ಕಲಿಕಾಲ (ಕರಿಕಾಲ-ಗೋಗಿರಿ) ಗೋಗಿರಿ (೨) ಭೈರವಗಿರಿ (೩) ಅವಸರ ಗಿರಿ

## ಈ ಕ್ಷೇತ್ರದಲ್ಲಿರುವ ತಟಾಕಗಳು

(೧) ಉಜ್ಜಯಿನೀ ಮಹಾಸಿದ್ಧ ಪಾದೋದಧಿ (೨) ಮಾಚಯಪಲ್ಲೀ ಸಿದ್ಧಪಾದೋದಧಿ (೩) ವಾನರಪುರತಟಾಕ (ಕನ್ನೀರಂಬಾಯಾತ್ರೆ) (೪) ಜಂಗಮಸಾಗರ (ಅಯ್ಯನಕಟ್ಟೆ)

## ಈ ಕ್ಷೇತ್ರದಲ್ಲಿರುವ ವಾಪಿಗಳು

(೧) ಭೈರವಗಿರಿ ವಾಪಿ (೨) ಮೂಕನಂದಿಪುರೋವಾಪಿ

## ಪ್ರವಾಹಗಳು

(೧) ಹರಿದ್ರಾಪ್ರವಾಹಿನಿ (೨) ಲವಣಪ್ರವಾಹಿನಿ (೩) ಶುಕ್ಲತರಂಗಿಣಿ

## ಈ ಕ್ಷೇತ್ರದಲ್ಲಿರುವ ವೀರಭದ್ರದೇವರು

(೧) ಉದ್ಯಾನ ಶಾಂತವೀರೇಶ್ವರ (೨) ದುಷ್ಟನಿಗ್ರಹವೀರೇಶ್ವರ (೩) ಭೈರೇಶ್ವರ (೪) ಸಿದ್ಧವೀರೇಶ್ವರ (ಶಿಖರಗತ) (೫) ಮುಗ್ಧವೀರೇಶ್ವರ

## ಬ್ರಹ್ಮರುಗಳು

(೧) ಚತುರ್ಮುಖ ಬ್ರಹ್ಮ (೨) ಪುಸ್ತಕಧರ ಬ್ರಹ್ಮ (೩) ಗೋಲ (ಗುಂಡು) ಬ್ರಹ್ಮ

## ಈಶ್ವರ ಮೂರ್ತಿಗಳು

(೧) ಡಮರುಧರ ಸಂಹಾರ ರುದ್ರ (೨) ಶ್ರೀ ಮರುಳಸಿದ್ಧೇಶ್ವರ ಮಹಾಲಿಂಗ.

## ಮರುಳಸಿದ್ಧೇಶ್ವರ ಮಹಾಲಿಂಗ

ಇದು ಜಗದ್ಗುರು ಸದ್ಧರ್ಮ ಸಿಂಹಾಸನಮಠದ ಆವರಣದ ಮಧ್ಯಭಾಗದಲ್ಲಿ ಅತ್ಯಂತ ಸುಂದರವಾದ ಮಂದಿರದ ಒಳಭಾಗದಲ್ಲಿ ಉತ್ತರಾಭಿಮುಖವಾಗಿದೆ. ಪೂರ್ವ ಪಶ್ಚಿಮ ಉತ್ತರ ದ್ವಾರಗಳಿಂದ ಕೂಡಿದ ಈ ಮಂದಿರವು ಜಗದ್ಗುರು ಮಹಾಸ್ವಾಮಿಗಳವರ ವಶದಲ್ಲಿದ್ದು ಅವರ ಪರವಾಗಿ ಅವರಿಂದ ಮಹಾಲಿಂಗಕ್ಕೆ ದಿನಕ್ಕೆ ನಾಲ್ಕುಸಾರೆ ಶಿವಾಗಮ ರೀತ್ಯಾ ಪೂಜೆ ನಡೆಯುತ್ತದೆ.

| ಪೂಜೆಯ ಕಾಲ | ಪೂಜೆಯ ಹೆಸರು |
|---|---|
| ಪ್ರಾತಃ ಸಂಧ್ಯಾ | ಕವಚಯುಕ್ತ ಉದಯ ಗುರುಪೂಜಾ |
| ಮಾಧ್ಯಾಹ್ನ ಸಂಧ್ಯಾ | ಮಹಾಭೋಗಪೂಜಾ |
| ಸಾಯಂ ಸಂಧ್ಯಾ | ಕವಚಯುಕ್ತ ಅವಸರಪೂಜಾ |
| ಅರ್ಧರಾತ್ರಿ | ಕೇವಲ ಭಸ್ಮರುದ್ರಾಕ್ಷಿಯುಕ್ತ ಅವಸರ ಪೂಜಾ (ಲಘು) |

ಮೂರು ಪೂಜೆಗಳು ಮಾತ್ರ ಸರ್ವಜನರಿಂದಲೂ ನೋಡಲು ಯೋಗ್ಯವಾಗಿದ್ದು ಅರ್ಧರಾತ್ರಿ ಪೂಜೆಯು ಏಕಾಂತವಾಗಿ ನಡೆದು ತರುವಾಯ ಪ್ರೇಕ್ಷಕರನ್ನು ಬಿಡದೆ ನಿಃಶಬ್ದವಾಗಿ ಶಯನರೀತಿಯನ್ನು ತೋರಿಸುವುದು. ಆ ಕಾಲದಲ್ಲಿ ಘಂಟಾನಾದಾದಿ ಯಾವ ಶಬ್ದಗಳೂ ನಡೆಯುವುದಿಲ್ಲ. ಆಗಿನ ಸ್ತಬ್ಧತೆಯೂ ಆನಂದವೂ ಅವರ್ಣನೀಯವಾದುದು.



ಉಜ್ಜಯನಿಯಲ್ಲಿ ತಲೆಬೋಳು ಸಿದ್ಧೇಶ್ವರ ದೇವಾಲಯ

# ಮೂಲಮರುಳಸಿದ್ಧರ ಬಗೆಗೆ ದೇಪಕವಿಯ ಮತ್ತು ಇತರರ ತಪ್ಪುಕಲ್ಪನೆಗಳು

ಲೇ:—ಶ್ರೀ ಶಿವ. ಶ್ರೀಶೈಲ.

## ಶ್ರೀಯುತ ಅ. ನ. ಕೃಷ್ಣರಾಯರು ಪ್ರಕಟಿಸಿದ ಮರುಳಸಿದ್ಧ ಕಾವ್ಯದ ಪೀಠಿಕೆಯ ಮೇಲೆ ನಾಲ್ಕುಮಾತು.

ಮರುಳಸಿದ್ಧಕಾವ್ಯದ **೧ನೆಯ ಸಂಧಿ**—ಶ್ರೀ ಶೈಲದಲ್ಲಿದ್ದ ಶಿಲಾದ ಋಷಿಯ ಹೆಂಡತಿಗೆ ಪೂಜಾಕಾಲದಲ್ಲಿ ಮುಟ್ಟು ತೋರುವುದೂ ಅದರಿಂದ ಸುಪ್ರಭೆ ಖಿನ್ನಳಾಗುವುದೂ ಇಷ್ಟರಿಂದಲೇ ಋಷಿಯು ಹೊಲೆಯರಲ್ಲಿ ಹುಟ್ಟೆಂದು ಅವಳನ್ನು ತಪಿಸುವುದೂ ಆತನ ಗೃಹಸ್ಥಾಶ್ರಮ ಧರ್ಮಕ್ಕೆ ಭೂಷಣವಲ್ಲ. ಆ ಮುಂದೆ ಕಗ್ಗಲ್ಲಪುರಕ್ಕೆ ಪೂರ್ವದೇಹ ಸಹಿತಳಾಗಿ ಸುಪ್ರಭೆ ಬರುವುದೂ ಅಸಂಗತ.

**೨ನೆಯ ಸಂಧಿ**—ಶ್ರೀ ಶೈಲದಿಂದ ಸುಪ್ರಭೆ ಪೂರ್ವದೇಹ ಸಮೇತಳಾಗಿ ಕಗ್ಗಲ್ಲಪುರಕ್ಕೆ ಬಂದು ಕೂಚಿಮಾರನೆಂಬ ಮಾದಿಗನಿಗೆ ಹೆಂಡತಿಯಾಗುವುದು ಇದಾವ ಧರ್ಮ? ಸುಪ್ರಭೆಯು ಮಾದಿಗ ಕುಲದಲ್ಲಿ ಯಾರ ಹೊಟ್ಟೆಯಲ್ಲಿ ಜನಿಸಿದಳೆಂಬುದು ಇಲ್ಲಿ ಉಕ್ತವಾಗಿಲ್ಲ. ಅಲ್ಲದೆ ಕೂಚಿಮಾರನ ಸ್ಥಿತಿಯೂ ಹೀಗೆಯೇ ಆಗಿದೆ. ಎಂದ ಮೇಲೆ ಶಿಲಾದ ಮುನಿಪತ್ನಿಯು ವ್ಯಭಿಚಾರದಿಂದ ಕೂಚಿಮಾರನನ್ನು ಕೂಡಿದಂತೆಯೂ ಅವರಿಗೆ ಮರುಳಸಿದ್ಧನು ಜನಿಸಿದಂತೆಯೂ ಅರ್ಥವಾಗುವ ಹಾಗೆ ಕವಿಯು ಬರೆದಿರುವುದು ಅವನ ಸಂಕರ ಜನ್ಮದ ಸ್ವಭಾವವಲ್ಲವೇ? (ಪೀ. ಪು. ೩೧)

ಕೊಲ್ಲಾಪುರದ ಕರಟಾಸುರನ ಹೆಂಡತಿಯೂ ಮಾಯಾದೇವಿ, ಮಗಳೂ ಮಾಯಾದೇವಿ. ಎಂತಹ ಅಸಂಗತ! ಇಬ್ಬರಿಗೂ ಒಂದೇ ಹೆಸರು ಬರಲು ಕಾರಣವೇನು? ಯಾತ್ರಾರ್ಥಿಯಾದ ಶಿವರೂಪಿಜಂಗಮನು ಕೂಚಿಮಾರನನ್ನು ಪಾದರಕ್ಷೆಗಳು ಬೇಕೆಂದು ಕೇಳಿದ್ದಕ್ಕೆ ತನ್ನ ಹೆಂಡತಿಯ ಮೊಲೆಗಳನ್ನು ಕೊಯ್ದು ಕೆರಗಳನ್ನು ಮಾಡಿಕೊಟ್ಟ. ಸರಿ! ಅವರ ಪ್ರಾಣ ಉಳಿಯಿತೇ? ಮೊಲೆಗಳ ತೊಗಲು ಕೆರಗಳನ್ನು ಮಾಡಲು ಬರುವುದೆಂದು ಈಗಿನ ಮೊಚ್ಚಿಗಾರರಾದರೂ ಒಪ್ಪುವರೇ? ಮೊಲೆಗಳು ಕೇವಲ ಮಾಂಸದ ಕರಣೆಗಳಲ್ಲವೇ? ಕೂಚಿಮಾರನು ಇಂತಹ ಲೌಕಿಕಾಸಂಗತವಾದ ಕೆಲಸಮಾಡುವುದಕ್ಕಿಂತಲೂ

ತನ್ನ ದಪ್ಪನಾದ ಹಾಗೂ ಪವಿತ್ರವಾದ ಎದೆಯ ತೊಗಲನ್ನು ಕಿತ್ತು ಪಾದ ರಕ್ಷೆ ಮಾಡಬಹುದಾಗಿತ್ತಲ್ಲವೇ?

ಶಿವರೂಪಿ ಜಂಗಮನ ವರದಿಂದ ಕೂಚಿಮಾರನಿಗೆ ಗಂಡುಮಗುವಾಗ ಬೇಕಾಯಿತು. ಆದರೆ ಸುಪ್ರಭೆ (ಶಿಲಾದ ಪತ್ನಿ) ತನ್ನ ನಾಮವನ್ನು ಬದಲು ಮಾಡುವದಿಲ್ಲ; ಅದೇ ಹೆಸರಿನಲ್ಲಿಯೇ ಗಂಡುಮಗುವನ್ನು ಕೂಚಿಮಾರನಿಗೆ ಹಡೆಯುತ್ತಾಳೆ. ನನ್ನ ಕಾರ್ಯ ಮುಗಿಯಿತೆಂದು ಶ್ರೀಶೈಲಕ್ಕೆ ಹೋಗಿ ಶಿಲಾದ ಋಷಿಯನ್ನು ಕಾಣುತ್ತಾಳೆ. ಹೀಗೆಮಾಡಿ ಬಂದುದಕ್ಕೆ ಋಷಿಗೆ ಸಂತೋಷವಾಗುತ್ತದೆ. ಋಷಿಯು ಅವಳಿಗೆ ಮೊದಲಿನ ಅವಾಸಕೊಡುತ್ತಾನೆ. ಇದೆಂತಹ ಅನ್ಯಾಯ? (ಪೀಠಿಕೆ. ಪು. ೩೦ – ೩೧)

**೩ನೆಯ ಸಂಧಿ**—ಈ ವಿಧವಾಗಿ ಕೂಚಿಮಾರನಿಂದ ಸುಪ್ರಭೆಯಲ್ಲಿ ಹುಟ್ಟಿದ ಗಂಡು ಮಗು ತಾಯಿಯಿಂದ ದೂರಾಗಿ ಇಪ್ಪತ್ತೊಂದು ದಿನ ವಾಯಿತು. ಸ್ತನ್ಯಪಾನಾದಿಗಳಿಲ್ಲದೆ ಶಿಶು ಬದುಕಿದುದು ಹೇಗೆ? ಕಗ್ಗಲ್ಲ ಪುರದ ಬಾಚಿಗೌಡನು ಹೆಂಡತಿ ಮಲ್ಲಮ್ಮಗೆ ಆ ಶಿಶುವನ್ನು ತಂದು ಕೊಡು ವನು; ಸರಿ! ಆಗ ಮಲ್ಲಮ್ಮನು ಎಲ್ಲಿಯ ಮಗುವಿದು, ಎಂದು ಕೇಳುವದೇಕೆ? ಕೂಚಿಮಾರನು ಬಾಚಿಗೌಡನ ಆಳಾಗಿದ್ದ ಮೇಲೆ ಸುಪ್ರಭೆ ಬಸಿರಿದ್ದ ಸಂಗತಿ ಮುಂತಾದುದು ಮಲ್ಲಮ್ಮಗೆ ಗೊತ್ತಿರಲೇಬೇಕು. ತುಂಬುರ ನಾರದ ಸಹಿತ ಸುರಕಿನ್ನರರು ಬಂದು ಆ ಶಿಶುವನ್ನು ಸ್ತುತಿಸಿದ ಮೇಲೆ ಮಲ್ಲಮ್ಮನಿಗೆ ಸಂದೇಹ ಹೋಗಿ ಶಿಶುವನ್ನು ಪಾಲಿಸಹತ್ತಿದಳು. ಸುಪ್ರಭೆಯು ಮಗುವನ್ನು ಹೆತ್ತುದೇ ದಿಟವಾದ ಮೇಲೆ ಸ್ವಲ್ಪ ದಿನ ಪಾಲನೆಮಾಡಿ ಮಗು ದೊಡ್ಡದಾದ ಬಳಿಕ ಹೋಗಬಹುದಿತ್ತಲ್ಲ? ಜನನವಾದ ಕೂಡಲೇ ಮಗುವಿನಿಂದ ತಾಯಿ ಯನ್ನು ದೂರಮಾಡಿಸಿರುವುದು ತಾಯಿಯ ಮೇಲೆ ವ್ಯಭಿಚಾರವನ್ನು ಹೊರಿಸಿ ದಂತಾಗಿಲ್ಲವೇ ? (ಪೀಠಿಕಾ ಪು. ೩೧)

ಈ ಮರುಳ ದೊಡ್ಡವ[ನಾ]ಗಿ ಬಾಚಿಗೌಡನ ದನಗಳನ್ನು ಕಾಯುತ್ತ ಅಲ್ಲಿಂದ [ಕೆ]ಲವು ಲೀಲೆಗಳನ್ನು ಮಾಡಿದನು. ಬ್ರಾಹ್ಮಣರ ಯಜ್ಞ ಮಂಟಪ ದಲ್ಲಿ ಪ್ರವೇಶಿಸಿ ಅಲ್ಲಿಮಾಡಿದ ಅನ್ನ[ವ]ನ್ನು ಕುಲಹವೆನೆಂಟು ಜಾತಿಗೆ ಹಾಕಿ ದನು ಇತ್ಯಾದಿ ಅನೇಕ ಈತನ ಕೃತಿಗಳಿಂದ ಸಿಟ್ಟಾದವರು ಅರಸನಾದ (ಯಾವ ಊರೋ ಹೇಳಿಲ್ಲ) ನೊ[ಡ]ಬನಲ್ಲಿ ಹೇಳಿದರು. ಅರಸನು ಮರುಳ ನನ್ನು ಆನೆಯ ಕಾಲಿಗೆ ಹಾಕಿಸಿದರೂ ಈತನಿಗೆ ಮೃತಿಬರಲಿಲ್ಲ; ಸರಿ ! ಆ

ಮೇಲೆ ಆ ಆನೆ ಈ ಮರುಳನನ್ನು ತಲೆ ಮೇಲೆ ಇಟ್ಟುಕೊಂಡು ವಿಂಧ್ಯಪರ್ವತ ದಲ್ಲಿ ಸಾಗಿತು, ಎಂದು ಬರೆದಿದ್ದಾನೆ. ವಿಂಧ್ಯವೆಲ್ಲಿ? ಆನೆಗೋಡು ಎಲ್ಲಿ?

೪ನೆಯ ಸಂಧಿ—ಚಿನ್ಮೂಲಗಿರಿಯ ಗುರು ರೇವಣಸಿದ್ಧರಿಂದ ದೀಕ್ಷೆ ಪಡೆದು ಪಂಚಾಕ್ಷರೀ ಉಪದೇಶಹೊಂದಿ(ಚಿನ್ಮೂಲಗಿರಿಯಾವುದೋಹೇಳಿಲ್ಲ) ಅವರ ಆಜ್ಞೆಯಂತೆ ಎಲ್ಲಾ ದೇಶ ಸಂಚರಿಸಿ ಭಿಕ್ಷವ ತಂದು ಅರ್ಪಿಸಿದ ಮರುಳನು ಮೊದಲು ಅಲ್ಲಿಗೆ ಬರಬೇಕಾಯಿತಲ್ಲವೇ ? ಇವನನ್ನು ಸಾಕಿದ ಬಾಚಿಗೌಡ ಮಲ್ಲಮ್ಮ ಇವರಾದರೂ ಲಿಂಗಧಾರಿಗಳಾಗಿದ್ದರೆ ಮರುಳನಿಗೆ ಬಾಲ್ಯದಲ್ಲಿಯೇ ಲಿಂಗಧಾರಣೆಮಾಡಿಸುತ್ತಿದ್ದರು. ಆ ಮೇಲೆ ಮರುಳನು ಗದ್ದುಗೆಯ ರಾಮೇಶ್ವರದೇವರಿಂದ ಸೇವೆಗೊಂಡು ಕೊಲ್ಲಾಪುರಕ್ಕೆ ಹೋಗಿ ಕರಟಾಸುರನ ಮಗಳು ಮಾಯೆಯನ್ನು ಕೊಂದು, ತಾನು ನಿಂತ ಸ್ಥಳದಲ್ಲಿ ಅದಕ್ಕೆ “ ಕಾಳ್ಕುಜ್ಜನಿ ” ಎಂಬ ಹೆಸರಿಟ್ಟನು. ಆತನ ವಾಸವು ಅಲ್ಲಿಯೇ ಆಯಿತು; ಸರಿ! ಕಾಳ್ಕುಜ್ಜನಿಯಲ್ಲಿ ಮರುಳನು ವಾಸಿಸಿದ ಮೇಲೆ ಕೊಟ್ಟೂರು ಬಳಿಯಿರುವ ಉಜ್ಜಯಿನಿ ಏತಕ್ಕೆ ಆರಂಭವಾಯಿತು ? (ಪು. ೪೮)

೫ನೆಯ ಸಂಧಿ—ತೆಲಗು ಬಾಳಿಗೆ ಬಂದು ಅಲ್ಲಿಯ ಭಕ್ತರು ಹೊಗಳಿದ ಕಾರಣಕ್ಕಾಗಿ ಅಲ್ಲಿ ಅವರಿಗೆ ಮಠವನ್ನು ಕೊಟ್ಟನು. ಬೇರೆ ವರ ಬೇಕಾದುದನ್ನು ಕೊಡಲು ಶಕ್ತನಾಗಿದ್ದರೂ ಮಠವನ್ನು ಕೊಟ್ಟಕಾರಣ? ತನ್ನ ಗುರುವಾದ ರೇವಣನನ್ನು ದರ್ಶನಮಾಡಿ ಶಾಂತಮಲ್ಲೇಶ್ವರನ ವರವನ್ನು ಹೇಗೆ ಪಡೆದ? ಕಲಿಯುಗ ಪ್ರಾರಂಭಿಸುತ್ತಿರುವುದನ್ನು ಅರಿತು ಮರುಳನು ಸಮಾಧಿಸ್ಥನಾಗುವನು. ದ್ವಾಪರಯುಗದ ಕೊನೆಯಲ್ಲಿದ್ದ ಇವನ ಸರಿಯಾದ ಕಾಲ ನಿರ್ಣಯವಾಗುವ ಬಗೆ ಹೇಗೆ ? ಹೀಗೆ ಸಮಾಧಿ ಹೊಂದಿದ ಮರುಳನು ಮರುಳಗೊಂಡನ ನೇಗಿಲಿಗೆ ಸಿಕ್ಕು ಗಾಯಗೊಂಡನು ಮತ್ತು ಶಾಪವಿತ್ತನು. ಮರುಳನು ಸಮಾಧಿಸ್ಥನಾಗಿ ಶಾಪವನ್ನು ಹೇಗೆ ಕೊಟ್ಟ ? ಮರುಳನು ಜಕ್ಕಣಾಚಾರ್ಯನಿಂದ ದೇವಾಲಯವನ್ನು ಮಾಡಿಸಿದನು. ಇಲ್ಲಿ ಸಿದ್ಧೇಶನ ತಲೆಗೆ ಗಾಯವಾದಂತೆಯೂ ಆ ಸಿದ್ಧೇಶನು ಮರುಳೇಶನನ್ನು ಬೇಡಿಕೊಳ್ಳಲು ಅಪ್ಪಣೆಕೊಡಿಸಿದಂತೆಯೂ ಬರೆದಿರುವುದರಿಂದ ಸಿದ್ಧೇಶ ಮರುಳೇಶ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳಾಗುವುದಿಲ್ಲವೇ ?

೬ನೆಯ ಸಂಧಿ—( ಪೀಠಿಕಾ ಪು. ೫೩ರಲ್ಲಿ ) “ ಈ ಮರುಳಸಿದ್ಧನೇ ೫ಚಾರ್ಯರಲ್ಲಿ ಒಬ್ಬನಾದ ಮರುಳಾರಾಧ್ಯರೋ ಅಲ್ಲವೋ ಎಂಬ ವಿಷಯ

**ತೊಡಕಿನದು.** " ಎಂದು ಹೇಳಿರುವುದರಿಂದ ಸಂಪಾದಕರಿಗೆ ಮರುಳಸಿದ್ಧರ ಜನನದ ವಿಷಯ ಸಂದೇಹವನ್ನುಂಟು ಮಾಡಿದೆ ಎಂಬುದು ತಿಳಿಯುತ್ತದೆ. ಆದರೆ ಅದೇ ಸಂಪಾದಕರೇ ಮುನ್ನುಡಿಯ ಪ್ರು. ೨ ರಲ್ಲಿ " **ಮರುಳಸಿದ್ಧ ಮಾದಿಗರಲ್ಲಿ ಜನನ ಪಡೆದರೂ ಜಾತಿಯ ಶೃಂಖಲೆಯನ್ನು ಕಳಚಿ ತನ್ನ ತಪಃ ಪ್ರಭಾವದಿಂದ ಆಚಾರ್ಯ ಪದವಿಗೇರಿದ ಎನ್ನುವುದು ನಮ್ಮ ಮನಸ್ಸಿಗೆ ಹಿಡಿದ ವಿಷಯ** " ಎಂದು ನಿರ್ಣಯಾತ್ಮಕವಾಗಿ ಬರೆದು ಜನತೆಯಲ್ಲಿ ಸಂದೇಹವನ್ನೇಕೆ ಪ್ರಚುರಪಡಿಸಿದರೋ ತಿಳಿಯದಾಗಿದೆ. ಹೇಗೆ ಬಂದರೆ ಹಾಗೆ ಜಾರಿಕೊಳ್ಳುವದಕ್ಕೆ ಸಂಪಾದಕರು ಹೀಗೆ ಬರೆದಿರಬಹುದೇನು?

## ಮೂಲಕಾವ್ಯದ ಮೇಲೆ ತರ್ಕ

ಮೊದಲನೆಯ ಸಂಧಿಯಲ್ಲಿ ಮತ್ತು ಮುಂದೆ ಅಲ್ಲಲ್ಲಿಯೇ ಕವಿಯು ಅನೇಕ ವೇಳೆ " ಉಜ್ಜನಿಯ ಪುರವಾಸ... ಶ್ರೀ ಗುರು ಮಲ್ಲೇಶ " " ಉಜ್ಜನಿಯವಾಸ ಮಲ್ಲೇಶ " " ಉಜ್ಜನಿಯ ಮಲ್ಲೇಶ " "ಗುರು ಮಲ್ಲೇಶ ಶ್ರೀ ಗಿರಿನಿವಾಸನು " " ಗುರು ಮಲ್ಲೇಶ ಮೆರೆದನುಜ್ಜನಿಪುರದೊಳು " "ಉಜ್ಜನಿಯ ವಾಸ ಮಲ್ಲೇಶ " " ಉಜ್ಜನಿಯ ಪುರದ ಮಲ್ಲಿಕಾರ್ಜುನ " ಎಂದು ಸ್ತುತಿಸುತ್ತಾನೆ. ಇದರಿಂದ ಉಜ್ಜಯನಿಯಲ್ಲಿ ಪುರಾತನಕಾಲದಿಂದ ಶ್ರೀ ಶೈಲ ಮಲ್ಲಿಕಾರ್ಜುನ ಲಿಂಗದ ಅಂಕಿತದಿಂದ ಒಂದು ಲಿಂಗವು ಪ್ರಸಿದ್ಧವಾಗಿದ್ದಂತೆ ಕಾಣುತ್ತದೆ. ಆ ಮುಂದೆ ಕವಿಯು ನಾಲ್ಕನೆಯ ಪದ್ಯದಲ್ಲಿ " ಅಮೃತಕರ ರೂಪ ಸಿದ್ಧೇಶನೊಲಿದೆಮ್ಮ ರಕ್ಷಿಸು ತ್ರಿವಿಧ ತಾಪಹರಲಿಂಗ ಶರಣು " ಎಂದು ಸ್ತುತಿಸಿರುವುದರಿಂದ ಉಜ್ಜಯನಿಯಲ್ಲಿ ಅತಿಪೂರ್ವಕಾಲದಲ್ಲಿ ಸಿದ್ಧೇಶಲಿಂಗವೆಂಬ ಹೆಸರಿನಿಂದ ಶಿವಲಿಂಗವೊಂದು ಪ್ರಸಿದ್ಧವಾಗಿದ್ದಂತೆ ತಿಳಿಯುತ್ತದೆ. ಇಲ್ಲಿ ವಿವೇಚನೆಯೆಂದರೆ-೫ನೆಯ ಪದ್ಯದಲ್ಲಿ "ಗುರು ಮಲ್ಲೇಶ ಶ್ರೀ ಗಿರಿನಿವಾಸನುಜ್ಜನಿ ಕಾಳ್ಕೆಯೊಳಗೆಸೆವ ನಾಗಭೂಷಣ ಸಲಹುಗೆ (ಸಂ. ೧. ಪು. ೩. ಪ. ೫) " ಉಜ್ಜನಿ ಕಾಳ್ಕೆಯೊಳಗೆ ಎಂದು ಹೇಳಿ ಅದೇ ಉಜ್ಜಯಿನಿಯಲ್ಲಿ ಸಿದ್ಧೇಶಲಿಂಗವನ್ನು ಸ್ತುತಿಸಿರುವುದರಿಂದ ಈ ಉಜ್ಜಯಿನಿಯು ಪುರಾತನಕಾಲದಿಂದ ಸುಪ್ರಸಿದ್ಧವಾದ ವಿಕ್ರಮಾದಿತ್ಯನ ಅವಂತಿ ಅಥವಾ ಕಾಳಿಕಾ ಉಜ್ಜಯನಿಯೇ ಎಂದು ಅರ್ಥವಾಗುತ್ತದೆ. ಈ ಕಾಳಿಕಾ ಉಜ್ಜಯಿನಿ ಶಬ್ದ ಪ್ರಯೋಗವನ್ನು ಕವಿಯು ಇದೇ ಸಂಧಿಯ ಪದ್ಯ ನಾಲ್ಕರಲ್ಲಿ " ತ್ರಿವಿಧಪುರ ಕಾಳ್ಕುಜ್ಜನೀಪರ್ವತ " ೪ನೆಯ ಸಂಧಿ ಪದ್ಯ ೧೧೧ರಲ್ಲಿ " ಕಾಳ್ಕುಜ್ಜನೆಂದೆಸರಿಡುತ " " ಶರನದಿಯ ತೀರದೊಳು ಕಾಳ್ಕುಜ್ಜನಿಯ ಒಪ್ಪೆ " ( ಪದ್ಯ ೧೧೨) ನಿರುಪಮನೆ ನಿತ್ಯಕಾಳ್ಕುಜ್ಜನಿಯರಸ ಎಂದು "....

(ಪದ್ಯ ೧೧೬). " ಇಂತೊಪ್ಪಿ ಕಾಳ್ಗುಜ್ಜನಿಯ ಪುರಂರಂಜಿಸಲು ಶಾಂತ ಸಿದ್ಧೇಶ ಮಲ್ಲೇಶ ಲಿಂಗವನು ನೆರೆನಿಂತಿರಿಸಿ ಮುಂದೆ ನಡೆದನು " (ಪ. ೧೦೭) ಎಂದು ಅಲ್ಲಲ್ಲಿಯೇ ಕಾಳಿಕಾ ಉಜ್ಜಯಿನಿಯ ಹೆಸರನ್ನು ಎತ್ತಿಕೊಳ್ಳುತ್ತ ನಾಲ್ಕನೆಯ ಸಂಧಿ ಕೊನೆಯಲ್ಲಿ ಕಾಳ್ಗುಜ್ಜಯಿನಿಯಿಂದ ಮರುಳಸಿದ್ಧೇಶನು ಹೊರ ಹೊರಟು ಐನೆಯ ಸಂಧಿ ಆರಂಭದಲ್ಲಿ " ಬಂದನುಜ್ಜನಿಪುರಕಂ " ( ಪ. ೧ ) ಎಂದು ಕವಿಯು ಹೇಳುವುದರಿಂದ ಉಜ್ಜಯಿನಿಗಳು ಎರಡಿದ್ದವೆಂದು ಸ್ಪಷ್ಟ ವಾಗುತ್ತದೆ. ಮರುಳಸಿದ್ಧೇಶನು ಲೀಲೆಮಾಡುವ ಮೊದಲೇ ಕಾಳಿಕಾ ಉಜ್ಜಯಿನಿಯು ಇದ್ದ ಕಾರಣದಿಂದ ಈ ಗ್ರಂಥದ ಆರಂಭದ ಮಲ್ಲೇಶಲಿಂಗ ಸಿದ್ಧೇಶಲಿಂಗಗಳ ಮೂಲಸ್ಥಾನವು ಕಾಳಿಕಾ ಉಜ್ಜಯಿನಿ ಎಂದೇ ತಿಳಿಯು ವುದು. ದಾರುಕಾಚಾರ್ಯರ ಅವತಾರವೂ ಕಾಳಿಕಾ ಉಜ್ಜಯಿನಿಯ ಸಿದ್ಧೇ ಶ್ವರ ಲಿಂಗದಿಂದಲೇ ಆಗಿರುವುದರಿಂದ ಕವಿಯು ಸ್ತುತಿಸಿರುವ ಸಿದ್ಧೇಶ್ವರ ಲಿಂಗವೂ ಅದೇ ಎಂಬುದೂ ನಿರ್ವಿವಾದವು. ಈ ದಾರುಕಾಚಾರ್ಯರ ಕಾಲವು ತ್ರೇತಾಯುಗದ ಕೊನೆಯಲ್ಲಿ ಅಗಸ್ತ್ಯ ಮಹರ್ಷಿಯನ್ನೂ ಲಂಕಾಧಿ ಪತಿಯಾದ ವಿಭೀಷಣನನ್ನೂ ಉದ್ಧಾರಮಾಡಿದ ರೇಣುಕಾಚಾರ್ಯರ ಕಾಲಕೆ ಸೇರುವುದು. ರೇಣುಕ-ದಾರುಕರು ಬಹು ಪ್ರಾಚೀನ ಕಾಲದ ಆಚಾರ್ಯರು ರೆಂತಲೂ ಒಂದೇ ಕಾಲದವರೆಂತಲೂ ತೋರಿಸುವದಕ್ಕೋಸುಗ ಕ್ರಿ. ಶ. ೧೧ ನೆಯ ಶತಮಾನದ **ಶ್ರೀಪತಿ ಪಂಡಿತಾರಾಧ್ಯರು. ಶ್ರೀಕರಭಾಷ್ಯದ** ಮುತ್ತೊಂದೆಡೆಯಲ್ಲಿ **"ರೇಣುಕ—ದಾರುಕ—ಶಂಖಕರ್ಣ—ಗೋಕರ್ಣಾದಿ ಪೂರ್ವಾಚಾರ್ಯಾಣಾಂ"** (ಅ. ೧. ಪಾ. ೧. ಸೂತ್ರ ೧.) ಎಂದು ರೇಣುಕ ದಾರುಕರನ್ನು ಜೋಡಿಸಿಯೇ ಹೇಳಿರುವರು. ರೇವಣಸಿದ್ಧ—ಮರುಳಸಿದ್ಧರು ಇವರಿಗಿಂತ ಬೇರೆಯಾಗಿದ್ದು ಬೇರೆ ಕಾಲದಲ್ಲಿದ್ದರೆಂಬುದನ್ನೂ ಈ ಭಾಷ್ಯ ಕಾರರೇ ತಮ್ಮ ಆರಂಭದ ಸ್ತುತಿಯಿಂದ ಸ್ಪಷ್ಟಪಡಿಸಿದ್ದಾರೆ ಶ್ರೀಪತಿ ಪಂಡಿತರ ಕಾಲ ಕ್ರಿ. ಶ. ೧೧೨೬ ಎಂದು ಡಾ. ಚಿಲಕೂರಿ ನಾರಾಯಣರಾವ ಹೇಳು ತ್ತಾರೆ. ಆದರೆ T.S. ನಾರಾಯಣ ಶಾಸ್ತ್ರಿಯವರು Indian Review ಎಂಬ ಮಾಸಪತ್ರಿಕೆಯ ೧೯೧೫ನೆಯ ಮೇ ತಿಂಗಳ ಸಂಚಿಕೆಯಲ್ಲಿ ಇವರ ಕಾಲ ಮಾನವನ್ನು ಕ್ರಿ. ಶ. ೧೦೭೨ ಎಂದು ನಿರ್ಧರಿಸಿದ್ದಾರೆ. ಈಗಲೂ ಕಾಳಿಕಾ ಉಜ್ಜಯಿನಿಯಲ್ಲಿ ವಟಕ್ಷೇತ್ರ ಸಿದ್ಧೇಶಲಿಂಗವಿರುವುದು ಪ್ರತ್ಯಕ್ಷವಾಗಿದೆ.

## ಕವಿಯ ಕುಲಕಾಲಗಳು

ಮರುಳಸಿದ್ಧಕಾವ್ಯವನ್ನು ಬರೆದ ಕವಿಯ ಹೆಸರು ದೇವ ಅಥವಾ ದೇಪ ಈತನೇ " ಪಶು—ಪತಿ ಸ್ವಯಂಭು ಬಾಳ್ಗಳಿಯ ಕಲಿದೇವನಿಂತುಸುಧಿ

ಡೊಲು ದೇಪ ಪೇಳ್ದಂ ಹರನಕೃತಿ ರಸವನೊಸೆದು ಲಾಲಿಸಿ ತಿದ್ದಿ ಕೇಳುವರ ಪದಧೂಳಿ ಪಸರಿಸುವುದೆನ್ನ ತನುವ" (ಸಂ. ೧. ಪ. ೧೬) ಎಂದೂ ಮತ್ತು "ವೇದ ಸಾಲ್ಕಂ ಲಿಂಗದಾಡಿಯನು ಮನ್ನಿಯ ಮಾಡಿಸುವ ಹರಿಯಜರು ಪಾದ ಶಿರವರಿಯದಾಮಾದರ ಚೆನ್ನಸಲಿ ಶಿವನುಂಡಕಾರಣದಿ" (ಸ. ೬ ಪ. ೭೯) ಎಂದೂ "ಕಡೆಯ ಮಾತ್ತೇನು ಹದಿನೆಂಟು ಜಾತಿಯನೆಲ್ಲ ಒಡನುಣಿಸಿ" (ಸ. ೩ ಪ. ೮೫) ಎಂದು ಹೇಳುವ ರೀತಿ ನೀತಿ ಗುಣಗಳಿಂದ ಈ ಕವಿಯು ಮಾದಿಗರಲ್ಲಿಯೇ ಜನನವಾಗಿದ್ದನೆಂದು ನಿರ್ವಿವಾದದಿಂದ ಒಪ್ಪಬಹುದಾಗಿದೆ. ಈ ಕಾವ್ಯದ ಸಂಪಾದಕರಾದ ಶ್ರೀಯುತ ಅ. ನ. ಕೃಷ್ಣರಾಯರೂ ಪೀಠಿಕೆಯ ಪು. ೫೧ರಲ್ಲಿ "ಈ ವಸ್ತುವನ್ನು ಆಯ್ದುಕೊಳ್ಳುವದಕ್ಕೆ ಆವನ ಭಕ್ತಿಯೂ ಸಂಪ್ರದಾಯ ಪ್ರೇಮವೂ ಕಾರಣವಾಗಿರಬಹುದು. ಆದರೆ ಮರುಳಸಿದ್ಧನಂತಹ ಮಹಾವ್ಯಕ್ತಿಯ ಜೀವನಚರಿತ್ರೆಯನ್ನು ಬರೆಯುವ ಪಾಂಡಿತ್ಯ ಪ್ರತಿಭೆ ದೇವನಲ್ಲಿಲ್ಲವೆಂಬುದು ನಿರ್ವಿವಾದ" ಎಂದು ಆಡಿರುವ ವಾಕ್ಯವು ಕವಿಯ ಕುಲವು **ಮಾದಿಗ** ಎಂಬದನ್ನು ಸ್ಪಷ್ಟಪಡಿಸುತ್ತದೆ. ದೇಪ ಕವಿಯು ಕುಲದಿಂದ ಮಾದಿಗನಾಗಿದ್ದರೂ ವೀರಶೈವನೇ ಆಗಿದ್ದು ಲಿಂಗಾರಾಧಕನಾಗಿದ್ದನೆಂದು ಮಾತ್ರ ಹೇಳಬಹುದು! ತನ್ನ ಕುಲಾಭಿಮಾನದಿಂದಲೇ ಮೂಲ ಮರುಳಸಿದ್ಧನನ್ನು ಬಹು ಕಷ್ಟಪಟ್ಟು ಮಾದಿಗ ಕುಲಸಂಭೂತನನ್ನಾಗಿ ಮಾಡಲು ಯತ್ನಿಸಿದ್ದನೆಂದು ಇಲ್ಲಿ ಒಪ್ಪಬೇಕಾಗಿದೆ. ಯಾರಿಗಾದರೂ ಕುಲಾಭಿಮಾನವು ದೊಡ್ಡದು. ದೇಪಕವಿಯು ಈ ಬಗೆಯಾದ ಅಪವಾದವನ್ನು ತಾನು ಕೊಡಲು ಅಂಜಿ "**ಬಾಳ್ಗುಳಿಯ ಕಲಿದೇವ ನಿಂತು ಸುರಿದೊಲು ದೇವ ಪೇಳ್ದಂ** (ಸಂ ೧. ಪ. ೧೬) ಕಲಿದೇವನೆಂಬವನು ಹೇಳಿಕೊಟ್ಟಂತೆ ನಾನು ಹೇಳಿದೆನೆಂದು ಜಾರಿಕೊಳ್ಳುತ್ತಾನೆ. ಅಪವಾದವನ್ನು ಕೊಡುವದರ ಸರಣಿಯು ಜಗತ್ತಿನಲ್ಲಿ ಈಗಲೂ ಹೀಗೆಯೇ ಇದೆ. ಈ ಕವಿಯು ಈ ಮರುಳಸಿದ್ಧ ಕಾವ್ಯಕ್ಕೆ ತಳಹದಿಯಾಗಿ "ಗದ್ದುಗೆಯರಾಮಿ ತಂದೆಯು ಶರಣಸಂತತಿಗೆ ಉದ್ಧರಿಸಿ ಪೇಳ್ದ ಗುರುಬೋಧೆಯ ಮಹಾತ್ಮೆಯನು ಹೃದ್ಯದೊಳ್ ನೆರೆಭಾವಿಸಿ" ( ಸ. ೧. ಪ. ೧೭ ) ವಿಷಯಗಳನ್ನು ಅಂಗೀಕರಿಸಿದಂತೆ ಆಡಿಕೊಂಡಿರುವುದು ಮತ್ತಿಷ್ಟು ಜಾಣತನ. ಗದ್ದುಗೆಯ ರಾಮಿ ತಂದೆಯು "ಗುರುಬೋಧೆಯ ಮಹಾತ್ಮೆ"ಯನ್ನು ಅವಶ್ಯವಾಗಿ ಮರುಳಸಿದ್ಧರ ಪರವಾಗಿ ಬರೆದಿರಬಹುದು. ಆ ಕಾವ್ಯದಿಂದ ದೇಪಕವಿಯು ತನಗೆ ಬೇಕಾದುದನ್ನು ಮಾತ್ರ ಗ್ರಹಿಸಿರಬೇಕು. ಮೂಲ ಮರುಳಸಿದ್ಧನನ್ನು ತನ್ನ ಕುಲದವನೆಂದು ಸಾಧಿಸುವುದು ದಾರಿ ತಪ್ಪಿದ ವಿಚಾರ. ಅಲ್ಪಮತಿ

ಯಾದ ಈ ಕವಿಯು ಎಷ್ಟೋ ಸಾಹಸಮಾಡಿದರೂ ತನ್ನ ಬುದ್ಧಿಮಾಂದ್ಯವನ್ನು ಕವಿಪ್ರಪಂಚದ ಮುಂದೆ ಮುಚ್ಚಿಕೊಳ್ಳಲು ಸಾಧ್ಯವಿಲ್ಲವಾಗಿದೆ. ಕವಿಯು ಮರುಳಸಿದ್ಧರನ್ನು ನೇರವಾಗಿ ಅಕ್ರಮ ಮಾರ್ಗಜರನ್ನಾಗಿ ಹೇಳುವನು. ಆದರೆ ತನ್ನ ತಂದೆತಾಯಿ ಕುಲಗ್ರಾಮಗಳನ್ನು ಬಚ್ಚಿಟ್ಟಿರುವುದು ಅವನ ಅಪವಿತ್ರ ಜನನಕ್ಕೆ ಪ್ರಬಲವಾದ ಆಶಂಕೆಯನ್ನು ಕವಿಸಮಾಜಕ್ಕೆ ಹುಟ್ಟಿಸದೇ ಹೋಗಿಲ್ಲ. ಇಂತಾಗಿ ಒಟ್ಟಿನಲ್ಲಿ ದೇವಕವಿಯು ಮಾದಿಗ ಕುಲದ ಅದರಲ್ಲಿಯೂ ವೇಶ್ಯಾಪುತ್ರನೆಂಬಲ್ಲಿ ಯಾವ ಸಂದೇಹವೂ ಇಲ್ಲ- ಏಕೆಂದರೆ ಕಾವ್ಯದ ಕೊನೆಯ ೬೨ನೆಯ ಪದ್ಯದಲ್ಲಿ ಈ ಕವಿಯು ಮಗನಾದ ದೇವಸುತನು ಕಾವ್ಯರಚನೆಯ ಕಾಲವನ್ನು ಸಹ "ಪೇಳಿದನು, ದೇವಸುತ ಪೇಳೆನು ತಲೀಕೃತಿಯ ಶಾಲಿವಾಹನ ಶಕಂ ಸಾಗುತಿರೆ ಸಾವಿರದ ಮೇಲೆ ಐನೂರ ಒಂಬತ್ತನೆಯ ಸರ್ವಜಿತು ಸಂವತ್ಸರ...."ಮುಂತಾಗಿ ವಿಶಾಲವಾಗಿ ಬರೆಯಲು ಯತ್ನಿಸಿ ತನ್ನ ತಂದೆಯ ಜನನಾದಿ ವಿಷಯವನ್ನೆಲ್ಲ ಹೇಳದೆ ಬಿಟ್ಟಿದ್ದಾನೆ. ಮೇಲಿನ ನಿರ್ಧಾರಕ್ಕೆ ಈ ವಿಧವಾದ ಮುಚ್ಚುಗಾರಿಕೆಯೇ ಕಾರಣವಾಗಿದೆ. ಈ ಕವಿಯು ಹೇಳಿಕೆಯಂತೆ ಈ ಕಾವ್ಯ ಅಥವಾ ಕವಿಕಾಲವು ಶಾಲಿವಾಹನ ಶಕ ೧೫೦೯ ಎಂದರೆ ಇಂದಿಗೆ ೩೫೮ ವರ್ಷಗಳೆಂಬುದು ಸ್ಪಷ್ಟವಾಗಿದೆ ಒಟ್ಟಿನಲ್ಲಿ ಈ ಕಾವ್ಯವನ್ನು ದೇವನೂ, ದೇವಸುತನೂ ಇಬ್ಬರೂ ಸೇರಿ ಬರೆದಿರಬೇಕೆಂದು ನಿರ್ಣಯಿಸಬಹುದಾಗಿದೆ.

## ಮರುಳಸಿದ್ಧನ ಜನನ

ಶ್ರೀಶೈಲದಲ್ಲಿ ಶಿಲಾದಮಹರ್ಷಿಯು ತಪಸ್ಸು ಮಾಡುತ್ತಿರುತ್ತಾನೆ "ಆಗಮಾರ್ಗದ ಶೈವ ಪೂಜೆ ಸಮವಿಸಿದಾಗ ..." "**ಮುನಿಕುಮುದ ಚಂದ್ರಚಕೋರ ಹಿಮಕರನು ಮುನಿ ಶಿಲಾದನು ಷೋಡಶೋಪಚಾರದೊಳು ಘನಲಿಂಗವನು ಪೂಜೆಗೈದು ಪ್ರೀತ್ಯರ್ಥದಿಂ ವನಿತೆಯುಪಚಾರದೊಳಗೆ** (ಸ. ೧. ಪ. ೩೬) ತನ್ನ ಹೆಂಡತಿಯ ಉಪಚಾರದೊಡನೆ ಷೋಡಶೋಪಚಾರ ಪೂರ್ವಕವಾಗಿ ಇಷ್ಟಲಿಂಗಪೂಜೆಯು ಶಿವಾಗಮ ಪದ್ಧತಿಯಂತೆ ಸಾಗಿದೆ; ಶರೀರ ಧರ್ಮದ ಸ್ವಾಭಾವಿಕವಾದ ಮಲಮೂತ್ರಾದಿ ಆ ವೇಗವನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಅದರಂತೆ ಋತುಧರ್ಮವೂ ಒಂದು. "**ವರಸತಿ ಶಿವಾರ್ಚನಂಗೈಯ್ವ ತತ್ಕಾಲದೊಳು ಭರದಿ ಋತುಕಾಲವಾಗೆ**" (ಸಂ ೧. ಪ. ೪೯) ತಡೆಯಲು ಬಾರದ ಆ ವೇಗದಿಂದ ಲಿಂಗಾಪೂಜಾಕಾಲದಲ್ಲಿಯೇ ಶಿಲಾದ ಪತ್ನಿಯು ಬಹಿಷ್ಟೆಯಾದಳು. ಇದು ಶಿಲಾದನಿಗೆ ತಿಳಿಯಿತು.

ಆಗಲೆ " ಎಲೆ ನೀರೆ ಹರಪೂಜೆಯಂ ಮಾಳ್ಪಸಮಯದೊಳು; " ನೀನೀಗ ಹೊಲೆಯಾಗಿ ಹೊಲೆಜನ್ಮದಲಿ ಜನಿಸು....ಕುಲವಿಲ್ಲದಚಲನೊಳು ಬಾಳು (ಸ. ೧. ಪ ೪೧) ಎಂದು ಶಾಪಕೊಡುವನು. ಶಿವಾಗಮಾರ್ಥವನ್ನು ಬಲ್ಲ ಹಾಗೂ ಶಿವಲಿಂಗಧಾರಿಯಾದ ಶಿಲಾದನು ಇಷ್ಟುಮಾತ್ರಕ್ಕೇ ಹೀಗೆ ಶಾಪ ಕೊಡುವ ಕಾರಣವಿದ್ದಿಲ್ಲ. ಏತಕ್ಕೆಂದರೆ ಶಿವಾಗಮಗಳು ವೀರಶೈವ ಸ್ತ್ರೀಯರ ಬಗೆಗೆ "ಲಿಂಗಾರ್ಚನಾರತಾನಾರೀ ಸೂತಿಕಾ ವಾರಜಸ್ವಲಾ ರವಿರಗ್ನಿರ್ಯಥಾ ವಾಯುಸ್ತಥಾ ಕೋಟಿಗುಣೋಜ್ವಲಾ" ಶ್ರೀಕರಭಾಷ್ಯ.(ಅ. ೧ ಪಾ ೧ ಸೂ.೧) ಶಿವಪೂಜೆಯಲ್ಲಿರುವ ವೀರಶೈವ ಸ್ತ್ರೀಯು ಬಹಿಷ್ಠೆಯಾದರೂ ದೋಷವಿಲ್ಲ. ಸೂರ್ಯ ಅಗ್ನಿವಾಯುಗಳಂತೆ ಶುದ್ಧಳಾಗಿಯೇ ಇರುವಳು ಎಂದು ಮುಂತಾಗಿ ಸಾರುತ್ತವೆ. ಅಲ್ಲದೆ ವೀರಶೈವೇತರ ಸ್ಮಾರ್ತಾದಿಗಳು ಪೌಂಡರೀಕಾದಿಯಾಗಗಳನ್ನು ಪತ್ನಿಸಹಿತರಾಗಿಯೇ ಮಾಡಬೇಕಾಗುತ್ತದೆ. ಆ ಸಮಯದಲ್ಲಿ ಹೆಂಡತಿ ಬಹಿಷ್ಠೆಯಾದರೆ ದೋಷವಿಲ್ಲ, ಯಾಗವನ್ನು ಮುಂದುವರಿಸಬೇಕೆಂದು ಸ್ಮಾರ್ತಾದಿಗಳ ಧರ್ಮಗ್ರಂಥಗಳೂ ಸಾರುತ್ತಿವೆ. ಎಂದ ಮೇಲೆ ಶಿಲಾದ ಋಷಿಯು ಈ ಕಾರಣದಿಂದ ಶಾಪವನ್ನು ಕೊಟ್ಟಿರುವುದು ಪೂರ್ಣ ಅಸತ್ಯವಾಗಿವೆಯೆಂದು ನಿರ್ಣಯಿಸಬೇಕಾಗಿದೆ. ಸಂಕರ ಸಂಭವವಾದ ಕವಿಗೆ ಈ ಶಾಸ್ತ್ರ ಅಥವಾ ಲೌಕಿಕದ ಜ್ಞಾನವೆಲ್ಲಿಂದ ಬರಬೇಕು? ಪೂಜಾಕಾಲದಲ್ಲಿ ಹೊರಗಾದುದನ್ನೇ ಒಂದು ಪಾಪವನ್ನಾಗಿ ಗಣಿಸಿ ಯಾವ ಕಾರಣವೂ ಸಿಗದೇ ಇದ್ದುದಕ್ಕಾಗಿ ತನ್ನ ಇಚ್ಛಿತಕಾರ್ಯದ ಸಾಧನೆಗೆ ಮಹಾಪತಿವ್ರತೆಯಾದ ಋಷಿಪತ್ನಿಗೆ " ಹೊಲೆಜನ್ಮದಲಿ ಜನಿಸು ಕುಲವಿಲ್ಲದಚಲನೊಳು ಬಾಳು " ಎಂದು ಪಾಪದ ನುಡಿಗಳನ್ನು ಋಷಿ ಮುಖದಿಂದ ಎರಚಿಸಿರುವುದು ಸಂಪೂರ್ಣ ಅಸಂಗತ! ಪಾಪಮಯ! ಇದು ಕವಿಯ ಕೇವಲ ಕುಹಕ ಕಲ್ಪನೆಯಲ್ಲದೆ ಬೇರಲ್ಲ. ಈ ಬಗೆಗೆ ಮೈಸೂರು ಆಸ್ಥಾನ ವಿದ್ವಾನ್ ಶ್ರೀ ಶಿವಮೂರ್ತಿ ಶಾಸ್ತ್ರಿಗಳು ತಮ್ಮ ಶರಣಸಾಹಿತ್ಯ ಸಂ. ೮ ಸಂಚಿಕೆ ೯ ಪು ೪೨೧ರಲ್ಲಿ " ಕವಿಯು ಕಲ್ಪಿಸಿರುವ ಕಥಾವಸ್ತುವು ರಮಣೀಯವಾಗಿಲ್ಲ. ಶಿವಪುರಾಣದಲ್ಲಿ ಸುಪ್ರಸಿದ್ಧನಾದ ಶಿಲಾದ ಮುನಿಯು ಈ ಕಾವ್ಯದಲ್ಲಿ ಸುಲಭಕೋಪನಾಗಿ ತನ್ನ ಧರ್ಮಪತ್ನಿ ಹಾಗೂ ಶಿಷ್ಯ ಇಬ್ಬರನ್ನೂ ಒಟ್ಟಿಗೆ ಶಪಿಸಿ ಹೊಲೆಯರ ಜಾತಿಯಲ್ಲಿ ಅದರಲ್ಲಿಯೂ ಗಂಡಹೆಂಡರಾಗಿ ಹುಟ್ಟುವಂತೆ ನಿರೂಪಿಸಿದುದು ಅನೌಚಿತ್ಯವೇ ಅಲ್ಲದೆ ಅಧರ್ಮವೂ ಅನೀತಿಯೂ ಆಭಾಸವೂ ಆದುದು. ಮಹಾತ್ಮನಾದ ಶಿಲಾದಮುನಿಯನ್ನು ಇಂತಹ ಅವಿವೇಕಿಯಂತೆ ಚಿತ್ರಿಸಿರುವ ದೇವಕವಿಯು ಲೋಕಾನುಭವಿಯೆಂದಾಗಲಿ ಶಾಸ್ತ್ರಜ್ಞನೆಂದಾ

ಗಲಿ ನಾವು ತಿಳಿಯುವುದೆಂತು? '' ಎಂದು ತಮ್ಮ ಅಭಿಪ್ರಾಯವನ್ನು ಸ್ಪಷ್ಟ ಪಡಿಸಿದ್ದಾರೆ.

ಹಿಂದಣ ಭಾರತ ಭೂಮಿಯಲ್ಲಿ ಶಾಪವೆಂದಕೂಡಲೆ ಅದಕ್ಕೆ ಪ್ರತೀಕಾರವೇ ಇದ್ದಂತೆ ಕಾಣಲಿಲ್ಲ. ಅದಕ್ಕಾಗಿ ಶಿಲಾದಪತ್ನಿಯು ತಿರುಗಿ ಉತ್ತರ ನೀಯದೆ ಋಷಿಯಿಂದ ನಿಶ್ಶಾಪವನ್ನು ಬೇಡುವಳು. ಕವಿಯು ಪಾಪದೃಷ್ಟಿಗೆ ಗುರಿಯಾದ ಋಷಿಯಾದರೋ— '' ಎನುತಿರಲಭಿಶಾಪಮನುಮುನಿನುಡಿದ ನಾಸತಿಗೆ ವನಿತೆ ನೀಪ್ಪೋಗಿ ಮರ್ತ್ಯದೊಳು ಕರುಗಲ್ಲೆಂಬ ಜನಪದಕ್ಕಧಿಪ ಪ್ರಭು ಬಾಚಣನ ಭೃತ್ಯನೆಂದೆನಿಪ ಅನಘನೀನವನಾತ್ಮದೊಳು ಜನನವಾಗ ಲಾಘನ ಮಹಿಮನಿನ್ನು ತನುಮನ ಕೊನೆಯೊಳುದಿಸುವನು ನಿನಗಿದುಂ ಸದ್ಯಫಲವೆಂದು ಮುನಿನುಡಿದನಾವನಿತೆಯುಂಬೀಳು ಕೊಡುತ '' ( ಸ. ೧. ಪ. ೪೨ ) ಕರುಗಲ್ಲೆಂಬ ಊರಲ್ಲಿ ಬಾಚಣ್ಣನೆಂಬ ಒಡೆಯನಿದ್ದಾನೆ. ಅವನ ಮನೆಯಾಳು ಒಬ್ಬನಿದ್ದಾನೆ. ಅವನ ಹೊಟ್ಟೆಯಲ್ಲಿ ನೀನು ಹುಟ್ಟು. ಆಗ ನಿನ್ನ ಹೊಟ್ಟೆಯಲ್ಲಿ ಘನಮಹಿಮ ಹುಟ್ಟುತ್ತಾನೆ. ಇದೇ ನಿನಗೆ ನಿಶ್ಶಾಪವೆಂದು ಹೆಂಡತಿಯನ್ನು ಕಳುಹಿಸುತ್ತ, ಮತ್ತೆ ಆ ಋಷಿಯು—ಬಾಚಣ್ಣನ ಮನೆಯ ಆಳುಯಾರು? ಅವನ ಘನತೆಏನು? ಎಂಬುದನ್ನೂ ''.... '' ಪೂರ್ವದೊಳು ಭೃತ್ಯನೆಂದೆನಿಪ ಶಿಷ್ಯಗೆ ಗುರುವಿರೋಧದೊಳು ಎತ್ತಿನಸ್ಥಿಯ ಮೆಟ್ಟಿತಿರಿ ತಂದು ಪುನ್ನೆನುತಲತ್ಯಂತ ಕೋಪದಲಿ ಮರ್ತ್ಯಕಂ ಪೋಗಿ ಕಗ್ಗಲ್ಲ ಪ್ರಭು ಬಾಚಣ್ಣನ ಭೃತ್ಯನಾಗಿರು ಕೂಚಿಮಾರ ಪೆಸರಿಂದ ( ಸಂ ೧. ಪ ೪೦ ) ಮುಂತಾಗಿ ತಿಳಿಸುತ್ತಾನೆ '' ಎಂದು ಮುನಿನುಡಿಯೆ ಸತಿಬಂದಳಾ ಪುರವರದ ....ಕಗ್ಗಲ್ಲಪುರ....ರಾಜಬೀದಿಯೊಳು ನಿಂದು ನೋಡಿದಳು (ಸಂ ೧. ಪ. ೪೪) ಆಗ ಪೂರ್ವದೇಹ ಸಮೇತವಾಗಿಯೇ ಋಷಿ ಪತ್ನಿಯು ಕಗ್ಗಲ್ಲಿಗೆ ಬಂದು ರಾಜಬೀದಿಯಲ್ಲಿ ನಿಂತು ನೋಡುವಳು. ಹೀಗೆ ಸಂಕರ ಸಂಭವನಾದ ಈ ಕವಿಯು ಮಹಾಪತಿವ್ರತೆಯನ್ನು ರಾಜ ಬೀದಿಯಲ್ಲಿ ನಿಲ್ಲಿಸಿ ಬಿಡುತ್ತಾನೆ. ಮುಂದೆ '' ಆ ದೇವಿಬಂದು ಕಗ್ಗಲ್ಲಪುರವರದೊಳಗೆ ಮಾದಿಗರ ಜನ್ಮವಾಪ ವರ್ಗೆ ಸತಿಯೆನಿಸಿರಲು....'' (ಸಂ ೨. ಪು. ೫೧) ಮುಂತಾಗಿ ಬಹುದೂರದ ಮೇಲೆ ಬರೆದು ಈ ಮುನಿ ಪತ್ನಿಯನ್ನು ಒಬ್ಬ ಹೊಲೆಯನಿಗೆ ಗಂಟು ಹಾಕುತ್ತಾನೆ. ಇವನ ಬರಹದಂತೆ ವಿಚಾರಿಸಿದರೂ ಕಗ್ಗಲ್ಲ ಬಾಚಣ್ಣನ ಭೃತ್ಯ (ಆಳು)ನ ಹೊಟ್ಟೆಯಲ್ಲಿ ಈ ಋಷಿ ಪತ್ನಿಯು ಮಗಳಾಗಿ ಹುಟ್ಟಬೇಕಾಗಿದ್ದಿತು. ಆ ಆಳು ಕೂಚಿಮಾರನೆಂದು ತಾನೇ ಹೇಳಿ ತಂದೆಯಾಗಬೇಕಾಗಿದ್ದ ಕೂಚಿಮಾರನಿಗೆ ೨ನೆಯ ಸಂಧಿಯ ೫೩. ೫೪. ೫೫ನೆಯ ಪದ್ಯಗಳಿಂದ

ಇವಳನ್ನು ಹೆಂಡತಿಯನ್ನಾಗಿ ಮಾಡಿಬಿಡುವನು. ಇದೆಂತಹ ಅವಿವೇಕತನ! ಒಂದು ವೇಳೆ ಕೋಟಿಮಾರನಿಗೆ ಶಾಪಗ್ರಸ್ತಳಾದ ಋಷಿ ಪತ್ನಿಯನ್ನು ಹೆಂಡತಿಯನ್ನಾಗಿ ಮಾಡಬೇಕಾಗಿದ್ದರೆ ಲೌಕಿಕ್ಕಾದರೂ ಒಪ್ಪುವಂತೆ ಅವಳಿಗೆ ಕಾಲ್ಪನಿಕ ತಂದೆ ತಾಯಿಗಳನ್ನು ಮಾಡುವುದು ಕವಿಗೆ ಸಾಧ್ಯವಿದ್ದಿಲ್ಲವೇ ? ಅದೇ ಪ್ರಕಾರ ಕೋಟಿಮಾರನಿಗೂ ತಂದೆ ತಾಯಿಗಳನ್ನು ಕಲ್ಪಿಸಿಲ್ಲ. ಪಾಪ! ಮೊದಲೇ ಸಂಕರಜ! ಅದರಲ್ಲಿ ಮಂದ ಬುದ್ಧಿ ಧರ್ಮ ಜ್ಞಾನ ಶೂನ್ಯತೆ ಇವುಗಳಿಂದಾಗಿ ಕವಿಗೆ ಇಷ್ಟೊಂದು ಬುದ್ಧಿ ಹೇಗೆ ಬರಬೇಕು? ಮೇಲೆ ಕಾಣಿಸಿದ "ಆ ದೇವಿಬಂದು—" ಮುಂತಾದ ಪದ್ಯಗಳಿಂದ ಶಿಲಾದ ಪತ್ನಿಯನ್ನು ಇದ್ದಕ್ಕಿದ್ದ ಹಾಗೇ ಅದೇ ದೇಹದೊಡನೆ "ಮಾದಿಗರ ಜನ್ಮವಾದವರ್ಗೆ ಸತಿ" ಮಾಡಿ ಮಹಾಪತಿವ್ರತೆಯಾದ ಋಷಿಪತ್ನಿಗೆ ಜಗತ್ತಿನಲ್ಲಿ ಎಂದಿಗೂ ಅಳಿಸಬಾರದ ವೇಶ್ಯೆಯ ಪ್ರಶಸ್ತಿಯನ್ನು ಕೊಟ್ಟು ಬಿಟ್ಟಿದ್ದಾನೆ. ಹೀಗೆ ದೇವಕವಿಯು ಶಿಲಾದ ಪತ್ನಿಗೆ ಪುನರ್ಜನ್ಮವನ್ನು ಕಲ್ಪಿಸದೆ ಅವಳನ್ನು ಇದ್ದಕ್ಕಿದ್ದ ಹಾಗೆ ಬಾಚಣ್ಣನೆಂಬವನ ಆಳಾದ ಕೋಟಿಮಾರನೆಂಬ ಮಾದಿಗನಿಗೆ ( ಸ. ೨ ಪ. ೫೨) ಗಂಟು ಹಾಕುವದಾದ ಮೇಲೆ ಇವರಿಬ್ಬರ ವ್ಯಭಿಚಾರದಿಂದ ಮಹಾತ್ಮನನ್ನು ಹುಟ್ಟಿಸಲು ಪ್ರಯತ್ನಿಸುವ ಸರಣಿಯಲ್ಲಿ ಜಗನ್ಮಾತೆಯಾದ ಪಾರ್ವತಿ ದೇವಿಯನ್ನು ರಾಕ್ಷಸರ ಹೊಟ್ಟೆಯಲ್ಲಿ ಹುಟ್ಟಿಸುತ್ತಾನೆ; ಏಕೆಂದರೆ ಮಾಯೆಯ ಮೂಗು ಕೊಯಿಸಬೇಕಾಗಿದೆ. ಕವಿಯ ಭಾವನೆಯಲ್ಲಿ ಇದು ಮಹಾತ್ಮರು ಕಾಮಭಾವನೆಯನ್ನು ಗೆಲ್ಲುವ ಪದ್ಧತಿಯಾಗಿದೆ. ಉಚ್ಚವರ್ಗದಲ್ಲಿ ಹುಟ್ಟಿದ ಹೆಣ್ಣು ಮಾಯೆಯಾಗಿದ್ದರೆ ಮೂಗು ಕೊಯ್ಯಲು ಹೇಗೆ ತಾನೇ ಸಾಧ್ಯ? ಅದಕ್ಕಾಗಿ ಪಾರ್ವತಿಯನ್ನು ಕೊಲ್ಲಾಪೂರದ ಕರಟಾಸುರನ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿಸುವ ಚಾಣಾಕ್ಷತೆಯನ್ನೂ ಕವಿಯುಮಾಡಿದ್ದಾನೆ. ಇದು ಒಂದು ಪುಣ್ಯವೇ ಸರಿ ಜಗನ್ಮಾತೆಯದು! ಅವಳನ್ನೂ ಹೊಲೆಯರಲ್ಲಿಯೇ ಹುಟ್ಟಿಸಿದ್ದರೆ ಗತಿಯೇನು? ಪಾಪ! ಯಾತಕ್ಕೋ ಅಂಜಿದ್ದಾನೆ. ಇನ್ನು ಪಾರ್ವತೀ ದೇವಿಯನ್ನು ಮಾಯಾವತಾರ ಮಾಡಲು ಹಾಕಿರುವ ಯೋಜನೆಯನ್ನು ಸ್ವಲ್ಪ ವಿಚಾರಿಸೋಣ!

ಶಿವಸಭೆಯಲ್ಲಿ ಭೃಂಗೀಶ್ವರನು ನಾಟ್ಯವಾಡುವನು. "ಮಾಯಾ ಕೋಲಾಹಲ ಮಾಯಾಮದ ತ್ರಿಪುರಹರ ಮಾಯಾ ನೃಪುವಾದ್ಯದೊಳು ಭಂಗಿಸಿದ ನೀಕಾಯ ಜೀಯ ದೇವರ ದೇವ ಸಲಹೆನುತ...." ( ಸ. ೨. ಪ ೧೫) ಮತ್ತೆ ಹಾಡುವನು. ಶಿವನನ್ನು ನಗಿಸುವನು. ಈ ವಿಧವಾದ ಸ್ತುತಿಯು ಪಾರ್ವತಿ ದೇವಿಗೆ ಒಪ್ಪಿಗೆಯಾಗಲಿಲ್ಲ. ಗಿರಿಜೆಯು ಮಾಯಾರೂಪಳಾದ

ತನ್ನ ಸಹಾಯವಿಲ್ಲದೆ ಶಿವನ ಲೀಲೆ ನಡೆಯಲಾರದು. ಆದು ಕಾರಣ ಶಿವನು ಮಾಯಾಮಯನು ಮುಂತಾಗಿ ಹೇಳುತ್ತಾ ಭೃಂಗಿಯ ಸ್ತುತಿಯನ್ನು ಶಿವ ನೆದುರಿಗೆ ಖಂಡಿಸುವಳು. ಈ ಮಾತಿನಿಂದ ಶಿವನಿಗೆ ಸಿಟ್ಟು ಬರುವುದು. **"ಶ್ರೀಕಾರಗೆಡಿಸಿ ಭಂಗಿಸಿ ನಾಸಿಕಂಪರಿದು ಮಾಕಾಳಿಯೆಂಬವೆಸರಂ ಸುಡಿ ಸುತಾ ಮೇಲೆ ಕಾಕುಮಾಡುವ ಮರ್ತ್ಯಲೋಕದೊಳು ಜನಿಸು"**(ಸ. ೨ ಪ ೨೫) ಮುಂತಾಗಿ ಶಾಪವನ್ನು ಕೊಟ್ಟೇಬಿಡುವನು. ಶಿವಸಿದ್ಧಾಂತದ ಪರಿ ಜ್ಞಾನವು ಈ ಕಪಿಗಿದ್ದರೆ ಈ ವಿಧವಾದ ಬರಪಕ್ಕೆ ಅವಕಾಶವಿರಲಿಲ್ಲ. ಏಕೆಂದರೆ ಶಿವಶಕ್ತಿಯರ ಸಂಬಂಧವು ವಾಗರ್ಥಗಳಂತೆ ಅರ್ಧನಾರೀಶ್ವರ ರೂಪದಲ್ಲಿರುವುದು. ಶಕ್ತಿರೂಪ ಪ್ರಕೃತಿಯೇ ಮಾಯೆ, ಈ ವಿಧವಾದ ಮಾಯೆಯೆಂಬ ಶಕ್ತಿ ವಿಶಿಷ್ಟನೇ ಶಿವನೆಂಬುದೂ **"ಮಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ"** (ಶ್ವೇತಾಶ್ವತರೋಪನಿಷತ್ ೪-೧೦) ಮತ್ತು ಶಿವಾಗಮಗಳಲ್ಲಿ ಘಂಟಾಘೋಷವಾಗಿ ಉಕ್ತವಾಗಿದೆ. **ಉಮಾ ಸಹಾಯಂ ಪರಮೇಶ್ವರಂ ಪ್ರಭುಂ"** (ಕೈವಲ್ಯೋಪನಿಷತ್ ೧-೭) ಮುಂತಾದ ಪ್ರಮಾಣವೂ ಶಿವನನ್ನು ಶಕ್ತಿಯ ದೂರೀಕರಣಕ್ಕೆ ಒಪ್ಪುವದಿಲ್ಲ. ಇದೆಲ್ಲ ಸಿದ್ಧಾಂತವು ಕವಿಗೆ ತಿಳಿದಿಲ್ಲವಾಗಿ ಗಿರಿಜೆಯನ್ನು ಮಾಯಾನಾಮದಿಂದ ರಾಕ್ಷಸರಲ್ಲಿ ಹುಟ್ಟಿಸಿ ಮೂಗು ಕೊಯ್ಸಿದ್ದಾನೆ. ಮಾಯೆಯು ಗಿರಿಜಾ ವತಾರಿಣಿ ಎಂಬುದಕ್ಕಿಂತಲೂ ಮದೋನ್ಮತ್ತೆಯಾದ ರಾಕ್ಷಸಪುತ್ರಿ ಇವಳ ಗರ್ವಭಂಗಮಾಡಿ ಸಿಷ್ಕಾಮಿಯರಾಗಲು ಮರುಳಸಿದ್ಧನ ಅವತಾರವಾಯಿ ತೆಂತಲೂ ಬರೆದಿದ್ದರೆ ಕವಿಯು ಬುದ್ಧಿವಂತನಾಗಬಹುದಿತ್ತು. ಪಾಪ! ಮಂದ ಮತಿಗೆ ಈ ಮಾರ್ಗವು ಸರಿ ಬೀಳುವದಿಲ್ಲ. ಅಂತೆಯೇ ಈ ವಿಧಾನವನ್ನು ಕೈಕೊಂಡಿದ್ದಾನೆ; ಅಸ್ತು.

ಇಲ್ಲಿಗೆ ಕವಿಯು ಗಿರಿಜೆಯನ್ನು ರಾಕ್ಷಸರಲ್ಲಿ ಹುಟ್ಟಿಸಿ ಅಪವಿತ್ರ ಮಾಡಿದ್ದು ಆಯಿತು. ಇನ್ನು ಮುಂದೆ ಸ್ವಲ್ಪದರಲ್ಲಿಯೇ ಶಿಲಾದ ಪತ್ನಿಯಲ್ಲಿ ಮರುಳಸಿದ್ಧಾವತಾರಕ್ಕಾಗಿ ಭೃಂಗೀಶ್ವರನಿಗೆ ಕೈಹಾಕುತ್ತಾನೆ **"ನರಲೋಕದಲ್ಲಿ ಜನಿಸಿ ನರಜನ್ಮವನು ತಾಳಲರಿದೆಸಲು....ಗುರುಮೂರ್ತಿಯಾಗಿ ನಿನ್ನಂತರಂಗ ವನ್ನೈದಿ ಸ್ಮರಿಸಿದಿಷ್ಟಾರ್ಥಸಿದ್ಧಿಯನಿತ್ತು ಕರುಣಿಸುತ ನರಜನ್ಮವಂಪರಿದು ಘನಕೆ ಘನವೆನಿಸುವಾ ಮರುಳಸಿದ್ಧೇಶನೆನಿಪ ಧರೆಯೊಳುಂ ಚರಿಸಿ ಮಾಯೆಯ ಗೆಲ್ವವರವಿತ್ತು ಪರಶಿವನು ಬೀಳ್ಕೊಟ್ಟು ಪಿಂತೆತಾಂ ಬಹೆನೆಂದು ಹರುಷದಿಗೆ ಶೇವಣಾ ಸಿದ್ಧಗುರುವೆಂಪೆನಿಪ ಪರಮ ಕಳೆಯುಂ ಬೀರುತ ಮರುಳನೆಂದೆನಿಸಿ ಮಾಯೆಯ ನಾಸಿಕವನರಿದು ಗಿರಿಜಾತೆಯನು ಶಿವಿರ**

**ಜಾತಿಯನು ಮಾಡುವಾತುರದಿ ನರಲೋಕಕ್ಕೆ ಕಳುಪುತಾ ಪರಶಿವನು ಮಿರೆಂದ್ರಗಣ ಸಹಿತಲು** ( ಸಂ ೨ ಪ. ೪೮. ೪೯ )

ಶಿವನು ಭೃಂಗೀಶ್ವರನನ್ನು ಕರೆದು ಮಾಯೆಯನ್ನು ಮರ್ದಿಸಲು ಮರುಳಸಿದ್ಧನೆಂಬ ಹೆಸರಿನಿಂದ ಭೂಲೋಕದಲ್ಲಿ ಅವತರಿಸೆಂದು ಹೇಳುವನು. ನರಜನ್ಮದಲ್ಲಿ ಹುಟ್ಟಲು ನಾನೊಲ್ಲೆನೆಂದು ಭೃಂಗೀಶ್ವರನು ಶಿವನಿಗೆ ಅರಿಕೆ ಮಾಡುತ್ತಾನೆ. ನಿನಗೆ ಭಯಬೇಡ ರೇವಣಸಿದ್ಧ ಗುರುರೂಪದಿಂದ ನಾನು ನಿನ್ನನ್ನು ಉದ್ಧರಿಸುವೆನೆಂದು ಶಿವನು ಭೃಂಗೀಶ್ವರನಿಗೆ ಹೇಳುತ್ತಾನೆ. ಅದಕ್ಕೆ ಭೃಂಗೀಶ್ವರನು ಒಪ್ಪಿದನು. ಅಲ್ಲಿಂದ ಭೃಂಗೀಶ್ವರನು ಜಂಗಮ ವೇಷದಿಂದ ಹೊರಟು ಭೂಲೋಕದಲ್ಲಿ ಸಂಚರಿಸಿ ತನ್ನ ಜನ್ಮಕ್ಕೆ ಶೀಲಾದ ಪತ್ನಿಯಾದ ಸುಪ್ರಭೆಯ ಗರ್ಭವೇ ಪವಿತ್ರವೆಂದು ಅವಳನ್ನು ಜ್ಞಾಪಿಸಿಕೊಳ್ಳುತ್ತಾನೆ. ಸುಪ್ರಭೆಯು ಕೂಚಿಮಾರನೆಂಬ ಹೊಲೆಯನ ಮನೆಯಲ್ಲಿ ಅವನ ಅರ್ಧಾಂಗಿ ನೀತ್ವವನ್ನು ಗ್ರಹಿಸಿರುವುದು ಜಂಗಮರೂಪಿ ಭೃಂಗೀಶ್ವರನಿಗೆ ತಿಳಿಯುತ್ತದೆ. ನೇರವಾಗಿ ಕಗ್ಗಲ್ಲಿನಲ್ಲಿರುವ ಹೊಲೆಯ ಕೂಚಿಮಾರನಲ್ಲಿಗೆ ಆ ಜಂಗಮನು ಬರುವನು. “ **ಶ್ರೀಗಿರಿಗೆ ಪೋಪಪಯಣಂ ಸಾಗಿತಲೆ ಮಗನೆ ಆಗಬೇಕೆ ರಡು ಪಾದುಕೆ ನಮ್ಮ ಪದಗಳಿಗೆ** (ಸಂ. ೨ ಪ. ೫೪) ಎಂದು ಮೊದಲು ತಾನು ಪಾದರಕ್ಷೆಗಳನ್ನು ಕೇಳುವನು. ಆಗ ಕೂಚಿಮಾರನು ಜಂಗಮ ಪಾದರಕ್ಷೆಗೆ ಪಶುಚರ್ಮ ಸರಿಯಲ್ಲ, ಹೇಗೆಮಾಡುವುದು ? ಎಂದು ಚಿಂತೆ ಮಾಡುವನು. ಸುಪ್ರಭೆಯು “**........ತನ್ನ ತೊಲೆಗಳಂ ಕೊಯ್ದೀಗ ಶಿವಗೆ ಪಾದುಕೆಯ ಮಾಡೆಂದು....**” ( ಸ ೨. ಪ. ೫೫ ) ಕೆರಗಳನ್ನು ಮಾಡಲು ತನ್ನ ತೊಲೆಗಳನ್ನು ಕೊಯ್ದು ಕೂಚಿಮಾರನಿಗೆ ಕೊಡುವಳು. ಸಂತೋಷದಿಂದ ಅವನು ಕೆರಗಳನ್ನು ಮಾಡಿ ಅವನಿಗೆ ಒಪ್ಪಿಸುವನು. ಜಂಗಮನಿಗೆ ಸಂತೋಷ ವಾಗಿ ವರವನ್ನು ಬೇಡಿರೆಂದು ಹೇಳುವನು. ಆಗ ಕೂಚಿಮಾರನು ಸುಪ್ರಭೆ ಯಲ್ಲಿ ಪುತ್ರಸಂತಾನವನ್ನು ಬೇಡುವನು. ಜಂಗಮನು ತಥಾಸ್ತು ಎಂದು ವರವಿತ್ತು ಹೋಗುವನು. ಇತ್ತ ಸುಪ್ರಭೆಗೆ ಗರ್ಭ ೨—೪—೮ ತಿಂಗಳು ಬೆಳೆಯುವುದು. “........ಕುಚ ಚೂಚಕಂಗಳುಂ ನೀಲವರ್ಣವ ನೈಯ್ದೆ ಗುರುಕುಚೆಯ ತನುಮನ ತಾಪದ” ( ಸ. ೨ ಪ ೬೨ ) ಅಂಗಾಂಗಗಳ ರೂಪು ಬದಲಾಯಿಸುವುದು. ಮೊಲೆಗಳು ದಪ್ಪವಾಗುವವು. ಮುಂದು ದಿಯು ಕಪ್ಪಾಗುವುದು. ಅಂತೂ ಇಂತೂ ನವಮಾಸ ತುಂಬಿ ಸುಪ್ರಭೆಯು ಗಂಡು ಕೂಸನ್ನು ಹಡೆದೇಬಿಟ್ಟಳು. ಇಲ್ಲಿ ಕವಿಯು ಜಂಗಮ ಪಾದರಕ್ಷೆ ಗೆಂದು ಸುಪ್ರಭೆಯ ಮೊಲೆಗಳನ್ನು ಕೊಯ್ಸಿದ್ದಾನೆ. ಮತ್ತೆ “ **ಕುಚಚೂಚ**

**ಕಂಗಳುಂ ನೀಲವರ್ಣವ ನೈಯ್ದೆ** " ಎಂದು ಪರಿಜ್ಞಾನವಿಲ್ಲದೆ ಹೇಳುತ್ತಾನೆ. ಹೋಳಿಗೆಗಳನ್ನು ಪೂರ್ತಿಯಾಗಿ ಕೊಯ್ದ ಮೇಲೆ ಆ ಸ್ಥಳದಲ್ಲಿ ಗುರುಕುಚಗಳು ಹೇಗೆ ಬಂದವೆಂಬುದನ್ನು ಸಹ ಯೋಚಿಸದೆ ಮೂಢ ಜಗತ್ತಿಗೆ ಮಂಕುಬೂದಿ ಯನ್ನೆರಚಲು ಯತ್ನಿಸಿ ಕವಿ ಜಗತ್ತಿನ ಅಪಹಾಸ್ಯಕ್ಕೆ ಗುರಿಯಾಗಿ ದ್ದಾನೆ. ಋಷಿಪತ್ನಿಯ ಮೇಲೆ ಶಾಪದ ನೆಪದಿಂದ ಇಂತಹ ವ್ಯಭಿಚಾರದ ನಿಶ್ಚಾಪವನ್ನು ಪಾಪಭಯವಿಲ್ಲದೆ ಕಲ್ಪಿಸಿ ಅವಳಲ್ಲಿ ಜನಿಸಿದವನೇ ಮರುಳಸಿದ್ಧ ನೆಂದು ಧೈರ್ಯವಾಗಿ ಹೇಳಹೊರಟಿರುವ ಇವನ ಧೂರ್ತತನಕ್ಕೆ ಮೇರೆಯೇ ಇಲ್ಲವಾಗಿದೆ. ಇದೆಲ್ಲ ಕವಿಯ ಸಂಕರ ಜನ್ಮದಸ್ವಭಾವವೆಂದು ಬೇರೆ ಹೇಳ ಬೇಕಾಗಿಲ್ಲ. ಈ ಕಲ್ಪನೆಗೆ ಯಾವತೆರನಾದ ಬುಡವೂ ಇಲ್ಲದುದರಿಂದ ಶಿಲಾದಪತ್ನಿಯು ಈ ವಿಧವಾಗಿ ಕಗ್ಗಲ್ಲಿಗೆ ಬಂದು ಈ ಹೀನಾಯದಿಂದ ಶಿಶು ವನ್ನು ಜನಿಸಿದಳೆಂಬುದೂ ಅವನೇ ಮರುಳಸಿದ್ಧನೆಂಬುದೂ ಸಂಪೂರ್ಣ ಅಸತ್ಯವೆಂದು ವಾಚಕರು ಗ್ರಹಿಸಬೇಕು. ಈ ವಿಷಯದಲ್ಲಿ ಮೈಸೂರು ಆಸ್ಥಾನ ವಿದ್ವಾನ್ ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಶರಣಸಾಹಿತ್ಯದ ೧೯೪೫ ನೆಯ ನವಂಬರ ಸಂಚಿಕೆಯ ೪೮೬ನೆಯ ಪುಟದಲ್ಲಿ "ಉಜ್ಜಯಿನಿಯ ಮರುಳ ಸಿದ್ಧನು ಜನ್ಮತಃ ಹೊಲೆಯನೆಂದು ದೇಪಕವಿಯು ಹೇಳುವ ವಿಷಯ ಇತರ ಗ್ರಂಥಗಳಿಂದ ದೃಢಪಡುವವರೆಗೆ ಈ ಹೇಳಿಕೆಗೆ ಬುಡಭದ್ರವಿಲ್ಲವಾಗಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.

### ಈ ಜನನಕ್ಕೆ ವ್ಯಭಿಚಾರ ದೋಷಭಯ

ಕವಿಕಲ್ಪಿತಳಾದ ಸುಪ್ರಭೆಯು ಹಡೆದುದು ವ್ಯಭಿಚಾರದಿಂದ ಎಂಬು ದನ್ನು ಕವಿಯು ತನ್ನ " **ಸುಪ್ರಭಾ ದೇವಿ ತರಳನನು ಬೀಳ್ಕೊಡುತಾಗ........ ಕುಮಾರನಂ ಸತ್ಪಥದೊಳಿರಿಸುತಾಗ... ಶಾಪಮಂ ಕಳೆದು ಶಿಲಾದನ ಹೊರ ಗೆಯ್ದು** ( ಸ. ೨ ಪ ೬೬ ) ಮುಂತಾದ ಪದ್ಯದಿಂದ ಸ್ಪಷ್ಟಮಾಡುತ್ತಾನೆ. ಸುಪ್ರಭಾದೇವಿಯು ಸರಿಯಾದ ರೀತಿಯಲ್ಲಿ ಹಡೆದಿದ್ದರೆ ಶಿಶುವಿಗೆ ಮೊಲೆ ಯನ್ನುಣಿಸಿ ಸ್ವಲ್ಪ ದೊಡ್ಡದಾಗುವವರೆಗಾದರೂ ಕೂಚಿಮಾರನಲ್ಲಿ ನಿಲ್ಲಬಹು ದಾಗಿತ್ತು. ಹಾಗೆ ಮಾಡದೆ ಶಿಶು ಜನನವಾದೊಡನೆಯೇ ಒಂದು ವಾರಿ ಯಲ್ಲಿಟ್ಟು ಸುಪ್ರಭೆಯು ನೇರವಾಗಿ ಶಿಲಾದನಲ್ಲಿಯೇ ಶ್ರೀ ಶೈಲಕ್ಕೆ ಹೋದ ಳೆಂತಲೂ, ಋಷಿಗೆ ಆನಂದವಾಗಿ ಅವಳನ್ನು ತನ್ನವಳನ್ನಾಗಿ ಮತ್ತೆ ಗ್ರಹಿಸ ಲಾಯಿತೆಂದೂ ಮುಂತಾಗಿ ಕವಿಯು ಹೇಳಹೊರಟು ಜಗತ್ತಿನಲ್ಲಿ ಪಾತಿವ್ರತ್ಯ ಧರ್ಮದ ತಳಹದಿಯನ್ನೇ ಸಡಿಲಿಸಲು ಯತ್ನಿಸಿದ್ದಾನೆ.

ಶಿಶುವಿನ ತಾಯಿಯೇನೋ ಬಿಟ್ಟುಹೋದಳು. ಅದರ ತಂದೆಯಾದ ಕೂಚಿಮಾರನಾದರೂ ಆ ಶಿಶುವನ್ನು ಹಾಗೆಯೇ ಇದ್ದಲ್ಲಿಯೇ ಬಿಡಲು ಕಾರಣವೇನಿರಬೇಕು? ಆ ಶಿಶುವನ್ನು ಅವನ ವಂಶದವರಾದರೂ ಕಾಪಾಡಬಹುದಿತ್ತಲ್ಲ? ಯಾವಕಾರಣದಿಂದ ಕೂಚಿಮಾರನ ವಂಶದವರು ಈ ಶಿಶುವನ್ನು ಕಾಪಾಡಲಿಲ್ಲ? ಇದೂ ಇರಲಿ. ಕೂಚಿಮಾರನ ಒಡೆಯನಾದ ಕಗ್ಗಲ್ಲ ಬಾಚಿಗೌಡನಿಗಾದರೂ ಈ ವಿಷಯವು ಮುಂಚೆಯೇ ತಿಳಿದಿರಲಿಕ್ಕಿಲ್ಲವೇ? ಸುಪ್ರಭೆಯೆಂಬುವಳು ಇವನ ಮನೆಯವಳು. ಗರ್ಭಿಣಿ ಇದ್ದಾಳೆ ಮುಂತಾದ ತನ್ನ ಆಳಿನ ಸಂಗತಿಯು ಒಡೆಯನಿಗೆ ಗೊತ್ತಿರಲೇಬೇಕು. ಇವನಾದರೂ ೨೧ ದಿನ ಶಿಶುವನ್ನು ಇದ್ದಲ್ಲಿಯೇ ಏಕೆ ಬಿಟ್ಟ? ಈ ಅನಂತ ಸಂದೇಹಗಳಿಂದ ನಾವು ಹೀಗೆ ನಿರ್ಣಯಿಸುವೆವು:--ಕೂಚಿಮಾರನೆಂಬವನೊಬ್ಬ ವ್ಯಭಿಚಾರಿ. ಸುಪ್ರಭೆ ಎಂಬವಳು ಎಲ್ಲಿಯವಳೋ ಸೂಳೆ. ಇವರಿಬ್ಬರ ವ್ಯಭಿಚಾರದಿಂದ ಒಂದು ಶಿಶು ಹುಟ್ಟಿ ಅನಂತರ ಈ ವ್ಯಭಿಚಾರ ವಿಚಾರವು ಒಡೆಯನಿಗೆ ಗೊತ್ತಾಗುವ ಸಂದರ್ಭ ಬಂದಿರಬೇಕು. ಅದಕ್ಕಾಗಿ ಸೂಳೆ ಹಡೆದವಳು ಅತಿ ಶೀಘ್ರವಾಗಿ ಊರುಬಿಟ್ಟು ಓಡಿದ್ದಾಳೆ ಕೂಚಿಮಾರನು ತನ್ನ ಕೂಸೆಂದರೆ ಇನ್ನೂ ಅಪವಾದ ಬರಬಹುದೆಂದು ಇದ್ದಲ್ಲಿಯೇ ಆ ಕೂಸನ್ನು ಬಿಟ್ಟಿರಬೇಕು. ಬಾಚಿಗೌಡನಿಗೆ ೨೧ನೆಯ ದಿನ ಆ ಶಿಶು "....ಆಗಸದ ಕೊಟ್ಟಿಗೆಯ ಕುಟ್ಟಿಮದೊಳು ..." ( ಸ ೨ ಪ. ೪ ) ಕಾಣಿಸಿಕೊಳ್ಳುವುದು. ಕೂಸಿನ ಜನನ ವೃತ್ತಾಂತ ತಿಳಿಯದೆ ಮೋಸಗೊಂಡ ಗೌಡನು ಸಂತಾನ ಹೀನನಾದ ಕಾರಣ ಆಶೆಯಿಂದ ಆ ಕೂಸನ್ನು ಮನೆಗೆ ತರುತ್ತಾನೆ. ಹೆಂಡತಿ ಮಲ್ಲಮ್ಮನು "ತನುಜನೆಲ್ಲಿಯವನೆಂದು ಘನಶಂಕೆವಿಡಿದಾಗ ಮನೆಯ ಮುಂದಿಹ ಭವನದೊಳಿರಿಸಿ." ( ಸ. ೩ ಪ. ೫ ) ಎಂದು ಗಂಡನಿಗೆ ಹೇಳಿ ಕೂಸನ್ನು ಮನೆಯ ಹೊರಗೇ ಇಡಿಸುವಳು. ಇಲ್ಲಿ ಈ ವಿಧವಾದ ಸಂಶಯಕ್ಕೀಡಾದ ಶಿಶುವನ್ನು ಮಲ್ಲಮ್ಮನು ಸಾಕುವಂತೆ ಮಾಡಲು ಕವಿಯು ಮತ್ತೊಂದುಪಾಯವನ್ನು ತೋರಿಸಿದ್ದಾನೆ "ಹರಿಯಜರು ಸುರರು ವಿದ್ಯಾಧರಾಳಿಯುಂ ಗರುಡ ಗಂಧರ್ವರ್ಯಕ್ಷರು ಪಿಶಾಚರು (ಸ. ೩ ಪ. ೭) ಮುಂತಾದವರು ರಾತ್ರಿ ಅಲ್ಲಿಗೆ ಬರುವರು. ಸಾಧ್ಯವಾಗುವದು. ಆಗ ಮಲ್ಲಮ್ಮ ನಂಬುವಳು, ನಂಜಿದರೂ "ಏನಾದಡಂ ಬರಲಿ...." (ಪ. ೮) ಎಂದು ಅಂದುಕೊಂಡೇ ಆ ಶಿಶುವನ್ನು ಗ್ರಹಿಸುವಳು. ಈ ಕೂಸು ಮಾಡುವ ಹುಚ್ಚಾಟಿಕ್ಕೆ ಮುರುಳ ಎಂದು ಕರೆಯುವಳು. ದೊಡ್ಡವನಾದ ಮೇಲೆ ದನಗಳನ್ನು ಕಾಯಲಿಕ್ಕೆ ಹಚ್ಚುವರು, ಅಲ್ಲಿಂದ ಲೀಲೆಗೆ ಆರಂಭವಾಗಿ ಇವನೇ

ಮರಳಸಿದ್ಧನಾಗುವನು. ಈ ಕುಪಕ ಕಲ್ಪನೆಯಿಂದ ಜನಿಸಿದ ಈ ಶಿಶುವು ಮೂಲಮರುಳಸಿದ್ಧನಲ್ಲ. ಕವಿಯು ಕಾಲಮಾನ ಪರಿಜ್ಞಾನವಿಲ್ಲದೆ ಪೂರ್ವ ಚರಿತ್ರೆಯನ್ನು ಆಧುನಿಕನಾದ ಸಂಕರ ಜಾತಿಯ ಯಾವನೇ ಒಬ್ಬ ಮರುಳಪ್ಪ ನೆಂಬವನಿಗೆ ಸಂಬಂಧಿಸಿ ಬರೆದು ಚರಿತ್ರೆಯನ್ನೆ ಭ್ರಷ್ಟಗೊಳಿಸಿದ್ದಾನೆ.

## ಮೂಲ ಮರುಳಸಿದ್ಧ ಬೇರೆ

ಈ ಕವಿಯಂತೆ ಅನೇಕರು ಶ್ರೀ ರೇಣುಕಾಚಾರ್ಯರ ಹಾಗೂ ರೇವಣ ಸಿದ್ಧರ ಬಗೆಗೂ ಬರೆದು ಐತಿಹಾಸಿಕ ಜಗತ್ತಿಗೆ ಸಂದೇಹವನ್ನೇ ತಂದೊಡ್ಡಿದ್ದಾರೆ. ಒಟ್ಟಾರೆ ಮೂಲಮರುಳ ಸಿದ್ಧನ ಕಾಲಮಾನವು ಕ್ರಿ. ಶ. ೯೦೨ ರ ಮಟ್ಟಕ್ಕೆ ಮುಟ್ಟುವದು. ರಂಭಾಪುರಿಯ ರೇವಣಸಿದ್ಧರ ಕಾಲವೂ ಶೃಂಗೇರಿಯ ಆದಿಶಂಕರಾಚಾರ್ಯರ ಕಾಲವೂ ಒಂದೇ ಆಗಿದೆ: ಆದಿಶಂಕರಾಚಾರ್ಯರ ಕಾಲಮಾನವು ವಿಕ್ರಮ ಸಂವತ್ ೧೪ ಈಶ್ವರನಾಮ ಸಂವತ್ಸರ ದಿಂದ ವಿಕ್ರಮ ಸಂವತ್ ೪೬ ಸೌಮ್ಯ ಸಂವತ್ಸರದವರೆಗೂ ಆಕ್ರಮಿಸುವದೆಂದು ಮದ್ರಾಸಿನ ಮಿ|| ಸೂರ್ಯನಾರಾಯಣರಾವ್ B. A. M. R. A. S. ಅವರು ವಿಜಯನಗರ ಚರಿತ್ರೆ ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಹೊಸಕೇರಿ ಚಿದಂಬರಯ್ಯನವರು ಭರತಖಂಡದ ಜೀವಜ್ಯೋತಿಗಳು ಎಂಬ ಗ್ರಂಥದಲ್ಲಿ ಶಂಕರಾಚಾರ್ಯರ ಕಾಲಮಾನವು ಕ್ರಿ. ಪೂ. ೪೦ ವರ್ಷ ಎಂದು ಹೇಳಿದ್ದಾರೆ. ಆದಿ ಶಂಕರಾಚಾರ್ಯರೂ ರೇವಣಸಿದ್ಧರೂ ಒಂದೇ ಕಾಲ ದಲ್ಲಿದ್ದರೆಂಬುದನ್ನು ಶೃಂಗೇರಿಮಠದ “ ಗುರುವಂಶಕಾವ್ಯವು ” ತನ್ನ ಮೂರನೆಯ ಸರ್ಗದ “ ಸುಸಿದ್ಧೇನ ರೇವಣಸಿದ್ಧ ಮಹಾಯೋಗಿನಾದತ್ತಂ ‘ಶ್ರೀ ಚಂದ್ರಮೌಳೀಶ್ವರಲಿಂಗಂ’ (ಪ. ೩೪ರ ಕೆಳಗೆ)ಎಂಬ ಪ್ರಮಾಣಪಂಕ್ತಿಯಿಂದ ಸ್ಪಷ್ಟಪಡಿಸುತ್ತದೆ. ಶೃಂಗೇರಿಮಠದಲ್ಲಿ ಈ ಗುರುವಂಶ ಕಾವ್ಯವು ಆ ಮಠದ ಆಸ್ಥಾನ ವಿದ್ವಾನ್ ಕಾಶೀ ಲಕ್ಷ್ಮಣ ಶಾಸ್ತ್ರಿಗಳವರಿಂದ ಇಂದಿಗೆ ನೂರು ವರ್ಷಗಳ ಪೂರ್ವದಲ್ಲಿ ರಚಿತವಾಗಿದೆ. ಮೈಸೂರು ಆಸ್ಥಾನ ಧರ್ಮಾಧಿಕಾರಿಗಳಾದ ಕುಣಿಗಲ್ ಶ್ರೀ ರಾಮಶಾಸ್ತ್ರಿಗಳು ಇದನ್ನು ಪರಿಶೋಧಿಸಿ ಶ್ರೀರಂಗಂ ವಾಣಿವಿಲಾಸ ಪ್ರೆಸ್ಸಿನಲ್ಲಿ ಮುದ್ರಿಸಿದ್ದಾರೆ ಆದಿ ಶಂಕರಾಚಾರ್ಯರು ಸುರೇಶ್ವರಾಚಾರ್ಯರಿಗೆ ಪಟ್ಟಗಟ್ಟಿ ತಮ್ಮ ಎಲ್ಲಾ ಶಿಷ್ಯರೊಂದಿಗೆ ಕಾಂಚಿಗೆ ಹೊರಡುವಾಗ ತಮಗೆ ಆ ಮೊದಲೇ ರೇವಣಸಿದ್ಧರಿಂದ ಪ್ರಾಪ್ತವಾಗಿದ್ದ ಚಂದ್ರಮೌಳೀಶ್ವರಲಿಂಗವನ್ನು ಕೊಟ್ಟು ಪೂಜಿಸಮಾಡುತ್ತಿರುವಂತೆ ಆಜ್ಞಾಪಿಸಿರುವರು. ಈ ವಿಷಯವನ್ನೇ ಗುರುವಂಶ ಕಾವ್ಯವು ಸ್ಪಷ್ಟವಾಗಿ ಹೇಳಿದೆ. ಇದೇ ವಿಷಯವನ್ನು “ ಶಿವತತ್ವ ರತ್ನಕರ ” ದಲ್ಲಿ ಗ್ರಂಥ ಕರ್ತೃವಾದ ಕೆಳದಿ

ಬಸವರಾಜನು ಗ್ರಂಥದ ೪ನೆಯ ಕಲ್ಲೋಲದ ೧೨ನೆಯ ತರಂಗದಲ್ಲಿಯೂ ಹೇಳಿದ್ದಾನೆ. ಇವುಗಳಿಂದಾಗಿ ಆದಿ ಶಂಕರಾಚಾರ್ಯರಿಗೂ ರೇವಣಸಿದ್ಧರಿಗೂ ನಿಕಟಸಂಬಂಧವಿದ್ದುದು ಸ್ಪಷ್ಟವಾಗುತ್ತದೆ. ಈ ರೇವಣಸಿದ್ಧರು ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವನ್ನನುಗ್ರಹಿಸಿದ ಕಾಲವು ಕ್ರಿ. ಪೂ. ೨೦ ವರ್ಷಗಳೆಂದು ಭಾವಿಸಿದರೂ ಎಲ್ಲ ವೀರಶೈವ ಕವಿಗಳು ಹಾಡುವಂತೆ ಅವರು ತಮ್ಮ ಯೋಗಮಹಿಮೆಯಿಂದ ಬಾಳಿದ ಹದಿನಾಲ್ಕು ನೂರು ವರ್ಷಗಳ ಅವಧಿಯಲ್ಲಿ ಕ್ರಿ. ಪೂ. ೨೦೦ ವರ್ಷಗಳ ಸಮಯದಲ್ಲಿ ಅವರು ಭೂಮಿಗೆ ಅವತರಿಸಿದರೆಂದೂ ಮೂಲಮರುಳಸಿದ್ಧರ ಅಧಿಕಾರ ಕಾಲ ಕ್ರಿ. ಶ. ೯೦೨ರವರೆಗೂ ಅಥವಾ ಅದಕ್ಕೂ ಮುಂದೆ ಕೆಲವು ಕಾಲ ಜೀವಿಸಿ ರುದ್ರಮುನಿಗೆ ಪಟ್ಟವನ್ನು ಕೊಟ್ಟು ಶಿವೈಕ್ಯರಾದರೆಂದೂ ಭಾವಿಸಬಹುದಾಗಿದೆ. ಮದ್ರಾಸಿನ T. S. ನಾರಾಯಣ ಶಾಸ್ತ್ರಿಯವರು ೧೯೧೫ನೆಯ ಮೇ ತಿಂಗಳ " Indian Review " ದಲ್ಲಿ ಹೇಳಿರುವಂತೆ ಕ್ರಿ. ಶ ೧೦೭೨ರಲ್ಲಿ ಸುಪ್ರಸಿದ್ಧರಾದ ಶ್ರೀಪತಿ ಪಂಡಿತಾರಾಧ್ಯರು ತಮ್ಮ ಶ್ರೀಕರ ಭಾಷ್ಯದ ಚತುಃ ಸೂತ್ರಿ ಏಳನೆಯ ಪದ್ಯ ವೊಂದರಲ್ಲಿಯೇ ರೇವಣಸಿದ್ಧ ಹಾಗೂ ಮರುಳಸಿದ್ಧರನ್ನು ಸ್ತುತಿಸಿರುವುದರಿಂದ ರೇವಣಸಿದ್ಧ—ಮರುಳಸಿದ್ಧ ಇವರುಗಳು ಒಂದೇ ಕಾಲದಲ್ಲಿಯೇ ಇದ್ದರೆಂದು ತಿಳಿಯುತ್ತದೆ. " ಶಿವದಾಸಿಮಾರ್ಯ ಪುರಾಣ " ( ಸಂ. ೧ ಪು ೧—೨ರಲ್ಲಿ ) ಉಜ್ಜಯಿನೀ ಪೀಠದ ದಾರುಕಾಚಾರ್ಯರು "....ದ್ವಾಪರದಿ ದಾರುಕಾಖ್ಯಂ " ( ಪ. ೧೫ ) ದ್ವಾಪರ ಯುಗಾರಂಭದಲ್ಲಿದ್ದರೆಂದೂ " ವಿಲಸಿತದುಜ್ಜನಿಯ ಸಿಂಹಪೀಠದೊಳ್ಮೆರೆವ ಮರುಳಾರಾಧ್ಯಗಾಸೆರಗುವೆ " (ಪ. ೧೭)" ಸೋಮುಸದ್ಯೋ ಜಾತ ಮುಖದಿ ರೇವಣಸಿದ್ಧ ನಾಮಹಿತ ವಾಮದೇವಾಸ್ಯಾದಿ ಮರುಳಸಿದ್ಧ ನಾಮಹೇಶ್ವರನ ಘೋರಾನನದೊಳೊಗೆದನೇಕೋರಾಮತಂದೆ ಎಂದು " ಭೀಮತ್ಪುರುಷ ಮುಖದಲಿ ಪಂಡಿತಾರಾಧ್ಯ ನಾಮಹಿತಮೀಶಾನ್ಯ ಮುಖದಿ ವಿಶ್ವಾರಾಧ್ಯ ಕಾಮವಿಜಯರ ಪಂಚ ಸಿಂಹಾಸನಾಧಿಪರ ಪದಪದ್ಮ ಕಾನೆರಗುವೆ. (ಪ. ೧೭) ಎಂದಿರುವ ಪ್ರಮಾಣಗಳಿಂದ ದಾರುಕಾಚಾರ್ಯ ಮರುಳಾರಾಧ್ಯ ಮತ್ತು ಮರುಳಸಿದ್ಧರೆಂಬವರು ಒಂದೇ ಪೀಠದಲ್ಲಿ ಬೇರೆಬೇರೆ ಕಾಲಗಳಲ್ಲಿ ಪ್ರಸಿದ್ಧರಾದ ವಿಭಿನ್ನವ್ಯಕ್ತಿಗಳೆಂದು ತಿಳಿಯುತ್ತದೆ. ಕ್ರಿ. ಶ. ೧೬೮೭ರ ಪೂರ್ವದಲ್ಲಿದ್ದ ಹೊಳಗುಂದಿಯ ಮಲ್ಲಿಕಾರ್ಜುನ ಕವಿಯು ತನ್ನ ' ಶಂಕರದಾಸಿ ಮಯ್ಯನ ಪುರಾಣದ ೧ನೆಯ ಸಂಧಿಯಲ್ಲಿ ಅನುಕ್ರಮವಾದ ದೇವ ಪ್ರಾರ್ಥನೆ ಮಾಡುವಾಗ ಷಣ್ಮುಖ-ವೀರಭದ್ರ-ವೃಷಭೇಶ್ವರರ ಸ್ತೋತ್ರನಂತರ ರೇವಣಸಿದ್ಧ—ಮರುಳಸಿದ್ಧ—ಏಕೋರಾಮ

ಪಂಡಿತಾರಾಧ್ಯರನ್ನು ಸ್ತುತಿಸಿರುವುದೂ ಮರುಳಸಿದ್ಧ ಮೊದಲಾದವರ ಪ್ರಾಚೀನತೆಯನ್ನು ವ್ಯಕ್ತಪಡಿಸುತ್ತದೆ:—" ರೇವಣಾಸಿದ್ಧಂಗೆ ಭವವನ ದಾವ ನೆನಿಸುವ ಮರುಳಸಿದ್ಧಗೆ ಯೂವರಣ ಪ್ರಜ್ಞಾತ್ಮನಾದೇಕಾಂತರಾಮಂಗೆ " ಪಾವಕಾಕ್ಷಾನುಮತವಹ ವಿದ್ಯಾವಿಶೇಷಣ ವೇದಶಾಸ್ತ್ರ ಯುತಾವದನನಹ ಪಂಡಿತಾರಾಧ್ಯರಿಗೆ ವಂದಿಸುವೆ " (ಪ. ೮) ಈ ಪದ್ಯದಲ್ಲಿರುವ ಏಕಾಂತ ರಾಮಯ್ಯನು ಬಸವಣ್ಣನವರಿಗಿಂತ ಪೂರ್ವದವನಾದರೂ ಶ್ರೀಕರ ಭಾಷ್ಯದಲ್ಲಿಬರುವ ಏಕೋರಾಮರಿಗಿಂತಲೂ ಈತನು ಬೇರೆಯವನೆಂದು ಗ್ರಹಿಸಬೇಕು. ಕನ್ನಡ ಕವಿಗಳು ಏಕಾಂತ ರಾಮಯ್ಯನನ್ನೇ ಏಕೋರಾಮನನ್ನಾಗಿ ಗ್ರಹಿಸಿರುವುದು ತಪ್ಪು. ಏಕೋರಾಮರು ದ್ವಾಪರಯುಗದವರೆಂದು ಶ್ರೀಕರ ಭಾಷ್ಯವು ಸಾರುತ್ತದೆ. ಮೂಲಮರುಳಸಿದ್ಧರು ಕ್ರಿ.ಶ ೧೦೪೦ ರಲ್ಲಿ ಕಲ್ಯಾಣದ ಅರಸನಾದ ಸೋಮೇಶ್ವರ ಅಥವಾ ಭುವನೈಕಮಲ್ಲನ ಸಹಾಯದಿಂದ ಕೊಪ್ಪರ ಬಳಿಯಿರುವ ಉಜ್ಜಯಿನೀ ಕ್ಷೇತ್ರವನ್ನು ಕಟ್ಟಿಸಿದ ಹಾಗೂ ಆತನಿಂದ ೧೨೦ ಗ್ರಾಮಗಳ ಉಂಬಳಿ ಪಡೆದ ಹಾಗೂ ದೂಲಿಯ ಸಂಗೀತ ಕವಿಯ ಮರುಳಾರಾಧ್ಯ ವಿಜಯ (ಸಂ. ೧೫. ಪ ೫೪) ಪ್ರಮಾಣವಿರುವುದರಿಂದ ಈ ಮರುಳಸಿದ್ಧರ ಜೀವಿತಕಾಲ ೧೭೦ ವರ್ಷಗಳ ಅವಧಿಯಲ್ಲಿ ಓರಂಗಲ್ಲಿನಲ್ಲಿ ರಾಜ್ಯವಾಳಿದ ಕಾಗತಿಯ ಗಣಪತಿ ಮಹಾರಾಜನಿಗೆ ದರ್ಶನಕೊಟ್ಟಿರುವುದರಿಂದ ಈ ಗಣಪತಿ ರಾಜನ ಕಾಲಮಾನವು ಸುಮಾರು ಕ್ರಿ. ಶ ೧೦೭೦ರವರೆಗೂ ಬರಬಹುದು. ಆದರೆ ಕೆಲ ಚರಿತ್ರಕಾರರು ಇವನ ಕಾಲಮಾನವು ಕ್ರಿ. ಶ. ೧೧೯೯ ಎಂದೂ ಹೇಳುತ್ತಾರೆ. ದೇವಕವಿಯು ಬರೆಯಲೆತ್ತಿಸಿರುವುದು ರೇವಣಸಿದ್ಧರ ಸಮಕಾಲದ ಮರುಳಸಿದ್ಧ ಕಾವ್ಯ; ಆದರೆ ಕಾಲಜ್ಞಾನ ಶೂನ್ಯನಾದ ಕಾರಣ ಮೂಲ ಮರುಳಸಿದ್ಧನ ಸ್ಥಾನದಲ್ಲಿ ಆ ಹೆಸರುಳ್ಳ ಯಾವನೋ ಒಬ್ಬ ಆಧುನಿಕ ಮರುಳಪ್ಪನನ್ನು ಸೇರಿಸಿ ತನ್ನ ಕೃತಿಯನ್ನು ಕೆಡಿಸಿಕೊಂಡಿದ್ದಾನೆ. ಈ ವಿಷಯದಲ್ಲಿ ಶರಣ ಸಾಹಿತ್ಯದ ಸಂಪಾದಕರು ೧೯೪೫ರ ನವಂಬರ ಸಂಚಿಕೆಯಲ್ಲಿ (ಪು ೪೮೫ರಲ್ಲಿ) " ದೇವಕವಿಯ ಮರುಳಸಿದ್ಧನು ಪಂಚಾಚಾರ್ಯರಲ್ಲಿ ಪರಿಗಣಿತನಾದ ಆಚಾರ್ಯ ಮರುಳಸಿದ್ಧ ಅಥವಾ ಮರುಳಾರಾಧ್ಯನೆಂದು ಸ್ಪಷ್ಟವಾಗಿ ಹೇಳಲು ಅವಕಾಶವಿಲ್ಲ. " ಎಂದು 'ಮರುಳಸಿದ್ಧ ಕಾವ್ಯ ವಿಮರ್ಶೆ ಎಂಬ ಲೇಖದಲ್ಲಿ ಬರೆದಿದ್ದಾರೆ. ಬಾಳ್ಗಳಿಯ ಕಲಿದೇವನ ಹಾಗೂ ಗದ್ದುಗೆಯ ರಾಮಿತಂದೆಯ ಗ್ರಂಥಾಧಾರಗಳಿಂದ ಈ ಮರುಳಸಿದ್ಧ ಕಾವ್ಯವನ್ನು ಬರೆದೆನೆಂದು ದೇವ ಕವಿಯು ಹೇಳುವನು ಈ ಕಲಿದೇವನ ಕಾಲಮಾನವು ಉಜ್ಜಯಿನಿಯ ಸಿದ್ಧೇಶ್ವರ ದೇವಾಲಯದ ಹೊರ ಆವರಣದಲ್ಲಿರುವ ಶಾಸನದಿಂದ ಕ್ರಿ. ಶ. ೧೧೧೫ ಎಂದು ತಿಳಿಯುವುದು. ಉಜ್ಜಯಿನಿಯ

(ಕೊಟ್ಟೂರು ಬಳಿ) ಪ್ರಾರಂಭವಾದಮೇಲೆ ಇತ್ತೀಚಿನ ಕಲಿದೇವ ಮೊದಲಾದವರ ಕಾಲಮಾನವೇ ಇಷ್ಟೊಂದು ದೂರ ಹೋಗುತ್ತಿರುವಾಗ ಕೊಟ್ಟೂರು ಉಜ್ಜಯನಿಯನ್ನು ಪ್ರಾರಂಭಮಾಡಿದ ಮೂಲಮರುಳಸಿದ್ಧನ ಕಾಲ ಕ್ರಿ. ಶ. ೯೦೨ ರಷ್ಟು ಪ್ರಾಚೀನವೆಂದು ಧಾರಾಳವಾಗಿ ಒಪ್ಪಬೇಕಾಗಿದೆ. ಕೊಟ್ಟೂರು ಉಜ್ಜಯಿನಿಯ ಮರುಳಸಿದ್ಧೇಶ್ವರ ದೇವಸ್ಥಾನದ ರಚನೆ ಶಿಥಿಲವಾದ ಉಪ್ಪಡರಿಂದ ಕೆಲವು ಶೇಷಗಳು ಮತ್ತು ಅಲ್ಲಿ ಹೂಳಿರುವ ನೆಲಮನೆಯ ಶಿವಲಿಂಗ ಶಿಲಾಲೇಖಗಳ ಅಕ್ಷರಗಳು ಇವೆಲ್ಲವನ್ನು ಶೋಧಿಸುವಲ್ಲಿ ಈ ರಚನೆಯು ಇಂದಿಗೆ ಒಂದು ಸಾವಿರದ ನಾಲ್ವತ್ತು ನಾಲ್ಕು ವರ್ಷಗಳಷ್ಟು ಪೂರ್ವದ್ದೆಂದು ನಿರ್ಣಯಿಸಬಹುದಾಗಿದೆ. ಮೂಲಮರುಳಸಿದ್ಧರ ತರುವಾಯ ಹಲವಾರು ಜಾತಿಗಳಲ್ಲಿ ಈ ಹೆಸರಿನವರು ಪ್ರಸಿದ್ಧರಾಗಿದ್ದಂತೆ ತಿಳಿಯುತ್ತದೆ. ಬಾಚಿಗೌಡನ ಆಳಾದ ಕೂಚಿಮಾರನ ಹೀನವೃತ್ತಿಯಿಂದ ಹುಟ್ಟಿದ ಮರುಳಪ್ಪನು ಮೂಲಮರುಳಸಿದ್ಧನಲ್ಲ. ಕವಿಯಾದ ದೇವನು ಬುದ್ಧಿಮಾಂದ್ಯದಿಂದ ಆ ಮೂಲಸ್ಥಾನದಲ್ಲಿ ಮರುಳಪ್ಪನನ್ನು ಕೂಡ್ರಿಸಲು ಯತ್ನಿಸಿದ್ದಾನೆ. ಕೂಚಿಮಾರನ ಮಗನಾದ ಮರುಳಪ್ಪಗಿಂತ ಪೂರ್ವದಲ್ಲಿಯೇ ಮರುಳ ಶಬ್ದವು ಪ್ರಚಾರದಲ್ಲಿದ್ದಿತೆಂಬದನ್ನು ಈ ಕಾವ್ಯಕಾರನಾದ ದೇವನ ರಚನೆಯಿಂದಲೇ ಕಂಡುಕೊಳ್ಳಬಹುದಾಗಿದೆ " ಇರಲಿತ್ತ ಮರುಳಸಿದ್ಧೇಶ್ವರನು ಪುರದತ್ತ ಮರುಳಗೌಡನು ಮಲ್ಲಗೌಡನು ಮದುವೆ ಮಾಡಲು —" ( ಪ. ೪೫. ಸ ೩ ) ಈ ಪದ್ಯದಿಂದ ಆಗೊಬ್ಬ ಮರುಳಗೌಡನಿದ್ದುದು ಗೊತ್ತಾಗುತ್ತದೆ " ಶಿವಶರಣರಿಗೆ ಶರಣಾರ್ತಿ" ಎಂದು ಹೇಳುವ ಹಳೆಯ ಪದ್ಯಮಾಲೆಯಲ್ಲಿ "ಮರುಳ ಶಂಕರದೇವ" ನೊಬ್ಬನಿದ್ದನೆಂದು ತಿಳಿಯುತ್ತದೆ. ಹೀಗೆ ಅನಂತ ಜನರು ಮರುಳ ಶಬ್ದದಿಂದ ಆಗಿ ಹೋಗಿರಲು ಸಾಕು. ಮತ್ತು ಲಕ್ಷ್ಮೇಶ್ವರದ ಗೊಡಚಿ ವೀರಭದ್ರ ದೇವಾಲಯದಲ್ಲಿರುವ ಕ್ರಿ. ಶ. ೧೫೧೩ರಲ್ಲಿ ಶಿಲಾಲೇಖದಲ್ಲಿ ಕೆತ್ತಲಾದ ಹೂಲಿಯ ಮರುಳಸಿದ್ಧನಿದ್ದಂತೆ ತಿಳಿಯುತ್ತದೆ.

ಮುದ್ದಗೌಡ ಸುಗ್ಗಲದೇವಿಯರಿಗೆ ಮಗನಾಗಿ ಹುಟ್ಟಿದ ಸಿದ್ಧರಾಮನಿಗೆ ಮರುಳಸಿದ್ಧನೆಂಬ ಎರಡನೆಯ ಹೆಸರಿದ್ದಿತೆಂದೂ ಅವರು ಬಸವಣ್ಣನವರ ಕಾಲದಲ್ಲಿ ಇನ್ನೊಬ್ಬ ರೇವಣಸಿದ್ಧರಿಂದ ಶಿವದೀಕ್ಷೆ ಪಡೆದನೆಂತಲೂ ಕೊನೆಗೆ ಅವರ ಆಜ್ಞೆಯಂತೆ ಹಾಲುಮತ ( ಕುರುಬ ) ಉದ್ಧಾರಕಾರ್ಯವನ್ನು ಕೈಕೊಂಡು ಸರವೂರು ಕೊಡಂಗಲ್ಲು ಪ್ರಾಂತದಿಂದ ಕಲ್ಯಾಣಪಟ್ಟಣದವರೆಗೂ ಹಾಲುಮತದವರನ್ನು ಶಿವಲಿಂಗಧಾರಿಗಳನ್ನಾಗಿ ಮಾಡಿದಂತೆಯೂ ತಿಳಿಯುತ್ತದೆ (ಹಾಲುಮತದ ಪುರಾಣ ಸಂ. ೧. ಪದ್ಯ ೧ ರಿಂದ ೫) (ಹಸ್ತಲಿಖಿತಪ್ರತಿ)

ಆದರೆ ಮೂಲ ರೇವಣಸಿದ್ಧ ಆದಿ ಶಂಕರಾಚಾರ್ಯ ಇವರ ಕಾಲದಲ್ಲಿ ಪ್ರಸಿದ್ಧನಾಗಿದ್ದವನೇ ಆಚಾರ್ಯ ಮರುಳಸಿದ್ಧನೆಂದೂ ಅವನುದಯವು ಕಾಳಿಕಾ ಉಜ್ಜಯನಿಯ ವಟಕ್ಷೇತ್ರದಲ್ಲಿಯೇ ಆಯಿತೆಂದೂ ನಿರ್ಧರಿಸಲು ಸ್ವಯಂಭುವಾಗಮವು ಹೀಗೆ ಹೇಳುತ್ತದೆ.

''ತದ್ವನ್ ಮರುಳಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ.
ಸಿದ್ಧೇಶಲಿಂಗಾಜ್ಜನನಂ ಸ್ಥಾನ ಮುಜ್ಜಯಿನೀಪುರೇ"

ದೇವಕವಿಯು ಕೂಡ ಈಕಾವ್ಯದಲ್ಲಿ ಎರಡು ಉಜ್ಜಯಿನಿಗಳನ್ನು ಒಪ್ಪುತ್ತಾನೆ.

''ಶರನದಿಯ ತೀರದೊಳು ಕಾಳ್ಕುಜ್ಜನಿಯು ಒಪ್ಪೆ...."…. '' ಪರಮ ಪಾವನಮೂರ್ತಿಯ ಶರಣು ಶರಣಾರ್ತಿ ನಿರುಪಮನೆ ನಿತ್ಯ ಕಾಳ್ಕುಜ್ಜಯಿನಿ ಯರಸ...." ''ಇಂತೊಪ್ಪಿ ಕಾಳ್ಕುಜ್ಜನಿಯ ಪುರಂ ರಂಜಿಸಲು ಶಾಂತಸಿದ್ಧೇಶ ಮಳ್ಳೇಶಲಿಂಗವನು ನೆರೆನಿಂತಿರಿಸಿ ಮುಂತೆ ನಡೆದನು ಸಹಜನಂ ಸಹಿತ… ಅಂತಕಾಂತಕನು ಮಾಯೆಯ ಪವಾಡವನು ನೆರೆತಂತಿನಿಂಗೆಲಿದು ಕರಟನ ಮುರಿದು ಮತ್ತೆ ವರಕಾಂತಾ ಜನವ ಕೂಡಿಕೊಂಡು ನಡೆದನು ಭವಹರ ಶಾಂತ ನಿಶ್ಚಿಂತನು. (ಸ. ೪. ಪ. ೧೦೩. ೧೦೬. ೧೦೭) ಕಾಳಿಕಾ ಉಜ್ಜಯಿನಿಯಲ್ಲಿ ಶರನದಿಯಿಲ್ಲ. ಕ್ಷಿಪ್ರಾನದಿ ಇದೆ. ದೇಶ ಪರಿಜ್ಞಾನವಿಲ್ಲದ ರಚನೆ ಹೀಗೆಯೇ ಸರಿ!

ಕವಿಯ ಅಭಿಪ್ರಾಯದಂತೆ ಮೂಲಮರುಳ ಸಿದ್ಧೇಶ್ವರನು ಕಾಳಿಕಾ ಉಜ್ಜಯಿನಿಯಲ್ಲಿಯೇ ವಾಸವಾಗಿದ್ದಂತೆ ತಿಳಿಯುತ್ತದೆ. ಕ್ಷಿಪ್ರಾನದಿಯ ದಂಡೆಯಲ್ಲಿರುವ ಈಗಿನ ಕಾಳಿಕಾ ಉಜ್ಜಯಿನಿಯೂ ಕೊಲ್ಲಾಪುರವೂ ಮಹಾರಾಷ್ಟ್ರದಲ್ಲಿರುತ್ತವೆ. ಆ ಕಾಲದಲ್ಲಿ ಈ ಕೊಲ್ಲಾಪೂರ ಭಾಗದಲ್ಲಿ ಮಂತ್ರವಾದಿಗಳಾದ ನವನಾಥಸಿದ್ಧರ ಗುಂಪು ವಿಪುಲವಾಗಿದ್ದು ಮಾಯೆಯ ಮಾನಭಂಗಾನಂತರ ಮೂಲಮರುಳಸಿದ್ಧರ ವಾಸಕ್ಕೆ ಆ ಭಾಗದಲ್ಲಿ ಬಹಳ ತೊಂದರೆಯಾಗಿದ್ದಂತೆ ಊಹಿಸಬಹುದಾಗಿದೆ. ಈ ಕಾರಣ ಇಂತಹ ಬೇರೆ ಕಾರಣದಿಂದ ತಮ್ಮ ಮೂಲಸ್ಥಾನವಾದ ಕಾಳಿಕಾ ಉಜ್ಜಯಿನಿಯನ್ನು ಬಿಟ್ಟು ಬಂದು ಮರುಳಸಿದ್ಧರು ಈಗಿನ ಕೊಟ್ಟೂರು ಬಳಿ ಉಜ್ಜಯಿನಿಯನ್ನು ಸ್ಥಾಪಿಸಿದರೆಂದು ನಿರ್ಣಯಿಸಬಹುದು. ಈಗಿನ ಈ ಉಜ್ಜಯಿನಿಯನ್ನು ಸ್ಥಾಪಿಸುವಾಗ ಎಲ್ಲ ಕ್ಷೇತ್ರಗಳ ಮಣ್ಣನ್ನು ಪರೀಕ್ಷಿಸಿ ಎಲ್ಲದಕ್ಕೂ ಮಿಗಿಲಾದ ಕಾರಣ ಸ್ಥಾಪಿಸಿದಂತೆ ಈ ಕಾವ್ಯದಲ್ಲಿದೆ.

## ಆದಿಮರುಳಸಿದ್ಧನಿಗೂ ರೇವಣಸಿದ್ಧನಿಗೂ ಇರುವ ಸಂಬಂಧ

ಕೊಲ್ಲಾಪುರದ ಕರಟಾಸುರ ಪುತ್ರಿ ಮಾಯೆಯ ಮಾನಭಂಗವು ಮರುಳಸಿದ್ಧನಿಂದಾದ ಬಳಿಕ ಅಲ್ಲಿದ್ದ ಗೋರಕ್ಷ ಮೊದಲಾದವರು ಕ್ರುದ್ಧರಾಗಿರಬೇಕು. ಅದು ಸಹಸಾತೀತವಾಗಿರಬೇಕು. ಈ ಸಂಧರ್ಭಕ್ಕೆ ಮೊದಲೇ ಮರುಳಸಿದ್ಧನು ಮಲೆನಾಡಿನ ಚಿನ್ಮಯಗಿರಿ ( ರಂಭಾಪುರಿಯ ಮಲೆಯಾದ್ರಿ ) ಯ ರೇವಣಸಿದ್ಧೇಶ್ವರನನ್ನು ಕಂಡು ಆತನಿಂದಲೂ ಸಿದ್ಧಿಗಳನ್ನು ಸಂಪಾದಿಸಿರಬೇಕು. ಹೂಲಿಯ ನಂದೀಶ ಕವಿಯ " ಮರುಳಾರಾಧ್ಯ ವಿಜಯ"ದಲ್ಲಿ ರೇವಣಸಿದ್ಧ ಮರುಳಸಿದ್ಧ ಮೊದಲನೆಯ ಸಮಾಗಮವು "ಸಿದ್ಧಗಿರಿ" ಎಂಬಲ್ಲಾಯಿತೆಂದು ಉಕ್ತವಾಗಿದೆ ( ಸಂ. ೧೩ ಪ. ೩೧ ). ಈ ವಿವರಗಳನ್ನು ದೇವ ಕವಿಯು ಗುರು ಶಿಷ್ಯ ಭಾವನೆಯಿಂದ ಬಣ್ಣಿಸಿದ್ದಾನೆ ಈ ವರ್ಣನೆಯು ಅಸಂಭವವೇನೂ ಅಲ್ಲ. ಎರಡನೆಯ ಉಜ್ಜಯಿನಿಯ ಸ್ಥಾಪನೆ, ಅಲ್ಲಿ ಧರ್ಮ ಪೀಠದ ಸ್ಥಾಪನೆ ಇವುಗಳಾದ ಬಳಿಕ ಮೂಲ ಮರುಳಸಿದ್ಧನಿಗೆ ಆ ಪೀಠದ ಅಧಿಕಾರಾರೋಹಣಕಾಲದಲ್ಲಿ ರೇವಣಸಿದ್ಧರು ಗುರುಸ್ವರೂಪದಲ್ಲಿ ಹೋಗಿ ಆ ಕಾರ್ಯವನ್ನು ಸಾಂಗಗೊಳಿಸಿರಬೇಕು. ಮೂಲ ಮರುಳಸಿದ್ಧೇಶ್ವರನು ಎರಡನೆಯ ಉಜ್ಜಯಿನಿಯನ್ನು ಸ್ಥಾಪಿಸಿದುದೂ ಅಲ್ಲಿ ನೆಲೆಸಿದುದೂ ರೇವಣಸಿದ್ಧರ ಅಭಿಪ್ರಾಯದಿಂದಲೇ ಎಂಬುದನ್ನು "........ ಬಂದನುಜ್ಜನಿಪುರಕಂ"—— " ಗುರ್ವಾಜ್ಞೆಯಿಂದೊಲಿದು ಮಿಗೆಸ್ತ್ರೀಯರು ಸಹ ತಿರುಗಿದನುಜ್ಜನಿಪುರಕಂ" "ಮೆರೆದನುಜ್ಜನಿಪುರದೊಳು" ಈ ಕವಿಯೂ ಹೇಳುತ್ತಾನೆ. " ಮರುಳಾರಾಧ್ಯ ವಿಜಯ"ವೂ ಈ ವಿಚಾರವನ್ನು ರೇವಣಸಿದ್ಧರ ಅಪ್ಪಣೆಗೆ ಸಂಬಂಧಿಸಿ ಸ್ಪಷ್ಟವಾಗಿ ವಿವರಿಸಿ ಎರಡನೆಯ ಉಜ್ಜಯಿನಿಯ ಸ್ಥಾಪನೆಗೆ ಜೈನರು ಮಾಡಿದ ದಬ್ಬಾಳಿಕೆಯೇ ಕಾರಣವಾಯಿತೆಂದು ಸತ್ಯಾಂಶವನ್ನು ಹೊರಗಿಟ್ಟಿದೆ. ( ಸಂ ೧೨. ೧೩ ಪದ್ಯ ೪೬. ೪೭ )

ದೇವಕವಿಯ ಅಭಿಪ್ರಾಯದಂತೆ ಐತಿಹಾಸಿಕ ವ್ಯಕ್ತಿಯಾದ ಈ ಮರುಳಸಿದ್ಧನು ಆರು ಸಾವಿರ ವರ್ಷ ದೇಶಸಂಚಾರ ಮಾಡಿದಂತೆ ಗೊತ್ತಾಗುತ್ತದೆ. " ಅರಿತರಿಯದಾರುಸಾವಿರ ವರ್ಷವೀಪರಿಯ ಚರಿಸಿ ದೇಶಾಂತದೊಳಗೆ ಪವಾಡವಗೆಲಿದು ಮರುಳತನ ವಿಪರೀತ ಸಲ್ಲದುಂ ತನಗೆಂದು ಮರುಳ ಮನದೊಳ ನೆನೆವುತ...." ( ಸ. ೪. ಪ ೪ ) ಈ ಆರು ಸಾವಿರ ವರ್ಷ ಭೂಲೋಕದಲ್ಲಿ ವಾಸವಾಗಿದ್ದ ಮರುಳಸಿದ್ಧನು ಯೋನಿಜನಾದ ಕೂಚಿಮಾರನ ಮಗ ಮರುಳಸಿದ್ಧಪ್ಪನಾಗಲಾರನೆಂದು ಕವಿಗೂ ಸಹ ತಿಳಿಯುವಂತಿದೆ. ಹೀಗಿದ್ದು ಅಲ್ಪಜ್ಞನಾದ ಕವಿಯು ತನಗೆ ದೊರೆತ ಎಲ್ಲಾ ವಿಷಯಗಳನ್ನು ಮನಸ್ಸಿಗೆ

ಬಂದಂತೆ ಹಿಂದು ಮುಂದು ನೋಡಿ ಬರೆದು ಕಾವ್ಯವನ್ನು ಕೆಡಿಸಿದ್ದಾನೆ. ಈ ಚಾರಿತ್ರಿಕ ಅಂಶಗಳನ್ನು ಸರಿಪಡಿಸಿಕೊಳ್ಳುವುದೂ ಒಂದು ಪ್ರಯಾಸವಾಗಿಯೇ ತೋರುವುದು; ಆದರೂ ಯತ್ನಿಸೋಣ !

ಕವಿಯ ಮಾತಿನಂತೆ ಮರುಳಸಿದ್ಧನು ಪಶ್ಚಿಮ ದೇಶ ಮಾರ್ಗವಾಗಿ ಮಲೆಯಾದ್ರಿ ( ಚಿನ್ಮಯಗಿರಿ )ಯನ್ನು ಸೇರುತ್ತಾನೆ ಅಲ್ಲಿ ಅಷ್ಟರಲ್ಲಿಯೇ ಮಹಿಮಾಶಾಲಿಯಾದ ರೇವಣಸಿದ್ಧೇಶ್ವರನು ವಾಸವಾಗಿರುತ್ತಾನೆ. ಮರುಳಸಿದ್ಧನು ದರ್ಶನಪಡೆಯುವನು "..... .. ಶುದ್ಧಾತ್ಮಸಂಪಾದಿ ಗುರುಕರ ಜಾತನೆನಿಸುವರೆ ನೀನೆ ಮಿಗಿಲು ......ಗುರುಕರಸ್ಥಲಕೆ ಬಿಜಯಂಗೈದು ರಕ್ಷಿಸುವ ಗುರುರಾಯ...." (ಸ. ೪ ಪ. ೫) ಎಂದು ಶಿವಸಿದ್ಧಾಂತದ ಬೋಧೆಯಾಗಬೇಕೆಂದು ಬೇಡುವನು; ರೇವಣಸಿದ್ಧನು ಮರುಳಸಿದ್ಧನಿಗೆ ದೀಕ್ಷೆಯಿಂದ ಪೂರ್ವಾಶ್ರಮವು ಕಳೆಯುವ ಬಗೆ, ಈ ದೀಕ್ಷೆಗೆ ಉತ್ತಮ ಮುಹೂರ್ತದ ಆವಶ್ಯಕತೆ, ಪಂಚಾಕ್ಷರೀ ಮಹಿಮೆ, ದೀಕ್ಷಾಕಾಲದಲ್ಲಿ ಪಂಚಕಲಶಗಳನ್ನೇ ಸ್ಥಾಪಿಸಬೇಕೆಂಬುವ ನಿಯಮ, ಪೂಜಾ ಕಾಲದಲ್ಲಿ ಪದ್ಮಾಸನದಿಂದಲೇ ಇರಬೇಕೆಂಬ ವಿಧಿ, ಲಿಂಗಾಂಗ ಸಾಮರಸ್ಯವಾದ ಬಳಿಕ ವೀರಶೈವಾಚಾರ್ಯರು ಹೇಗಿರುವರೆಂಬ ಸ್ಥಿತಿ ಇವೇ ಮುಂತಾದವನ್ನು ಬೋಧಿಸುವನು. "ಈ ಪರಿಯ ದೀಕ್ಷಾವಿಧಾನಮಂ ನೆರೆತಿಳುಹಿ ...ಉಮಾಪತಿಯನರಿವ ಶ್ರುತಿಸ್ಮೃತಿ ಪುರಾಣಗಳನು ಗೋಪ್ಯವಾಗಿಯೆ ಬರೆದನು. (ಸ. ೪ ಪ. ೧೪) ಇಲ್ಲಿ ಉಮಾಪತಿಯಾದ ಶಿವನನ್ನು ತಿಳಿಯಲು ಶ್ರುತಿ ಸ್ಮೃತಿ ಪುರಾಣಗಳು ಅತ್ಯಾವಶ್ಯಕವೆಂಬುದೂ ಈ ವಿಧವಾದ ವೇದಾಂತ ಬೋಧೆಯು ಬಹಿರಂಗದಲ್ಲಿಡಲು ಯೋಗ್ಯವಲ್ಲವೆಂಬುದೂ ಪ್ರಾಚೀನ ಮತವಾಗಿರಬೇಕಾದುದರಿಂದ ಕವಿಯು "ಗೋಪ್ಯವಾಗಿಯೆ ಬರೆದನು" ಎಂದು ಸ್ಪಷ್ಟಪಡಿಸಿರಬೇಕು. ಇಷ್ಟಾದ ಬಳಿಕ "ತಂದೆ ಕರುಣಿಪುದು ಮುಂದಿನ ಭಕ್ತಿಯಾದರಣೆಯ ..." (ಸ. ೪ ಪ ೧೫) ಎಂದು ಮರುಳಸಿದ್ಧನು ಪುನಃ ರೇವಣಸಿದ್ಧರನ್ನೂ ಪ್ರಾರ್ಥಿಸುವನು. ಅಲ್ಲಿಂದ ರೇವಣಸಿದ್ಧನು ಅದನ್ನು ಬೋಧಿಸುತ್ತಾ ಕೊಲ್ಲಾಪುರದ ಮಾಯಾ ವೃತ್ತಾಂತವನ್ನು ಎತ್ತಿಕೊಳ್ಳುವನು. ಈ ಮಾಯಾಗರ್ವಭಂಗಕ್ಕೆ ಮರುಳಸಿದ್ಧನು ರೇವಣಸಿದ್ಧನ ಅಪ್ಪಣೆ ಪಡೆಯುವನು. ಹೊರಡುವನು. "........ ಸಿಂಧು ಮಲೆಯಾಳ ಚೋಳ್ದೇಶದೊಳು ಚರಿಸುತಲಿ ಆಂಧ್ರ ದ್ರಾವಿಡ ತುರುಕ ಕರ್ಣಾಟದೊಳಗೆ...." (ಸ. ೪. ಪ. ೨೦) ಸಂಚರಿಸಿ ಕುರೂಪಿಯಾದ ಕಾಪಾಲಿಕ ವೇಷವನ್ನು ಧರಿಸಿ ಕೊಲ್ಲಾಪುರಕ್ಕೆ ಹೋಗುವನು. ಮರುಳಸಿದ್ಧನು "....ಕಾಪಾಲಿ ಕರುಣಾಕರನು ಮರುಳಸಿದ್ಧೇಶ ರೂಪವಡಗಿಸುತ ಮಾಯದ

ವೇಷವನ್ನು ತಾಳಿ ಕಾಪುರುಷರಂತೆಸೆವುತ" (ಸ. ೪ ಪ ೪೩) "........ಕಾಪಾಲಿಧರನವರ ಸಂತೈಸಿ ಜಂಗಮರೂಪನಳವಡಿಸಿ ಕರಪಾತ್ರೆ—ಲಾಕುಳ ಕೋಲ ತಾಪಿಡಿದು...." (ಸ. ೪. ಪ. ೮೯) ಈ ವಿಧವಾಗಿ ಜಂಗಮರೂಪವನ್ನು ಮುಚ್ಚಿ ಕೊಂಡು ಲಾಕುಳ ಕರಪಾತ್ರೆ ಕೋಲುಗಳನ್ನು ಹಿಡಿದು ಕಾಪಾಲಿಕ ವೇಷ ವನ್ನು ಧರಿಸಿ ಮಾಯೆಯನ್ನು ಗೆಲ್ಲ ಹೊರಟಿರುವದನ್ನು ನೋಡಿದರೆ ಆ ಕಾಲ ದಲ್ಲಿಯೇ ಶೈವ ಬೋಧವಾದ ಲಕುಲೀಶ ಕಾಲಾಮುಖ–ಕಾಪಾಲಿಕ ಮೊದ ಲಾದ ಪಂಥಗಳು ವ್ಯಾಪಕವಾಗಿದ್ದಂತೆ ತಿಳಿಯುತ್ತದೆ. ಅವರ ರೂಪದಿಂದಲೇ ಮರುಳಸಿದ್ಧನು ಹೋಗಿ ಅವರನ್ನು ಜಯಿಸಿದುದು ದೊಡ್ಡ ರಾಜನೀತಿ. ಆ ಕಾಲಕ್ಕೆ ಲಕುಲೀಶ ಕಾಲಾಮುಖಪಂಥಗಳು ಲಿಂಗಧಾರಣೆ ಅಥವಾ ಲಿಂಗಾ ರಾಧಕರನ್ನು ದ್ವೇಷಿಸುತ್ತಿರಬಹುದು. ಅವರನ್ನು ಗೆದ್ದು ವೀರಶೈವ ಲಿಂಗ ಧಾರಣೆ ಅಥವಾ ಲಿಂಗಾರಾಧಕರನ್ನು ದ್ವೇಷಿಸುತ್ತಿರಬಹುದು. ಅವರನ್ನು ಗೆದ್ದು ವೀರಶೈವ ಲಿಂಗಧಾರಣ ಸಿದ್ಧಾಂತವನ್ನು ವ್ಯಾಪಕವಾಡುವದಕ್ಕಾಗಿ ರೇವಣಸಿದ್ಧ ಮರುಳಸಿದ್ಧ ಮೊದಲಾದ ವೀರಶೈವಾಚಾರ್ಯರು ಸುದೀರ್ಘ ವಾಗಿ ಯತ್ನಿಸಿರುವಂತೆ ಈ ವಿಜಯ ಯಾತ್ರೆಯಿಂದ ತಿಳಿದುಬರುವುದು. ಇವರ ಈ ಅಸಾಧ್ಯ ಪ್ರಯತ್ನಗಳಿಂದಾಗಿ ಈ ಮೇಲ್ಕಾಣಿಸಿದ ಈ ಎಲ್ಲಾ ಪಂಥ ಗಳೂ ವೀರಶೈವದಲ್ಲಿ ಸೇರಿದವೆನ್ನಲು ಯಾವ ಅಭ್ಯಂತರವೂ ಇಲ್ಲ.

## ಮೂಲ ಮರುಳಸಿದ್ಧನ ಕಾಲದವರು

ಈ ಕವಿಯ ಹೇಳಿಕೆಯಂತೆ ವಿಚಾರಿಸಿದರೂ ಆಗ ಕೊಲ್ಲಾಪುರದಲ್ಲಿ "....ಆದಿನಾಥನು ಮೀನನಾಥನು. ಸೌರಗರೆನಿಪನಾದಿ ವಾಗದ್ವೈತ ಗೋರಕಾ ಸಿದ್ಧರಿವರೀಧರೆಯೊಳತ್ಯಧಿಕರು ನಾದಮಯನುಂ ಪೆಸರ್ವಡೆದ ವಿರೂಪಾಕ್ಷ ಮಿಗಿಲಾದವನು ಮೇಘನಾಥನು ಕ್ಷಣಿಕನೆಂಬವನು ವಾದಪ್ರಸಂಗದೊಳಧಿಕ ನಾಗಾರ್ಜುನಂ ಮುಂತಾದ ಸಿದ್ಧರೆಸೆಯೆ" ಸಿದ್ಧಿಯುಂ ಪಡೆದ ಸಾಧಕರೆಸೆದುದಾ ಪುರದಿ ಸಿದ್ಧ ಸಾಧಕರ್ನೆರದನಲ್ಲಾಳಸಿದ್ಧ ಮಿಗಿಲ್ಪ್ಪಿದ್ಧಿಯಾತ್ಮನ ಪಡೆದ ಬಲ್ಲಾಳ ಸಿದ್ಧ ನೆರೆ ಮದ್ದಿನೊಳು ಕುಟಿಲ ಸಿದ್ಧ, ಯುದ್ಧ ಕೋಲಾಹಲಸಿದ್ಧ ನಂಜನ ಸಿದ್ಧರಿದ್ದರಾನಗರದೊಳು ರೇವಣಸಿದ್ಧ ಬಹುಸಿದ್ಧರಿಂಗಧಿಪ ಗೇರಕ ಸಿದ್ಧನವನಾಥ ಸಿದ್ಧರಿದ್ದೆಸೆಯೊಳೊಪ್ಪಿ ಮೆರೆಯೆ". ಸ. ೨ ಪು. ೩೮, ೩೯

ಆಧಿನಾಥ, ಮೀನನಾಥ, ಗೇರಕ್ಷಸಿದ್ಧ, ವಿರೂಪಾಕ್ಷ, ಮೇಘನಾಥ, ನಾಗಾರ್ಜುನ, ಅಲ್ಲಾಳಸಿದ್ಧ, ಬಲ್ಲಾಳಸಿದ್ಧ, ಕುಟಿಲಸಿದ್ಧ, ಯುದ್ಧ ಕೋಲಾಹಲಸಿದ್ಧ, ನಂಜನಸಿದ್ಧ, ದೇವಸಿದ್ಧರೆಂಬ ಹೆಸರಿನಿಂದ ಲಕುಲೀಶ-

ಕಾಲಾಮುಖ-ಕಾಪಾಲಿಕ ಪಂಥದ ಅನೇಕ ಮಂತ್ರವಾದಿಗಳು ಪ್ರಸಿದ್ಧರಾಗಿದ್ದ ರೆಂದು ತಿಳಿಯುತ್ತದೆ. ಗೋರಕ್ಷನ ಗರ್ವಭಂಗವು ರೇವಣ ಸಿದ್ಧೇಶ್ವರ ರಿಂದಲೇ ಆಯಿತೆಂಬುದನ್ನು ರೇವಣಸಿದ್ಧ ಪುರಾಣ, ರೇವಣಸಿದ್ಧ ರಗಳೆ ಮುಂತಾದವುಗಳು ಹೇಳುತ್ತವೆ. ರೇವಣಸಿದ್ಧರು ಈ ಮಂತ್ರ ವಾದಿಗಳನ್ನು ಜಯಿಸಿದನಂತರವೂ ಕೊಲ್ಲಾಪುರದಲ್ಲಿ ಈ ಮೇಲ್ಕಂಡ ಅನೇಕ ಸಿದ್ಧರು ವಾಸವಾಗಿರಬೇಕು. ಸುಪ್ರಸಿದ್ಧರಾದ ರೇವಣಸಿದ್ಧರು ಅಲ್ಲಿಗೆ ಹೋಗಿ ಬಂದನಂತರವೇ ಅವರ ಪವಿತ್ರಾಭಿಧಾನವನ್ನು ನಾಥ ಸಂಪ್ರದಾಯದವರು ಇಟ್ಟುಕೊಂಡಂತೆ ಕಾಣುತ್ತದೆ. ಆದುದರಿಂದಲೇ ಈ ಮೇಲಿನ ಹೆಸರು ಗಳಲ್ಲಿ ರೇವಣಸಿದ್ಧ ಎಂಬ ಹೆಸರೂ ಇವರ ಪಂಕ್ತಿಯಲ್ಲಿ ಬಂದಿದೆ. ಕ್ರಿ. ಶ. ೧೧೩೫ ರಲ್ಲಿ ರೇವಣಭಟ್ಟ ಎಂಬವರೊಬ್ಬರು ಇದ್ದ ಹಾಗೆ ನವಿಲೆಯ ಜಡೆಯ ಶಂಕರ ದೇವಾಲಯದ ಬಳಿ ಇರುವ ಶಿಲಾಲೇಖದಿಂದ ಗೊತ್ತಾಗು ತ್ತದೆ. (ಶಂಕರದಾಸಿಮಯ್ಯ ಪುರಾಣ. ಪ್ರಸ್ತಾವನೆಯ ಪು. ೪೫ ಪಂಕ್ತಿ೧೨) ಶ್ರೀಮಾನ್ ಎಸ್. ಎಸ್. ಬಸವನಾಳ M. A. ಅವರು ಸಂಪಾದಿಸಿದ್ದು ಧಾರವಾಡ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಪ್ರಕಟನೆ ) ಕೆಲವು ಇತಿಹಾಸ ಕಾರರು ಸಿದ್ದ ಪಂಕ್ತಿಯಲ್ಲಿರುವ ರೇವಣ ಸಿದ್ಧ ಶಬ್ದವನ್ನೇ ಗಟ್ಟಿ ಹಿಡಿದು ಇವನು ಲಕುಲೀಶ ಅಥವಾ ಕಾಲಾಮುಖ ಪಂಥದವನು ಎಂದು ಹೇಳಿ ವೀರ-ಶೈವರು ತಮ್ಮ ಗುರುವೆಂದು ಹೇಳುವ ರೇವಣಸಿದ್ಧನು ಇವನೇ ಇರಬೇಕೆಂದು ತರ್ಕಿಸುವ ಸಾಹಸ ಮಾಡಿದ್ದಾರೆ. ಅವರ ಈ ತಪ್ಪು ತಿಳುವಳಿಕೆಯನ್ನು ಈ ಕಾವ್ಯದಲ್ಲಿ ಬಂದಿರುವ ಮರುಳ ಸಿದ್ಧನ ಜೊತೆಗಿರುವ ರೇವಣಸಿದ್ಧ ಮತ್ತು ಕೊಲ್ಲಾಪುರದಲ್ಲಿದ್ದ ನಾಥ ಸಾಂಪ್ರದಾಯದ ರೇವಣ್ಣಸಿದ್ಧ ಈ ಎರಡು ಪ್ರತ್ಯೇಕ ನಾಮಗಳು ಹೋಗಲಾಡಿಸುವವೆಂದು ಧಾರಾಳವಾಗಿ ಹೇಳಬಹು ದಾಗಿದೆ. ರೇವಣ ಸಿದ್ಧೇಶ್ವರನು ಕೊಲ್ಲಾಪುರಕ್ಕೆ ಹೋಗಿ ಗೇರಕ್ಷ ಭಂಗ ವನ್ನು ಮೊದಲೇ ಮಾಡಿ ಅಲ್ಲಿಯ ವಿದ್ಯಮಾನವನ್ನು ಚೆನ್ನಾಗಿ ಬಲ್ಲವನಾದ ಕಾರಣವೇ " ಬೇಗ ಹೊ ದಿರುತ್ತರದ ದಿಶೆಯ ಭಾಗಕೆ.... " " ಆ ದೇವಿ ಬಂದು ಕೊಲ್ಲಾಪುರದಿ ನೆಲೆಸಿದಳು " ( ಸ. ೪. ಪ ೧೭-೧೮ ) ಮುಂತಾಗಿ ಅಲ್ಲಿಯ ಭೀಕರತೆಯನ್ನು ಮರುಳ ಸಿದ್ಧೇಶ್ವರನಿಗೆ ವಿವರಿಸುವನು. ಆದುದ ರಿಂದ ಕೊಲ್ಲಾಪುರದಲ್ಲಿ ರೇವಣಸಿದ್ಧರಿಂದ ಗೇರಕ್ಷ ಗರ್ವಭಂಗವಾದನಂತರವೇ ಮರುಳಸಿದ್ಧನಿಂದ ಅಲ್ಲಿಯ ಮಾಯಾ ಗರ್ವಭಂಗವಾಯಿತೆಂದು ಇಲ್ಲಿ ನಿರ್ಧ ರಿಸಬಹುದಾಗಿದೆ.

## ಮೂಲಮರುಳಸಿದ್ಧ ಸೋಮಸಿಂಹಾಸನ ಸೂರ್ಯ ಸಿಂಹಾಸನ

ಮೂಲ ಮರುಳಸಿದ್ಧನು ಉಜ್ಜಯಿನಿಯನ್ನೂ ಅಲ್ಲಿಯ ಮಠಮಂದಿರಗಳನ್ನೂ ಬಹು ಮನೋಹರವಾಗಿ ಮಾಡಿಸಿದಂತೆ ಈ ಕಾವ್ಯದಿಂದ ತಿಳಿಯಬಹುದಾಗಿದೆ. ಇಲ್ಲಿ ವಿಶೇಷವೆಂದರೆ ಶಿವಾಗಮ ಪದ್ಧತಿಯಂತೆ ದೇವಮೂರ್ತಿ ಪ್ರತಿಷ್ಠೆ. ಈ ೬೩ ಪುರಾತನರ ನಾಮಗಳು ಅತಿ ಪ್ರಾಚೀನ ಕಾಲದವುಗಳಾಗಿವೆ. ಇವರು ಆಧುನಿಕ ಪುರಾತನರಲ್ಲ. ಈ ಆಧಾರಗಳಿಂದಲೂ " ದ್ವಾಪರದ ಕಡೆಯಾಮಿಗೆಣಿಸುತಿರೆ ಕಲಿಯುಗಾದಿಯ ಪ್ರಥಮ ಗಣಾರಂಭವಾಗುತಿರಲು " ( ಸ. ೫ ಪ ೧೦ " ಚಕ್ರಾಚಾರ್ಯರು ಕರೆದು ನೇಮಿಸಿದ ನಾಗಮುಕ್ಕಣ್ಣ ಹರರು ಕಲಿಯುಗದಾದಿ ಪುಗುತಲಿದೆ. ( ಸ. ೫ ಪ. ೧೫, ) ಎಂದು ಹೇಳುವ ಪದ್ಯಗಳಿಂದಲೂ ಈ ಮೂಲಮರುಳ ಸಿದ್ಧರ ಕಾಲವು ನಾವು ಈ ಹಿಂದೆ ನಿರ್ಣಯಿಸಿದಂತೆ ಬಹು ಪ್ರಾಚೀನವಾಗಿದೆ. ಇಲ್ಲಿ ಗಮನಾರ್ಹವಾದ ಸಂಗತಿಯೆಂದರೆ ಮರುಳ ಸಿದ್ಧರು ತಮ್ಮ ಸಮಾನಸ್ಕಂಧರಾದ ಮತ್ತು ದೇಶೀಯರಾದ ರಂಭಾಪುರೀ ಶ್ರೀಪೀಠಗಳ ಪೀಠಾಚಾರ್ಯರನ್ನು ತಮ್ಮ ಸಿಂಹಾಸನಕ್ಕೆ ಆಹ್ವಾನಿಸಿ ಗೌರವಿಸಿದುದು :--

" ಕಾಮಹರ ಮರುಳಸಿದ್ಧೇಶ ದೇಗುಲದೊಳಗೆ
ಸೋಮ ಸಿಂಹಾಸನದ ಮಠಪತಿಗಳೊಪ್ಪಿರಲು
ಭೂಮಿಯೊಳು ಚರಿಸಿ ಪರಲಿಂಗ ಮೂರ್ತಿಗಳಾಗಿ ಕಾಮವನು ಕಡೆಗೊತ್ತುತ
ನೇಮವಿಡಿದಾಚರಣೆಗಳನು ತ್ರಿಕಾಲದೊಳು
ಪ್ರೇಮದೊಳು ನಡೆಸುತ ಶಿವಾರ್ಚನೆಯ ಮಾಡುತ್ತ
ಆಮಹಾ ಮಹಿಮರಿರುತಿರ್ದರನುದಿನ ಸುಖದಿ ತಾಮಸವಳಿದಾಗಲು.

ಸೂರ್ಯ ಸಿಂಹಾಸನದ ಮಠಪತಿಗಳೊಪ್ಪಿದರು
ಭಾರಿಯ ದಂಡ ಕಮಂಡಲು ಮಾಂಚಿದಾರವಿರಲು
ದಾರ್ಯ ಕಳವಳವಡೆದು ಜಡೆಮುಕುಟ ಕುಂಡಲಾಪುರಿತ ಸುಗಂಧವೆಸೆವ
ಕಾರ್ಯ ಕಾರ್ಯಾಂತರವನರಿದು ಕರಣಂಗಳೊಳು
ತೂರ್ಯತೀತವನುಳಿದು ಮನರಾಗ ವೃತ್ತಿಯಲಿ
ಧೈರ್ಯದಿಂದಾಚರಿಸಿ ಮುಕ್ತಿಯಂ ಪಡೆವವರು ಶೌರ್ಯದಿಂದಿರುತಿರ್ದರು

(ಸಂ. ೫ ಪ. ೧೮, ೧೯)

ಪೂರ್ವದಲ್ಲಿ ಶ್ರೀಶೈಲ ಸಿಂಹಾಸನಕ್ಕೆ ಸೂರ್ಯ ಸಿಂಹಾಸನವೆಂದು ಹೆಸರಿದ್ದಂತೆ, ರಂಭಾಪುರೀ ಸಿಂಹಾಸನಕ್ಕೆ ಸೋಮ ಸಿಂಹಾಸನವೆಂದು ಹೆಸರು ಪ್ರಸಿದ್ಧವಾಗಿತ್ತೆಂದು ಈ ಮೇಲಿನ ಪದ್ಯಗಳಿಂದ ತಿಳಿಯುತ್ತದೆ. ರಂಭಾಪುರೀ ಪೀಠಕ್ಕೆ ಸೋಮ ಸಿಂಹಾಸನ ನಾಮವು ಈ ಕೆಳಗೆ ವಿವರಿಸಿದ ಕಾರಣಗಳಿಂದ ಬಂದಿರಲು ಸಂದೇಹವಿಲ್ಲ. ಶ್ರೀ ರೇವಣಸಿದ್ಧರು ಉದಯ ಹೊಂದಿದ ಶಿವಲಿಂಗದ ಹೆಸರು ಸೋಮೇಶ-ಸೋಮನಾಥ ಅಥವಾ ಸೋಮೇಶ್ವರ. ಇಲ್ಲಿ ಸೋಮ ಅಂದರೆ ಚಂದ್ರ. ರೇವಣ ಸಿದ್ಧರು ಆದಿಶಂಕರಾಚಾರ್ಯರಿಗೆ ಅನುಗ್ರಹಿಸಿದುದು ಚಂದ್ರಮೌಳೀಶ್ವರಲಿಂಗ. ಈ ಹೆಸರಿನಿಂದ ರಂಭಾಪುರೀ ಹಾಗೂ ಶೃಂಗೇರಿ ಪೀಠಗಳಲ್ಲಿ ಚಂದ್ರಮೌಳಿ ಶಿವಾಚಾರ್ಯ ಚಂದ್ರಶೇಖರ ಭಾರತಿಗಳೆಂದು ಆಚಾರ್ಯರು ಪ್ರಸಿದ್ಧಿ ಹೊಂದಿದರು. ಇವುಗಳಿಂದಾಗಿ ರಂಭಾಪುರೀ ಸಿಂಹಾಸನಕ್ಕೇನೆ ಸೋಮಸಿಂಹಾಸನವೆಂದು ಹೆಸರಿದ್ದಿತೆಂದು ಇಲ್ಲಿ ನಿರ್ಣಯಿಸಬಹುದಾಗಿದೆ. ರಂಭಾಪುರೀ ( ಸೋಮ ) ಸಿಂಹಾಸನಾಧಿಪತಿಗಳೂ ಶ್ರೀಶೈಲ ( ಸೂರ್ಯ ) ಸಿಂಹಾಸನಾಧಿಪತಿಗಳೂ ಮರುಳಸಿದ್ಧರಿಂದ ನೂತನವಾಗಿ ರಚಿತವಾದ ಉಜ್ಜಯಿನೀ ಸಿಂಹಾಸನದ ಆರೋಹಣದ ಪ್ರಾರಂಭೋತ್ಸವ ಸಮಯದಲ್ಲಿ ಬಂದು ಕೆಲವು ಕಾಲ ಅಲ್ಲಿಯೇ ವಾಸವಾಗಿದ್ದರೆಂದು ತಿಳಿಯುತ್ತದೆ. ಈ ಸಿಂಹಾಸನಾಧಿಪತಿಗಳ ಆಚರಣೆ ವೇಷ-ಭೂಷಣಗಳು ಅತಿ ಪ್ರಾಚೀನದಲ್ಲಿ ಹೇಗಿದ್ದವೆಂಬುದನ್ನು ಇಲ್ಲಿ ಸುಲಭವಾಗಿ ತಿಳಿಯಲನುಕೂಲವಾಗಿದೆ ಹೇಗೆಂದರೆ:— " ಚರಲಿಂಗ ಮೂರ್ತಿಗಳಾಗಿ ಕಾಮವನ್ನು ಕಡೆಗೊತ್ತಿರುವ ನಿಷ್ಠೆ, ನೇಮವಿಡಿದ ಆಚರಣೆ, ತ್ರಿಕಾಲ ಲಿಂಗಾರ್ಚನೆ, ಪ್ರೇಮಲ ಸ್ವಭಾವ, ಮಹಾ ಮಹಿಮತೆ, ತಾಮಸವಳಿದು ಸುಖನಿಂದಿರುವಿಕೆ ಇವೆಲ್ಲ ಅವರ ನಿತ್ಯಾಚರಣೆಗಳಾಗಿದ್ದವು. ದಂಡ-ಕಮಂಡಲು ಮೌಂಜೀದಾರ (ಯಜ್ಞೋಪವೀತ ಅರ್ಥಾತ್ ಶಿವಸೂತ್ರ) ಜಟಾ-ಮಕುಟ, ಕರ್ಣಕುಂಡಲ ಇವುಗಳಿಂದ ಅಲಂಕಾರವನ್ನು ಹೊಂದಿ ಧೈರ್ಯ ಶೌರ್ಯಗಳಿಂದ ಮೆರೆಯುತ್ತಿದ್ದರೂ ಕರಣಂಗಳಲ್ಲಿ ತೂರ್ಯತೀತಾವಸ್ಥೆಯನ್ನವಲಂಬಿಸಿ ಮುಕ್ತಿಗಾಗಿ ಯತ್ನಿಸುವ ಧೀರತೆಯ ವೇಷಭೂಷಣಗಳಿಂದ ಒಪ್ಪುತ್ತಿದ್ದರು." ಇಲ್ಲಿ ಹೇಳಿರುವ ಮೌಂಜೀದಾರದ ಪರಂಪರೆಯು ಶ್ರೀಕರ ಭಾಷ್ಯದಲ್ಲಿ ಏಕೋರಾಮರಿಗೂ, ಶಂಕರದಾಸಿಮಾರ್ಯ ಪುರಾಣದಲ್ಲಿ ಶಂಕರ ದಾಸಿಮಯ್ಯನಿಗೂ ಉಕ್ತನಾಗಿದೆ. ಇದು ಶಿವಾಗಮ ಸಿದ್ಧಾಂತ. ಅದನ್ನೇ ಈಗ ಶಿವದಾರವೆಂದು ಹೇಳುವರು.

## ದೇವಕವಿಯ ಐತಿಹಾಸಿಕ ದೋಷಗಳು

ಈ ಕಾವ್ಯವನ್ನು ದೇವನು ಐತಿಹಾಸಿಕವನ್ನಾಗಿಯೇ ಹೆಣೆಯುಬೇಕೆಂದು ಯತ್ನಿಸಿದ್ದರೆ ಅಸಾಧ್ಯವೇನೂ ಇದ್ದಿಲ್ಲ. ಆದರೆ ಅವನ ಭಾವನೆಯಲ್ಲಿ ಕಥಾ ವಸ್ತುವನ್ನು ಎಲ್ಲೆಡೆ ಎಲ್ಲಾ ಕಾಲಕ್ಕೂ ಹರಡುವದು ತುಂಬಿದೆ. ಈ ಕಾರಣ ದಿಂದ ಈ ಕಾವ್ಯದಲ್ಲಿ ಐತಿಹಾಸಿಕ ಮಾರ್ಗಗಳು ಪೂರ್ಣವಾಗಿ ಕೆಟ್ಟಿವೆ ಎಂದು ಹೇಳಲು ಅಭ್ಯಂತರವೇನೂ ಇಲ್ಲ. ಇಲ್ಲಿ ಕೆಲವನ್ನು ವಿವೇಚಿಸೋಣ! ಕವಿಯು ಮುರುಳಸಿದ್ಧನ ಉತ್ಪತ್ತಿಗೆ ಆದಿಯಾಗಿ ಶ್ರೀಶೈಲದ ಶಿಲಾದ ಮಹ ರ್ಷಿಗೆ ಕೈಹಾಕಿದ್ದಾನೆ. ಸ್ಕಂಧ ಪುರಾಣದ ಶ್ರೀಶೈಲಖಂಡದಲ್ಲಿ ಬರುವ ಶಿಲಾ ದನ ಕಾಲವು ಸುಮಾರು ಆರುಸಾವಿರ ವರ್ಷಗಳ ಪೂರ್ವಕ್ಕೆ ಹೋಗುವುದು. ಓರಂಗಲ್ಲಿನ ಗಣಪತಿಯು ರಾಜ್ಯದಲ್ಲಿ ಮರುಳಸಿದ್ಧನನ್ನು ತಿರುಗಿಸುತ್ತಾನೆ. ಈ ಗಣಪತಿಯು ಕಾಲಮಾನವೇ T. H. M. ಸದಾಶಿವಯ್ಯನವರು M. A. ಅವರ ಅಭಿಪ್ರಾಯದಂತೆ ಕ್ರಿ. ಶ. ೧೧೯೯ ಎಂದು ಸಾಹಿತ್ಯ ಸಮಿತಿ ಪತ್ರಿಕೆ ಸಂ. ೬ ಸಂ. ೧-೨ ರಲ್ಲಿಯ "ಅಜ್ಞಾತ ದೆಶೆಯಲ್ಲಿರುವ ಆಂಧ್ರ ಕವಿಗಳು" ಎಂಬ ಲೇಖದಿಂದ ತಿಳಿಯುತ್ತದೆ. ಆದರೆ ಕಲ್ಯಾಣದ ಚಾಲುಕ್ಯ ಅರಸ ಸೋಮೇಶ್ವರನ ಸೇವೆ ಸ್ವೀಕರಿಸಿದ ಮರುಳಸಿದ್ಧನ ಕಾಲಕ್ಕೆ ಇದು ಸರಿ ಹೋಗುವದಿಲ್ಲವಾದ್ದರಿಂದ ಕ್ರಿ. ಶ. ೧೦೭೦ ರ ಸುಮಾರಕ್ಕೇನೇ ಓರಂಗಲ್ಲಿ ನಲ್ಲಿ ಗಣಪತಿಯೆಂಬ ಅರಸನಿದ್ದನೆಂದು ಗ್ರಹಿಸುವದು ಸೂಕ್ತವಾಗಿದೆ. ಈ ವಿಧವಾದ ದೋಷಗಳನ್ನು ಮುಚ್ಚುವದಕ್ಕಾಗಿ ಕವಿಯು ಒಂದು ಕಡೆ ಮರುಳಸಿದ್ಧನು ಆರು ಸಾವಿರ ವರ್ಷ ಜೀವಿಸಿದ್ದನೆಂದು ಹೇಳಿಬಿಡುತ್ತಾನೆ. (ಸಂ. ೪ ಪ. ೪) ಪೂರ್ವದ ಕಾವ್ಯಗಳಲ್ಲಿ ಈ ವಿಧವಾದ ಐತಿಹಾಸಿಕ ಲೋಪ ಗಳು ಅನೇಕವಾಗಿರುವವು ವಾಲ್ಮೀಕಿಯ ರಾಮಾಯಣವೂ ಮಹಾಕವಿ ಕಾಳಿದಾಸನ ರಘುವಂಶವೂ ಸಹ ಇತಿಹಾಸ ಮಾರ್ಗದಲ್ಲಿ ಕುಂಟಿವೆ ಎಂಬುವು ಸಂಶೋಧಕರಿಗೆ ತಿಳಿಯದ ಅಂಶವೇ. ಅಷ್ಟೇ ಕಾರಣದಿಂದ ಕಥಾ ವಸ್ತು ವೆಲ್ಲವೂ ಅಸತ್ಯವೆಂದಾಗುವುದಿಲ್ಲ. ಆದರೆ ಐತಿಹಾಸಿಕ ವಿಮರ್ಶೆಯು ವಿಶಾಲಮತಿಗಳಿಗೆ ಇವುಗಳನ್ನು ಕಾಲಕ್ಕನುಕೂಲಿಸಿ ಸರಿಪಡಿಸಿಕೊಳ್ಳಲು ಸಾಧ್ಯವಿದೆ. ರೇಣುಕ-ರೇವಣಸಿದ್ಧ-ರೇವಣಾರಾಧ್ಯರೆಂಬ ಪ್ರತ್ಯೇಕ ಕಾಲ- ಮಾನಗಳಲ್ಲಿ ಮೆರೆದ ಮೂವರು ವ್ಯಕ್ತಿಗಳನ್ನು ಒಬ್ಬ ಕಥಾ ನಾಯಕ ನನ್ನಾಗಿ ರಚಿಸುವ ಕವಿಗಳಿಗೆ ಐತಿಹಾಸಿಕ ವಿಚಾರ ಜ್ಞಾನವು ಎಷ್ಟು ಬೇಕಾ ಗಿರಬೇಕೋ ಅದಕ್ಕೂ ಹೆಚ್ಚಾಗಿಯೇ ಈ ಕವಿಗೆ (ದೇವನಿಗೆ) ಇದ್ದಿರಬೇಕೆಂ ಬುದು ಇವನ ಕಾವ್ಯದಿಂದಲೇ ಒಡೆದು ಕಾಣುತ್ತಿದೆ. ಈ ವಿಚಾರದಲ್ಲಿ

ಕವಿಯು ಬುದ್ಧಿವಂತನಾಗಿದ್ದರೆ ಕಥಾವಸ್ತುವನ್ನು ಬೇರೆ ಬೇರೆ ಕಾಲಗಳಿಗೆ ವ್ಯತ್ಯಾಸವಾಗದಂತೆ ಕಟ್ಟಲು ಸಾಧ್ಯವಿದ್ದಿತು. ಆದುದರಿಂದ ಇಲ್ಲಿ ನಾವು ಗ್ರಹಿಸಬೇಕಾದ ವಿಷಯವೆಂದರೆ ಕವಿ ಹೇಳುವ ಮಾದಿಗ ಮರುಳಪ್ಪನಿಗಿಂತ ಮರುಳಸಿದ್ಧನೇ ಬೇರೆ ಎಂಬುದು. ಕವಿಯು ಕಚೋದ್ಯವಾದ ಕಲ್ಪನೆಯಿಂದ ಯಾವನೋ ಒಬ್ಬ ಹುಚ್ಚ ಮರುಳ ಸಿದ್ಧಪ್ಪನನ್ನು ಆದಿ ಮರುಳ ಸಿದ್ಧರೆಂದು ಭಾವಿಸಿಕೊಂಡಿರುವುದು ಸರ್ವಥಾ ಖಂಡನೀಯವಾಗಿದೆ. ವೀರಶೈವ ಮತ ಸ್ಥಾಪಕನೆನಿಸಿ ಶಾಸ್ತ್ರ ಸಿದ್ಧಾಂತಕ್ಕನುಸರಿಸಿ ದಂಡಖಂಡನೆಗಳಿಂದ ಜಗತ್ತನ್ನು ಪಾಲಿಸಿದ ಆದಿಮರುಳಸಿದ್ಧನು"...ಹದಿನೆಂಟು ಜಾತಿಯನೆಲ್ಲ ಒಡನುಣಿಸಿ...." (ಸ. ೩ ಪ. ೮೫) ಸಾಂಕರ್ಯವನ್ನು ಮಾಡಿರಬಹುದೇ "....ಭೂಸುರಸತಿಯರು ರಜಸ್ವಲೆಯಾಗಲೊಮ್ಮೆ ಸ್ನಾನ ಮಾಡುವಾಗ ಅವರ ಗುಪ್ತಾಂಗವು ಕನ್ನಡಿಯಂತೆ ಹೊಳೆಯುವುದೂ ಅದರಲ್ಲಿ ಮರುಳುಸಿದ್ಧನ ರೂಪು ಕಾಣುವುದೂ ಆದರಿಂದ ಸ್ತ್ರೀಯರು ಸಿಟ್ಟಿಗೇಳುವುದೂ" (ಸಂ. ೩ ಪ. ೮೬) ಈ ವಿಧವಾಗಿ ಸತಿಯರ ಪಾತಿವ್ರತ್ಯವನ್ನು ನಷ್ಟಮಾಡಲು ಯತ್ನಿಸಿರಬಹುದೇ? ಕೊಲ್ಲಾಪುರದ ಕರಟಾಸುರ ಕುವರಿ ಮಾಯೆಯ ಗರ್ವವನ್ನು ಭಂಗಿಸಹೋದ ಮರುಳ ಸಿದ್ಧನನ್ನು "... ತರಳೆಯರೊಂಬತ್ತು ಸಾಸಿರದ ಸತಿಯರು ವಿರಹಾನಲದಿಂದ ಬೆಂದವರಾಗಿ ಆತನ ಸುತ್ತುವರಿದು ತಬ್ಬಿಕೊಳ್ಳುವುದೂ ಉಟ್ಟ ಸೀರೆಗಳು ಬಿಚ್ಚಿ ಬಿದ್ದರೂ ನಾಚಿಕೊಳ್ಳದಿರುವುದೂ, ಬಟ್ಟ ಮೊಲೆಗುಂಕಾಬುಸವಿಡದೆ ಮುಗುಳ್ನಗೆಯಿಂದ ನಗುತ್ತ ಆತನ ಹತ್ತಿರಕ್ಕೆ ಬರುವುದೂ" (ಸ. ೪ ಪ. ೭೭, ೭೯) ಈ ಸನ್ನಿವೇಶದಿಂದ ಮರುಳಸಿದ್ಧನು ಸ್ತ್ರೀ ಜಗತ್ತನ್ನು ಮಾನಭಂಗ ಮಾಡಲು ಯತ್ನಿಸಿರಬಹುದೇ? ಇವೆಲ್ಲ ಹೀನ ಮನೋವೃತ್ತಿಯ ಕವಿಯ ಕುಚೋದ್ಯ ಕಲ್ಪನೆಗಳಲ್ಲದೆ ಬೇರೆಯಲ್ಲವೆಂದು ಸ್ಪಷ್ಟವಾಗುತ್ತದೆ. ಕವಿಯು ಬ್ರಾಹ್ಮಣ ದ್ವೇಷಿಯೂ ಹೀನ ಜಾತಿಯವನೂ ಆಗಿರುವುದರಿಂದ ಇಂತಹ ಲೌಕಿಕ ವಿರುದ್ಧಗಳಾದ ಅಂಶಗಳನ್ನು ಭಯವಿಲ್ಲದೆ ಹೆಣೆಯಲು ಯತ್ನಿಸಿರುವನೆನ್ನಲು ಸಂದೇಹವಿಲ್ಲ.

## ತೆಲಗು ಬಾಳಿನ ವಿಚಾರ

ಮರುಳಸಿದ್ಧನು ದೇಶ ಸಂಚಾರ ಮಾಡುವಾಗ ವೀರಶೈವ ಜನಾಂಗದಲ್ಲಿ ಬೇರೆ ಬೇರೆ ಬೆಡಗಿನವರಿದ್ದರೆಂಬುದನ್ನು ತಿಳಿಸಲು ಕವಿಯು ಸಾಹಸ ಮಾಡಿದ್ದಾನೆ.

"ಈ ಪರಿಯ ಸೋಣಬ ಚಕ್ರೇಶ್ವರಂ...." (ಸ. ೨ ಪ. ೯೪) ಆ ಕಾಲದ ವೀರಶೈವರ ಬೆಡಗಿನವರಾದ ಸೋಣಬರಲ್ಲಿ ಒಬ್ಬ ಅರಸನಿದ್ದುದು ಇದರಿಂದ ತಿಳಿಯುತ್ತದೆ.

"ಕುಂಚಟಗರಾಮ ಕುಡುವಕ್ಕಲಿಗ ಮುದ್ದಯ್ಯ
ಪಂಚಮರ ಪರಮಯ್ಯ ಪಡಿಹಾರಿ ಬಸವಣ್ಣ
ಕುಂಚಗಾರರ ಶಿವನು ಕರಿಕುಲದ ಮಹದೇವನಂಚಕಟ್ಟುವ ಶರ್ಮನು
ಪಂಚ ವರ್ಣವನಾಂತ ಪರಮ ಋಷಿಯಾನ ತನು
ವಂಚನೆಯ ಚೋರ ವಿದ್ಯದ ಮಲ್ಲ ಮಾದನುರೆ
ಹಂಚು ಮಾಡುವ ಚಕ್ರ ಕುಲಹೀನ ಚನ್ನ .... ...." (ಸ. ೩ ಪ. ೩೨)

ಇವರೆಲ್ಲರೂ ವೀರಶೈವರ ಒಳಪಂಗಡದವರು. ಕವಿಯ ಅಭಿಪ್ರಾಯ ದಂತೆ ಉಜ್ಜಯನಿಯಲ್ಲಿ ವಾಸವಾದ ಬಳಿಕ ಮರುಳ ಸಿದ್ಧನು ಒಮ್ಮೆ ತೆಲಗು ಬಾಳೆಂಬ ಊರಿಗೆ ಹೋಗಿ ಆ ಊರ ಒಕ್ಕಲಿಗ ಸಿದ್ಧಪ್ಪ ಎಂಬವನ ಸೇವೆಗೆ ಮೆಚ್ಚಿ ಆಶೀರ್ವದಿಸಿದಂತೆ ಮತ್ತು ಆ ಊರ ಜನರು ಮರುಳ ಸಿದ್ಧನನ್ನು ಹೊಗಳಿದಂತೆ ಈ ಹೊಗಳಿಕೆಯಿಂದ ಮೆಚ್ಚಿದವನಾಗಿ ಆ ಭಕ್ತ ಸಮೂಹಕ್ಕೆ ಸೇವೆ ಮಾಡಿಕೊಂಡು ತನ್ನ ಮಠದಲ್ಲಿರಲು ಆಜ್ಞೆ ಮಾಡಿದಂತೆ ತಿಳಿಯುತ್ತದೆ. (ಸಂ. ೫ ಪದ್ಯ ೧, ೩ ) ಈ ವಿಧವಾಗಿ ಮರುಳ ಸಿದ್ಧನನ್ನು ಆ ಕಾಲದಲ್ಲಿ ತಮ್ಮ ಸೇವೆಯಿಂದ ಮೆಚ್ಚಿಸಿ ಆಶೀರ್ವಾದ ಪಡೆದ ಒಕ್ಕಲಿಗರಾರು ? ಕವಿಯು ಇಲ್ಲಿ ಬೆಡಗನ್ನು ಹೇಳದೆ ಕೇವಲ " ಒಕ್ಕಲಿಗ ಸಿದ್ಧ " ಎಂದು ಸಾಗಿದ್ದಾನೆ. ಬೇಸಾಯ ಮಾಡುವವರೆಲ್ಲರೂ ಒಕ್ಕಲಿಗರೇ ಆಗಿದ್ದಾರೆ. ವಿಶಾಲವಾದ ಮಠದ ಭೂಮಿಯನ್ನು ಉಳುವುದಕ್ಕೆ ಒಕ್ಕಲಿಗರು ಹೆಚ್ಚಾಗಿ ಬೇಕಾಗುವುದ ರಿಂದ ಅವರನ್ನು ಮಠದಲ್ಲಿ ತಂದಿಟ್ಟುಕೊಂಡಿರಬೇಕು. ಈ ಒಕ್ಕಲಿಗರಿಗೆ ಮುಖ್ಯವಾಗಿ ಬೇಕಾಗುವ " ಮುರು ಮುಪ್ರೆ " ( ಕೂರಿಗೆ ಎಟ್ಟಲ ) ಮತ್ತು ಬೀಜವನ್ನು ಬಿತ್ತಲಿಕ್ಕೆ ಬೇಕಾಗುವ ವಸ್ತುವನ್ನೂ ಸಹ ಆಶೀರ್ವದಿಸಿದಂತೆ ಈ ಕವಿಯು ಹೇಳುತ್ತಾನೆ. ಈ ರೈತರು ತಮಗೆ ಬೇಕಾದ ವಸ್ತುವು ದೊರೆತ ಕಾರಣ ಸಂತುಷ್ಟರಾಗಿ " ಚಾಂಗುಭಳಿರೇ " ಎಂದು ಮರುಳ ಸಿದ್ಧನನ್ನು ಹೊಗಳುವದು ಸಹಜವಾಗಿದೆ.

ಮರುಳಸಿದ್ಧನನ್ನು ಬಾಲ್ಯದಲ್ಲಿ ಜೋಪಾನ ಮಾಡಿದ ಕಗ್ಗಲ್ಲ ಬಾಚಿ ಗೌಡನೂ ಅವನ ವಂಶದವರೆಂದು ಹೇಳುವ ಕಗ್ಗಲ್ಲವರೆಂಬವರೂ ಸಾದಬೆಡಗಿ ನವರೆಂಬ ಪ್ರತೀತಿಯಿದೆ. ಆದರೆ ಕಗ್ಗಲ್ಲಗೌಡನು ಕುಡುಒಕ್ಕಲಿಗನಾಗಿದ್ದ

ನೆಂದು ಮಹದೇವಿಯಕ್ಕನು ತನ್ನ ವಚನದಲ್ಲಿ ಹೇಳಿದ್ದಾಳೆ. "ಹೂಲಿಯ ನಂದೀಶ ಕವಿ "ಯು ತನ್ನ "ಮರುಳಾರಾಧ್ಯ ವಿಜಯ ಕಾವ್ಯ "ದಲ್ಲಿ ಕ್ರಿ. ಶ. ೯೦೩ ರಲ್ಲಿ ಜೈನಅರಸರ ಉಪಟಳದಿಂದ ಮರುಳಸಿದ್ಧರು ಕಾಳಿಕಾ ಉಜ್ಜಯಿನಿಯ ತಮ್ಮ ಪೀಠವನ್ನು ರೇವಣಸಿದ್ಧರ ಅಪ್ಪಣೆಯ ಮೇರೆಗೆ ದಕ್ಷಿಣ ದೇಶಕ್ಕೆ ಸ್ಥಲಾಂತರ ಮಾಡಿ ಹರಪುರಿಯ ಬಳಿಯಲ್ಲಿರುವ ಉಜ್ಜಯಿನಿಯನ್ನು ಸ್ಥಾಪಿಸಿದ ಹಾಗೂ, ಜೈನರಲ್ಲಿಯ ಒಂದು ಭೇದವಾದ "ಚತುರ್ಥರು" ಎಂಬ ವರ್ಗವನ್ನು ಶಿವಲಿಂಗ ಧಾರಣ ದೀಕ್ಷಾ ವಿಧಾನದಿಂದ ವೀರಶೈವ ಮತಕ್ಕೆ ಸೇರಿಸಿ ಅವರಿಗೆ "ಸೋದರರು" ಎಂದು ಹೆಸರಿಟ್ಟು ಅವರ ಸಹಾಯ ಸೇವೆಗಳಿಂದ ಕರ್ನಾಟಕದ ಉಜ್ಜಯಿನಿಯ ಸಂಪತ್ತನ್ನು ಅಭಿವೃದ್ಧಿಗೊಳಿಸಿದ ಹಾಗೂ ಹೇಳಿದ್ದಾನೆ. (ಮರುಳಾರಾಧ್ಯ ವಿಜಯ. ಸಂಧಿ : ೧೬ ಪದ್ಯ ೨೧ ರಿಂದ ೨೫ ರ ವರೆಗೆ)

"ಜೈನ ಮತದಲ್ಲಿಹ ಚತುರ್ಥರು |
ಲೀನರಾಗುತ ವೀರಶೈವದ |
ಧೀನದಿಂ ಪಂಚಮರ ಸೋದರರೆಂಬ ಪೆಸ್ರ್ಮೆಯಲಿ ||
ಏನು ಸಂಶಯ ತಾರದಲೆ ಸಮ |
ಯಾನು ಸಾರದೆ ಶಿವಮತದೆ ಚೆಲೆ |
ದಾನುಷಂಗಿಕವಾದ ಶಿವಧರ್ಮದಲಿ ಸೇರಿಸಿದರು || ೨೪ ||

ಮರುಳಸಿದ್ಧನ ಸಾಂಪ್ರದಾಯದ |
ನರಿದು ಕುಲದೇವತೆಯ ತೆರದಿಂ |
ಪರಮ ಭಕ್ತಿಯನಾಂತು ಪೂಜಿಸಿ ಭಕ್ತಿಯಿಂದವನ ||
ಕರುಣ ಪಡೆಯುತ ನೇಮದಿಂದಲಿ |
ಹರಮತವ ಸಾಧಿಸುತ ಸೋದರ |
ತೆರನೆವಡೆಯುತು ಸೋದರೆಂಬಭಿಧಾನ ಪೊಂದಿದರು || ೨೫ ||

(ಮರುಳಾರಾಧ್ಯ ವಿಜಯ. ಸಂ. ೧೬)

ಮರುಳ ಸಿದ್ಧನ ಪ್ರಧಾನ ಶಿಷ್ಯರಾದ ಈ ಸೋದರರೇ ನಾಮ ಸೈತ್ಯಾಸ ಅಥವಾ ಮೂಲ ಶಬ್ದದ ಅಪಭ್ರಂಶದಿಂದ ಉಂಟಾದ ಸಾದರರೆಂಬ ನಾಮ ಭಾಜನರಾದವರೆಂದು ನಂದೀಶ ಕವಿಯ ಅಭಿಪ್ರಾಯದಿಂದ ನಾವಿಲ್ಲಿ ತಿಳಿಯಬಹುದಾಗಿದೆ. ಒಂದು ವೇಳೆ ಸೋದರ ಶಬ್ದದ ಅಪಭ್ರಂಶದಿಂದ ಸಾದರ ಶಬ್ದವಾಗಿದ್ದರೂ "ಆದರೇಣ ಸಹಿತಃ ಸಾದರಃ" (ಸನ್ಮಾನವುಳ್ಳವನು)

ಎಂಬ ಉತ್ತಮವಾದ ಅರ್ಥವೇ ಸಾದರ ಶಬ್ದದಲ್ಲಿ ಅಡಕವಾಗಿದೆ. ಮೇಲಿನ ೩೪ ನೆಯ ಪದ್ಯದಲ್ಲಿ ಜೈನರಲ್ಲಿಯ ಚತುರ್ಥರು ಶಿವಲಿಂಗದೀಕ್ಷಿತರಾಗಿ ಪಂಚಮರಿಗೆ ಸೋದರರೆಂಬ ಹೆಮ್ಮೆಯ ಹೆಸರಿನಿಂದ ವೀರಶೈವದಲ್ಲಿ ಸೇರಿದಂತೆ ಉಕ್ತವಾಗಿರುವುದರಿಂದ ಪಂಚಮರು ಅಥವಾ ಪಂಚಮ ಸಾಲಿಯುವರು ಪೂರ್ವದಲ್ಲಿಯೇ ಇದ್ದಂತೆ ತಿಳಿಯುತ್ತದೆ. ಶೃಂಗೇರಿ ಪೀಠದ ಶಂಕರಾಚಾರ್ಯರಿಗಿಂತಲೂ ಪ್ರಾಚೀನ ಕಾಲದವರಾದ ಗೋಕರ್ಣ ವಾಸಿಗಳಾದ ಭಾಷ್ಯಕಾರ ನೀಲಕಂಠ ಶಿವಾಚಾರ್ಯರು ತಮ್ಮ ಕಾಲದಲ್ಲಿ ಜೈನರಲ್ಲಿಯ ಒಂದು ಭಾಗವಾದ "ಪಂಚಮ" ಎಂಬ ವರ್ಗವನ್ನು ಶಿವಾಗಮ ಸಾಂಪ್ರದಾಯಿಕವಾಗಿ ಪಂಚಮರಲ್ಲಿ ಸೇರ್ಪಡೆ ಮಾಡಿ ವೀರಶೈವ ಮತವನ್ನು ಬೆಳೆಯಿಸಿದಂತೆ ತಾನೂ ಬೆಳೆಸಿದೆನೆಂಬ ಮಹಿಮೆಯನ್ನು ರೇವಣ ಸಿದ್ಧರು ಮರುಳಸಿದ್ಧರಿಗೆ ವಿವರಿಸಿದ್ದಾರೆ. ಆ ವಿಷಯವನ್ನು ಹೂಲಿಯ ನಂದೀಶ ಕವಿಯು "ಮರುಳಾರಾಧ್ಯ ವಿಜಯ"ದ ೧೩ ನೆಯ ಸಂಧಿ ೩೩ ನೆಯ ಪದ್ಯದಲ್ಲಿ ವಿವರಿಸಿದ್ದಾನೆ. ಶಿವಾಗಮ ಸಾಂಪ್ರದಾಯಕವಾದ ವೀರಶೈವ ಮತಾಂಬುಧಿಯಲ್ಲಿ ಹೀಗೆ ರೇವಣ ಸಿದ್ಧ, ಮರುಳ ಸಿದ್ಧ ಮೊಲಾದ ಆಚಾರ್ಯರಿಂದಲೂ ೧೨ ನೆಯ ಶತಮಾನದಲ್ಲಿ ಸುಪ್ರಸಿದ್ಧರಾದ ಬಸವಾದಿ ಶಿವಶರಣರಿಂದಲೂ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಮೊದಲಾದ ವರ್ಣದವರೂ ಜೈನ ಮೊದಲಾದ ಸ್ವತಂತ್ರ ಪಂಗಡದವರೂ ಧಾರಾ ಪ್ರವಾಹದಂತೆ ಸೇರಿಸಲ್ಪಟ್ಟರೆಂಬುದು ಇತಿಹಾಸ ಪ್ರಸಿದ್ಧವಾಗಿದೆ. ಇಲ್ಲಿ ಸೋದರರು ಅಥವಾ ಸಾದರರೆಂಬ ಒಂದು ಒಳಪಂಗಡದ ಮೂಲ ಕರ್ತೃವು ಮರುಳಸಿದ್ಧನೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. "ಮರುಳಾರಾಧ್ಯ ವಿಜಯ" ಕಾವ್ಯದಲ್ಲಿಯ ಮೂಲಮರುಳಸಿದ್ಧನ ಪ್ರಧಾನವಾದ ಸಂದೇಶವೆಂದರೆ "ಪಂಚಮ ಸಾಲಿಯುವರೊಡನೆ ಸೋದರರು ಅರ್ಥಾತ್ ಸಾದರು ಸೋದರ ಭಾವನೆಯಿಂದ ವರ್ತಿಸಬೇಕು" ಎಂಬುದು. ಇದು ಎಂಥಹ ಬೆಲೆಯುಳ್ಳ ಸಂದೇಶ! ಪ್ರಸ್ತುತ ಸಮಯದಲ್ಲಿ ಅಜ್ಞಾನದಿಂದ ತಿಕ್ಕಾಡುತ್ತಿರುವ ಒಳಪಂಗಡಗಳ ಕಲಹ ನಿವಾರಣೆಗೆ ಈ ಮಹಾತ್ಮರ ಸಂದೇಶವು ಸಹಾಯವಾಗಬಹುದೆಂದು ಭಾವಿಸೋಣ!

ಮರುಳಸಿದ್ಧ ಕಾವ್ಯದಲ್ಲಿ ಬಂದಿರುವ ಕಗ್ಗಲ್ಲಗೌಡನು ಮಹಾದೇವಿಯಕ್ಕನ ವಚನದಲ್ಲಿ ಕುಡುವಕ್ಕಲಿಗನಾದ ದೇವನ ಕೈಗೆ ಸಿಕ್ಕು ಮರುಳಸಿದ್ಧನು ಮಾದಿಗನಾಗಿದ್ದಾನೆ. ಈ ಮಾದಿಗ ಮರುಳಸಿದ್ಧನು ದೇವನ ಹುಚ್ಚು ಕಲ್ಪನೆಯಂತೆ ಉಜ್ಜಯಿನಿಯ ಮೂಲ ಮಠ ಸ್ಥಾಪಕನಾದರೆ ಆ ಮಠದಲ್ಲಿ ಸೇವಾ ವೃತ್ತಿಯಿಂದಿರಲು ಬಂದಿದ್ದ ತೆಲಗು ಬಾಳಿನ ಒಕ್ಕಲಿಗ ಸಿದ್ಧಪ್ಪ

ಮೊದಲಾದವರು ಮಾದಿಗ ಚೆಡಗಿನ ಒಕ್ಕಲಿಗರಾಗಿದ್ದರೆಂದು ಹೇಳಬೇಕಾ ಯಿತಲ್ಲವೇ ? ಅಸಂಗತ ! ಮಾದಿಗ ಮರುಳ ಸಿದ್ಧನಾರೆಂಬುದೂ, ಇವನಿಗೂ ಉಜ್ಜಯಿನಿ ಪೀಠಕ್ಕೂ ಯಾವ ಸಂಬಂಧವಿಲ್ಲವೆಂಬುದೂ " ಮರುಳಾರಾಧ್ಯ ವಿಜಯ " ಕಾವ್ಯ (ಸಂ. ೧೮ ಪದ್ಯ ೩೩, ೩೪) ಇವುಗಳಿಂದ ಸ್ಪಷ್ಟವಾಗಿ ತಿಳಿ ಯುತ್ತದೆ.

## ಮರುಳಸಿದ್ಧರ ಬಗೆಗೆ ದೇವ ಮತ್ತು ನಾಗಭೂಷಣರ ದಾರಿಯು ಬೇರೆ

ದೇವ ಕವಿಯು ಬರೆದಿರುವ "ಮರುಳಸಿದ್ಧ ಕಾವ್ಯಕ್ಕೂ ರಾಮಗಿರಿಯ ಕೆಂಚದೇವರ ಮಗನಾದ ಕವಿ ನಾಗಭೂಷಣನು ಬರೆದಿರುವ " ಮರುಳ ಸಿದ್ಧೇಶ್ವರ ಸಾಂಗತ್ಯ"ಕ್ಕೂ ಬಹಳ ವ್ಯತ್ಯಾಸವಿದೆ. ಹೀಗಿದ್ದರೂ ಮರುಳಸಿದ್ಧ ಕಾವ್ಯದ ಸಂಪಾದಕರಾದ ಶ್ರೀ ಅ. ನ. ಕೃಷ್ಣರಾಯರು ಪೀಠಿಕಾ ಪುಟ ೨೬ ರಲ್ಲಿ " ದೇವನನ್ನೇ ಅನುಸರಿಸಿರುವ ಮರುಳ ಸಿದ್ಧೇಶ್ವರ ಸಾಂಗತ್ಯಕಾರನಾದ ನಾಗಭೂಷಣನೂ " ಎಂದು ಹೇಳಿದ್ದಾರೆ. ನಾಗಭೂಷಣನು ದೇವನನ್ನಾಗಲಿ ಆತನ ಕಾವ್ಯವನ್ನಾಗಲಿ ಅನುಸರಿಸಿದ್ದರೆ ಆತನ ಹೆಸರನ್ನು ಹೇಳಲೀ ಬಹು ದಿತ್ತು; ಅಲ್ಲದೆ ಸಾಂಗತ್ಯದಲ್ಲಿಯ ವಿಷಯಗಳನ್ನು ಅದಕ್ಕನುಕೂಲವಾಗಿಯೇ ಹೆಣೆಯಬಹುದಿತ್ತು; ಹಾಗೆ ಮಾಡಿಲ್ಲವಾಗಿ ನಾಗಭೂಷಣನು ದೇವನ ಯಾವ ಪರಿಚಯವಿಲ್ಲದವನಾಗಿಯೇ ಸಾಂಗತ್ಯವನ್ನು ಬರೆದಿರಬೇಕೆಂಬುದನ್ನು ನಿರ್ಧ ರಿಸುವದಕ್ಕಾಗಿ ಆತನ ಸಾಂಗತ್ಯದ ಸಾರವನ್ನೇ ಇಲ್ಲಿ ಉದಹರಿಸುವೆವು.

(೧) ಅರ್ಧನಾರೀಶ್ವರನಾದ " ಹರನರ್ಧಾಂಗದಿ ಗಿರಿಸುತೆ ಇರುತಿರೆ " (ಸಂ ೧. ಪ ೬೫) ಕೈಲಾಸದಲ್ಲಿ ಮಹಾಸಭೆ ಸೇರುವುದು. ಭೃಂಗೀಶ್ವರನು ನಾಟ್ಯಮಾಡುತ್ತ ಶಿವನ ಒಂದೇ ಪಕ್ಕದಲ್ಲಿ ನಂದಿಸಿ ದೇವಿಯನ್ನು ತಿರಸ್ಕರಿಸು ವನು; ದೇವಿಗೆ ಕೋಪ ಬರುವುದು. ಶಿವಪಾರ್ವತಿಯರ ಸಂವಾದವಾಗಿ ತನ್ನ ರೂಪನ್ನು ಗೆಲ್ಲ... ...ನಾಗುವಂತೆ ದೇವಿಯು ಶಿವನಿಗೆ ನುಡಿಯುವಳು, ತನ್ನ ಶಕ್ತಿರೂಪವನ್ನು ಕೊಲ್ಲಾಪೂರಕ್ಕೆ ಕಳಿಸುವಳು. ಭೃಂಗೀಶ್ವರನು "ನಿನ್ನ ತದ್ರೂಪವನಾಯಿಯನು ದಾರುಕ ಸಂಹರಿಸಲಿ" ( ಸಂ ೧. ಪು ೧೧೧ ) ಎಂದು ಶಾಪಕೊಡುವನು. ದೇವಿಯು ನಿಶ್ಶಾಪವನ್ನು ಕೇಳುವಳು. "ಮರ್ತ್ಯದಿ ಮರುಳಸಿದ್ಧೇಶ ಸಂಹರಿಸಲು ಮತ್ತೆ ಸ್ತೋತ್ರವ ಮಾಡಿದರೆ ಕರ್ತೃವಿ ನೆಡೆಗೆ ಕಳುಹುವೆ' ( ಸ. ೧ ಪ. ೧೧೩ ) ಎಂದು ಭೃಂಗಿಯು ನಿಶ್ಶಾಪಕೊಡು ವನು. ಅತ್ತ ಭೂಲೋಕದಲ್ಲಿ ಕೊಲ್ಲಾಪುರದಲ್ಲಿ ಶಕ್ತನಾದ ಗೋರಕ್ಷನು ತಪಸ್ಸು ಮಾಡುತ್ತಿರುವನು. ಈ ಶಕ್ತಿಯ ರೂಪು ಅವನೆದುರಿಗೆ ಪ್ರತ್ಯಕ್ಷ

ವಾಗುವುದು. ಅವನು ಸಂತೋಷಿಸುವನು. ಬಂದಕಾರಣವನ್ನು ಕೇಳುವನು. ಪರಶಿವನೊಡನೆ ಪಂಥಮಾಡಿ ಬಂದೆನು; ನನಗೊಂದು ಪುರವನಿರ್ಮಿಸಿ ಕೊಡೆಂದು ಆ ಶಕ್ತಿ ರೂಪು ಹೇಳುವುದು. ಆಗ ಅಲ್ಲಿ ಅವಳಿಗೊಂದು ಅರಮನೆಯನ್ನೇ ರಚಿಸಿ ಈ ಗೋರಕ್ಷನ ಸಾಂಪ್ರದಾಯಿಕರೆಲ್ಲರೂ ಕಾವಲು ಮಾಡುವರು. ಶಕ್ತಿರೂಪು ಅಲ್ಲಿ ಮಾಯೆಯೆಂಬ ಹೆಸರಿನಿಂದ ವಾಸಿಸುವುದು.

ಮರುಳಸಿದ್ಧಕಾವ್ಯದಲ್ಲಿ ಮೂಲಶಕ್ತಿಯೇ ಮಾಯೆಯಾಗುತ್ತಾಳೆ, ಶಿವನೇ ರೇವಣಸಿದ್ಧನಾಗುತ್ತಾನೆ, ಭೃಂಗಿಯೇ ಮರುಳಸಿದ್ಧನಾಗುತ್ತಾನೆ. ಈ ಸಾಂಗತ್ಯದಲ್ಲಿ ಪಾರ್ವತೀ ಪರಮೇಶ್ವರರು ಕೈಲಾಸದಲ್ಲಿಯೇ ಉಳಿಯುತ್ತಾರೆ, ಶಕ್ತಿಯರೂಪು ಮಾಯೆಯಾಗುತ್ತಾಳೆ, ಕೈಲಾಸದ ದಾರುಕನೇ ಮರುಳಸಿದ್ಧನಾಗುತ್ತಾನೆ, ರೇಣುಕನೇ ರೇವಣಸಿದ್ಧನಾಗುತ್ತಾನೆ. ಈ ಸಾಂಗತ್ಯದಲ್ಲಿ ಮಾಯೆಗೆ ತಂದೆ ತಾಯಿಗಳಿಲ್ಲ. ಮರುಳಸಿದ್ಧ ಕಾವ್ಯದಲ್ಲಿ ಶಕ್ತಿಗೆ ಶಿವನು ಶಾಪಕೊಟ್ಟರೆ ಸಾಂಗತ್ಯದಲ್ಲಿ ಭೃಂಗಿಯು ಶಾಪಕೊಡುತ್ತಾನೆ.

ಆ ಮುಂದೆ ಕೊಲ್ಲಾಪುರದಲ್ಲಿ ಮಾಯೆಯು "ಶಿವರೂಪ ಕಂಡರೆ ಹಿಡಿತರಿಸಿ ಕೋಪಿಸಿಕೊಲ್ಲಿಸಿ" (ಸಂ. ಪ. ೧೨೩) ದಬ್ಬಾಳಿಕೆಯನ್ನು ಮಾಡುವಳು. ಈ ವಾರ್ತೆ ಕೈಲಾಸಕ್ಕೆ ಮುಟ್ಟುವುದು. ಅಲ್ಲಿರುವ ರೇಣುಕನು ಮಾಯೆಯ ಹಲ್ಲು ಕೀಳುವ ಶಿಷ್ಯನನ್ನು ಪೃಥ್ವಿಗೆ ಕಳುಹುವಂತೆ ಶಿವನನ್ನು ಬೇಡುವನು. ಅಲ್ಲಿಂದ ಶ್ರೀಗಿರಿ (ಶ್ರೀಶೈಲ)ಗೆ ಬಂದು ಅಲ್ಲಿರುವ ಕೋಡುಗಲ್ಲಿನ ಮಧ್ಯದಲ್ಲಿ ಕುಳಿತು ತಪಸ್ಸನ್ನು ಮಾಡಲು ಪ್ರಾರಂಭಿಸುವನು.

ಲೋಕ ಸಂಚಾರಿ ನಾರದನು ಕೊರವಂಜಿ ವೇಷದಲ್ಲಿ ಕೊಲ್ಲಾಪುರಕ್ಕೆ ಹೋಗಿ ಸಿದ್ಧನೊಬ್ಬನು ಭಿಕ್ಷೆಯ ನೆವದಿಂದ ಇಲ್ಲಿಗೆ ಬಂದು ನಿಮ್ಮ ದೈತ್ಯೆಯ ಮೂಗು ಕೊಯ್ಯುವನು (ಪ ೧೪೭) ಎಂದು ಭವಿಷ್ಯವನ್ನು ಹಾಡುವನು. ಇದರಿಂದ ಮಾಯೆಯು ವರ್ಗದವರಿಗೆ ಸಿಟ್ಟುಬಂದು ಕೊರವಂಜಿಯನ್ನು ಊರುಬಿಟ್ಟು ಓಡಿಸುವರು. ಅಲ್ಲಿಂದ ಆ ವೇಷವನ್ನು ಬಿಟ್ಟು ನಾರದನು ನೇರವಾಗಿ ಕೈಲಾಸಕ್ಕೆ ಬಂದು ಈಶ್ವರನನ್ನು ಪ್ರಾರ್ಥಿಸುವನು:—ದೇವಾ! "ಕೃತಯುಗದಲ್ಲಿ ಉರುತರದಾಚಾರ್ಯರಾಗಿ ಹರಿ ಅಜಸುರ ಮನುಮುನಿಗಳಿಗೆ ಉಪದೇಶವನ್ನಿತ್ತವನು ನೀನು. ತ್ರೇತಾಯುಗದಲ್ಲಿ ಅಕ್ಷರ, ತ್ರ್ಯಕ್ಷರ, ಪಂಚಾಕ್ಷರ, ಷಡಕ್ಷರರೆಂಬ ಗಣರಾಗಿ ಜನರಘವ ಪರಿದವರ ಮೂರ್ತಿ ನೀನು; ದ್ವಾಪರಯುಗದಲ್ಲಿ ರೇಣುಕ—ದಾರುಕ—ಶಂಖಕರ್ಣ—ಗೋಕರ್ಣರೆಂಬ ಗಣರಾಗಿ ನರರಿಗೆ ದೀಕ್ಷೆಯನ್ನಿತ್ತವನು ನೀನು. ಆದರೆ ಈಗ ಕಲಿಯುಗ

ಪ್ರಾರಂಭವಾಗಿ ಅರಿಷಡ್ವರ್ಗ—ಅಷ್ಟಮದ—ಸಪ್ತವ್ಯಾಸನ—ಪಂಚಮಹಾ ಪಾತಕಗಳು ಆವರಿಸಿ ಜನರು ಪುಣ್ಯದ ನೆಲೆಯನ್ನೇ ಕಾಣದವರಾಗಿರುವರು. ಇವರನ್ನು ಕಾಪಾಡಲು ಮರ್ತ್ಯಲೋಕಕ್ಕೆ ಆಚಾರ್ಯರನ್ನು ಕಳುಹಿಸುವ ಕೃಪೆಮಾಡು." (ಪ. ೧೫೨. ೧೧೪೭)

ಮುನಿಪ ನಾರದನ ಮಾತಿಗೆ ಶಿವನು ಮೆಚ್ಚುವನು, ಆಗಲೇ ರೇವಣ, ಮರುಳ, ಏಕೋರಾಮ, ಪಂಡಿತರನ್ನು ಬಳಿಗೆ ಕರೆಯುವನು; "ಭರದಿಂದ ಮರ್ತ್ಯಕ್ಕೆ ಪೋಗಿ ನರರ ದುರ್ಲಿಖಿತವ ಹರುಷವಿ ತೊಡೆದು ಧರೆಯುನು ಪರಮಪಾವನ ಪುಣ್ಯಕ್ಷೇತ್ರವ ಮಾಡಿರೆಂದು (ಪ.೧೫೯) ಅಪ್ಪಣೆಮಾಡುವನು. ಈ ವಿಷಯವನ್ನು ಉಮೆಗೆ ತಿಳುಹಿಸೆಂದು ನಾರದನಿಗೆ ಶಿವನು ಹೇಳುವ ದೊಂದೇ ತಡ, ನಾರದನು ಉತ್ತರರೂಪವಾಗಿ "ಕೆಟ್ಟಿತು ಕಾರ್ಯ ಅದರ ಬಟ್ಟೆ ನಿಮಗೆ ಬೇಡ ಹುಟ್ಟಿತು ರಾಕ್ಷಸ ಪಡೆಯು" ಎಂದು ಮುಂತಾಗಿ ಮಾಯಾ ವಿಚಾರನನ್ನರುಹುವನು; ಈಶ್ವರನು ಮತ್ತೆ ಕುಪಿತನಾಗಿ ತನ್ನ ಎಡಗಡೆ ನಿಂತಿದ್ದ ರೇಣುಕ ದಾರುಕರನ್ನು ಕುರಿತು "ಮರ್ತ್ಯಕ್ಕೆ ಹೋಗಿ ಮರುಳ-ರೇವಣ್ಣ ಎಂಬ ಉತ್ತಮ ನಾಮವಿ ನೀವು ಇತ್ತು ನರರಿಗೆ ದೀಕ್ಷೆಯ ಮಾಡಿಯು ನೊಕ್ಕನು ತತ್ವಾರ ತರೆಯಿರೆಂದು, (ಪ. ೧೬೭) ಮತ್ತೊಮ್ಮೆ ಅಪ್ಪಣೆಮಾಡಿ ಕಳುಹುವನು, ಈರ್ವರೂ ಭೂಲೋಕಕ್ಕೆ ಆಗಮಿಸುವರು.

(೨) ಈ ಹಿಂದೆ ಹೇಳಿದಂತೆ ರೇವಣಸಿದ್ಧರು ಶ್ರೀ ಗಿರಿಯ (ಶ್ರೀಶೈಲದ) ಕೋಡುಗಲ್ಲಿನ ಮಧ್ಯದಲ್ಲಿ ತಪಸ್ಸಿಗೆ ಕೂಡ್ರುವರು, ಮರುಳಸಿದ್ಧನು ನೇರವಾಗಿ ಕೇದಾರ, ಕಾಶಿ, ಜಂಬೂದ್ವೀಪ, ಕುಂಭಕೋಣ, ಕೊಡಗು, ಕೊಂಕಣ, ಮಲೆಯಾಳ ಮೊದಲಾದ ಐವತ್ತಾರು ದೇಶಗಳನ್ನು ಸಂಚರಿಸುತ್ತ ಕಾವೇರಿ ದೇಶದ ಮಲ್ಲಿಪುಲ್ಲೆಂಬ ಗ್ರಾಮಕ್ಕೂ, ಅಲ್ಲಿಂದ ಬೇತೂರಿಗೂ ಬಂದು ಕೆಲವು ಲೀಲೆಗಳನ್ನು ಮಾಡುವನು. ಅಲ್ಲಿಂದ ಬಾತಿಗೂ ಉಚ್ಚಂಗಿ ದುರ್ಗಕ್ಕೂ ಹೋಗಿ ಕೆಲವು ಲೀಲೆಗಳನ್ನು ಮಾಡುವನು. ಅಲ್ಲಿಂದ ಕೇತಾಪುರಿ ಅಥವಾ ಕೇತನಹಳ್ಳಿಗೆ ಬರುವನು. ಆ ಊರಲ್ಲಿ ಮುಕ್ತಾಯಕ್ಕ ಎಂಬವಳ ಮನೆಗೆ ಭಿಕ್ಷೆಗೆ ಹೋಗಿ ನಿನಗೆ ಸಂತಾನ ಉಂಟೇ? ಎಂದು ಕೇಳುವನು. (ಸ. ೨ ಪ. ೩೪) ಅವಳಿಗೆ ಮಕ್ಕಳಿರುವದಿಲ್ಲ, ಆಗ ಅವಳು ಆಡುವ "ಇಷ್ಟಲಿಂಗದ ಪೂಜೆ, ಏಕಮನದ ಭಕ್ತಿ" (ಪ. ೩೫, ಮುಂತಾದ ವಾಕ್ಯಗಳಿಂದ ಅವಳು ವೀರಶೈವಳೆಂದು ದೃಢಪಡುವದು. ಮರುಳಸಿದ್ಧನು ಮತ್ತೆಯೂ ಅವಳನ್ನು "ಇಲ್ಲಿ ಈ ಪುರದೊಳಗೇಕಮನದ ಭಕ್ತರೆಲ್ಲುಂಟು ತಾಯೆ ಹೇಳೆ"ನಲು, "ಬಲ್ಲಿದ ಶರಣ ಮಾರಯ್ಯ ಸೊನ್ನಲ ದೇವಿ ಕಲ್ಯಾಣದಿಂದ ಬಂದಿಹರು"

(ಪ. ೩೬) ಎಂದು ಉತ್ತರಕೊಡುವಳು. ಅಲ್ಲಿಂದ ಸೆಟ್ಟಿಗೆ ಮುರುಳಸಿದ್ಧನು ಸೊನ್ನಲ ದೇವಿಯ ಮನೆಗೆ ಹೋಗುವನು, ಭಿಕ್ಷೆಯನ್ನು ಕೇಳುವನು. ಭಕ್ತಿವಂತೆಯಾದ ಸೊನ್ನಲದೇವಿಯು ಮುರುಳಸಿದ್ಧನ ಪೂಜೆಮಾಡಿಸಿ ಊಟಕ್ಕೆ ನೀಡಲು ಸಿದ್ಧಳಾಗುವಳು. ಆಗ ಮುರುಳಸಿದ್ಧನು ತಾಯೆ ನಿನಗೆ ಮಕ್ಕಳುಂಟೇ? ಇಲ್ಲನಲ್ಲ? ನಾನು ಊಟಮಾಡಲಾರೆ ಎಂದು ಅಲ್ಲಿಂದ ಎದ್ದು ಹೋಗುವನು. ಆಗ ಅವಳು ಈ ವಾರ್ತೆಯನ್ನು ಗಂಡನಾದ ಮಾರಯ್ಯನಿಗೆ ಹೇಳುವಳು ಆತನು ಊರ ಹೊರಕಟ್ಟೆಯ ಮೇಲೆ ಮುಹೂರ್ತಮಾಡಿದ್ದ. ಮುರುಳಸಿದ್ಧನಲ್ಲಿಗೆ ಹೋಗಿ ಬಹು ವಿಧವಾಗಿ ಬೇಡಿಕೊಳ್ಳುವನು. ಮುರುಳಸಿದ್ಧನು "ಚರಣ ತಂದರೆ ಗಿರಿ ಮಲ್ಲೇಶನ ಕರುಣದಿ ನೋಡಿ ಬಹೆವು" (ಪ. ೪೪)ಎಂದು ತನಗೆ ಶ್ರೀ ಶೈಲಯಾತ್ರೆಗೆ ಪಾದರಕ್ಷೆಬೇಕೆಂದು ಕೇಳುವನು. ಸ್ವಲ್ಪಹೊತ್ತಿನಲ್ಲಿ ಮಾರಯ್ಯ ಎತ್ತಿನ ತೊಗಲ ಕೆರಗಳನ್ನು ತಂದರ್ಪಿಸುವನು. ಇವನ್ನು ಮುಟ್ಟಬಾರದು "ಈರೇಳುಭುವನವ ಇರದೆ ಸಲಹುವಂತ ಧೀರನೊಬ್ಬನು ಬಸವಯ್ಯ, ಸಾರಾಮೃತದ ಸರ್ವಜ್ಞಾನದ ಚರ್ಮದ ದಾರಿಬೇಡವು ಶರಣಯ್ಯ" (ಪ. ೪೮) ಎಂದು ಅವನ್ನು ಹಿಂದಕ್ಕೆ ಬಿಟ್ಟು "ದಂಪತಿಗಳ ಮನಸೇಕಾಗಿರುವಂತ ಇಂಪಿತವುಳ್ಳ ಚರ್ಮದಲಿ" (ಪ ೪೯) ಪಾದರಕ್ಷೆಗಳಾಗಬೇಕೆಂದು ಕೇಳುವನು. ಮಾರಯ್ಯ ಹೆಂಡತಿಯ ಮೊಲೆಗಳ ಚರ್ಮದಿಂದಲೇ ಅವುಗಳನ್ನು ತಯಾರಿಸಿ ತರುವನು. ಹೆಂಡತಿಯು ಮೃತಪ್ರಾಯಳಾಗುವಳು. ಮುರುಳಸಿದ್ಧನು ದಂಪತಿಗಳೀರ್ವರೂ ಈ ಪಾದರಕ್ಷೆಗಳನ್ನು ನನಗೆ ಸಲ್ಲಿಸಿರೆಂದು ಕೇಳುವನು. ಮಾರಯ್ಯ ಹೆಂಡತಿಯ ಸ್ಥಿತಿಯನ್ನರಿತು ಅವಳಿಗೆ ಮುರುಳಸಿದ್ಧನ ಹೆಸರಿನಿಂದ ಭಸ್ಮವನ್ನು ಧರಿಸಿ "ಮುದ್ದು ಮುಖದ ಚೆನ್ನೆ ಮುಸುಕಿಟ್ಟು ಮಲಗಿದ್ದೆ ನಿದ್ರೆ ಏತಕೆ ಬಂತೆ ನಿನಗೆ,ಎದ್ದು ಹೋಗುವನೇಳು ಈ ಚರಣನ ಬೇಗ ಸಿದ್ಧಲಿಂಗನಿಗೊಪ್ಪಿಸುವಾ!" (ಪ ೫೭) ಎಂದು ಹೇಳಿದೊಡನೆ ಅವಳು ಮೂರ್ಛೆಯಿಂದೇಳುವಳು ಮಾರಯ್ಯನು ಅವಳೊಡನೆ ಮುರುಳಸಿದ್ಧನಲ್ಲಿಗೆ ಬಂದು ಪಾದರಕ್ಷೆಗಳನ್ನು ಅರ್ಪಿಸುವನು. ಮುರುಳಸಿದ್ಧನಿಗೆ ಆನಂದವಾಗುವುದು. ಇಷ್ಟಾರ್ಥವನ್ನು ಕೇಳುವಂತೆ ಅಪ್ಪಣೆಮಾಡುವನು. ಆಗ ದಂಪತಿಗಳು ಪುತ್ರಸಂತಾನವನ್ನು ಕೇಳುವರು. ಮುರುಳಸಿದ್ಧನು ಶುದ್ಧ ಸಪ್ತಮಿ ಸೋಮವಾರ ದಿವಸವು ಅರ್ಧರಾತ್ರಿಗೆ ಶಿಶುವಾಗಿ ನಿರ್ಧಾರವಾಗಿ ನಿಮ್ಮೀರ್ವರ ಮಧ್ಯದಿ ಉದ್ಭವಿಸುವೆ ಅಂಜಬೇಡಿ" (ಪ. ೬೧) ಎಂದು ವರಪ್ರದಾನಮಾಡಿ ತಾನೇ ಆ ವಿಧವಾಗಿ ಶಿಶುವಾಗಿ ಲೀಲೆಯನ್ನು ತೋರಿಸುವನು;

ಆದರೆ ಮಾರಯ್ಯ ಸೊನ್ನಲದೇವಿಯರು ಅಲ್ಲಿಂದ ಮೂರೇ ದಿನಗಳಲ್ಲಿ ಕೈಲಾಸ ವಾಸಿಗಳಾಗುವರು.

ಈ ಸಾಂಗತ್ಯದಲ್ಲಿ ತಿಲಾದ-ಸುಪ್ರಭೆಯರ ಸುಳಿವೇ ಇಲ್ಲ, ಕಗ್ಗಲ್ಲಪುರ ಬಾಚಿಗೌಡ ಮಲ್ಲಮ್ಮ ಇವರ ಸುದ್ದಿಯೇ ಇಲ್ಲ. ಮಾರಯ್ಯ ಸೊನ್ನಲೆಯರಿಗೆ ಲೀಲಾಮಾತ್ರದಿಂದ ಮರುಳಸಿದ್ಧನು ಶಿಶುವಾಗಿ ತೋರುವನು, ಈರ್ವರ ಮಧ್ಯದಲ್ಲಿ ಉದ್ಭವಿಸುವನು. ಮರುಳಸಿದ್ಧ ಕಾವ್ಯಕ್ಕೂ ಈ ಸಾಂಗತ್ಯಕ್ಕೂ ಎಷ್ಟು ವ್ಯತ್ಯಾಸವಿದೆ ಎಂಬುದು ಈ ಅನೇಕ ವಿಷಯಗಳಿಂದ ಸ್ಪಷ್ಟವಾಗಿದೆ. ಮರುಳಸಿದ್ಧನು ಅಯೋನಿಜನೆಂಬುದನ್ನು ಮೇಲಿನ ಪ್ರಮಾಣದಿಂದ ಸಾಂಗತ್ಯಕಾರನು ಹೊರಗೆಡವಿದ್ದಾನೆ.

(೩) ಮಾರಯ್ಯ ಸೊನ್ನಲ ದೇವಿಯರು ಮಡಿದ ವಾರ್ತೆ, ಅವರ ಮನೆಯಲ್ಲಿ ಶಿಶುವು ರೋದನ ಮಾಡುವ ವಾರ್ತೆ ಕೇತನ ಹಳ್ಳಿಯ ತುಂಬಾ ತುಂಬುವದು. ಈ ಹಿಂದೆ ಬಂದಿರುವ ಮುಕ್ತಾಯಕ್ಕ ಆ ಶಿಶುವನ್ನು ಸಾಕುತ್ತಾಳೆ. ಮರುಳಸಿದ್ಧನು ದೊಡ್ಡವನಾಗಿ ಅಲ್ಲಿ ಕೆಲವು ಲೀಲೆಗಳನ್ನು ಮಾಡುತ್ತಾನೆ. ಆ ಮಲ್ಲಿಗೌಡನೆಂಬ ಒಬ್ಬ ಗೌಡನೂ ಇರುವನು "ಮಲ್ಲಿಗೊಂಡನ ಮನೆಗೆ ಬಂದೀಲಿ ಮೂಡಿ ಮರುಳ ಸಿದ್ಧಯ್ಯ ಮೆಲ್ಲಲಿಕ್ಕೆ ಬೇಡಿದ ಕಥನಾ" (ಪ. ೩೫೩) "ಹೊನ್ನ ಕುದುರೆ ದಾಯ ನಿನ್ನ ಕೊಲ್ಲುವನೆಂದು ತನುಮಾನ ಗರ್ಜಿಸಿ ನುಡಿದಾ" (ಪ. ೫೪) ಎಂಬೀ ಪದ್ಯಗಳಿಂದ ಮಲ್ಲಿಗೊಂಡನು ಮರುಳಸಿದ್ಧನನ್ನು ಸಾಕಿರಬೇಕೆಂದೂ ತಿಳಿಯುವುದು.

ಮರುಳಸಿದ್ಧನು ಅಲ್ಲಿಂದ ಒಂದು ದಿನ ದೇಶ ಪರ್ಯಟನ ಮಾಡಲು ಬಯಸಿ ತನ್ನನ್ನು ಸಾಕಿದ ಮುಕ್ತಾಯಕ್ಕನೆದುರಿಗೆ "ನಿನ್ನ ನಿಷ್ಠೆಗೆ ಮಾರ ಸೊನ್ನಲೆಯ ಭಕ್ತಿಗೆ ಉನ್ನತ ಶಿಶುವಾದೆ ನಾನು, ಇನ್ನು ಮರ್ತ್ಯದಿ ಚರಿಸುವೆನೆಂದು" (ಪ, ೬೪) ಹೇಳುತ್ತಾ ಅವಳನ್ನು ಸಮಾಧಾನ ಪಡಿಸಿ ಶ್ರೀಶೈಲಕ್ಕೆ ಹೊರಡುವನು. "ನಾಕಿಯ ಚಕ್ಷ ಪರುಷ ಕಲ್ಲಾದಂತೆ ರೂಪನಳಿದಿಹುದಾಗಿರಿಯು, ಕಾಮಾರಿ ನೆಲಸಿಹ ರಜತಗಿರಿಗೆಣೆಯಾಗಿ ಶ್ರೀ ಪರ್ವತವೊಪ್ಪುತಿಹುದು; ನೆನೆವರೆ ಅಘಹರಿವುದು. ನೋಡಿದ ಮಾತ್ರ ಜನರೀಕೀಳು ಜನ್ಮದ ಮನದ ಪಾಪವ ಸಂಹರಿಪ ಮಲ್ಲೀಶನ ಘನಗಿರಿಯಿದು" (ಪ. ೬೨) ಆ ಮರುಳಸಿದ್ಧೇಶನು ಕಾಣುವನು. ಮೊದಲು ಪಾತಾಳ ಗಂಗೆಯಲ್ಲಿ ಸ್ನಾನ ಮಾಡುವನು ಆ ಮೇಲೆ ದೇವಸ್ಥಾನವನ್ನು ಹೊಕ್ಕು ಮಲ್ಲೀಶನನ್ನು ದರ್ಶನ ಮಾಡಿ ವಿಭೂತಿಯನ್ನು ಧರಿಸಿ ದೇವಾ! ಈ ಪರ್ವತದಲ್ಲಿ ರೇವಣಸಿದ್ಧನು

ತಪಸ್ಸನು ಮಾಡುತ್ತಿರುವುದೆಲ್ಲಿ ? ಹೇಳೆಂದು ಕೇಳುವನು. ಆತನನ್ನು ಹುಡುಕುವನು, ಶ್ರೀಗಿರಿಗೆ ಉತ್ತರದಲ್ಲಿರುವ ಕೋಡುಗಲ್ಲಿನ ಮೇಲೆ ತಪಸ್ಸು ಮಾಡುತ್ತಿದ್ದ ರೇವಣಸಿದ್ಧರನ್ನು ಕಾಣುವನು; ಸಂಭಾಷಣೆಯಾಗುವದು. ಮಾರಯ್ಯ ಸೊನ್ನಲೆಯರಿಗೆ ಶಿಶುವಾಗಿ ಲೀಲೆ ತೋರಿದ ಕಾರಣದಿಂದ ತನ್ನನ್ನು ಪುನರ್ಭವಸೆಂದೆಣಿಸಿ ಮರುಳಸಿದ್ಧನು ರೇವಣಸಿದ್ಧರಿಂದ ಶಿವದೀಕ್ಷೆಯನ್ನು ಹೊಂದುವರು. ರೇವಣಸಿದ್ಧನು "ಪರಚಿತ್ತವಿಲ್ಲದೆ ಪರಧನ ಕಳುಕದೆ, ಪರವನಿತೆಯ ಸಿಟ್ಟಿಸದೆ, ಗುರುಲಿಂಗಜಂಗಮ ಸ್ಥಿರವೆಂದು ನಂಬಿರು ಪರಮ ಜ್ಞಾನವು ದೊರಕುವುದು" (ಪ. ೧೪೨) ಎಂದು ಮುಂತಾಗಿ ಬೋಧಿಸುವನು.

ಮರುಳಸಿದ್ಧ ಕಾವ್ಯದ ಅಭಿಪ್ರಾಯದಂತೆ ಮರುಳಸಿದ್ಧನು ಹಳೆಬೀಡು ಮಾರ್ಗವಾಗಿ ಚಿನ್ಮಯಗಿರಿ ( ಮಲಯಾದ್ರಿ ) ಯಲ್ಲಿ ರೇವಣಸಿದ್ಧರನ್ನು ಕಂಡರೆ ಮರುಳಸಿದ್ಧೇಶ್ವರ ಸಾಂಗತ್ಯದ ಅಭಿಪ್ರಾಯದಂತೆ ಈ ಮರುಳಸಿದ್ಧನು ಶ್ರೀಶೈಲದಲ್ಲಿ ರೇವಣಸಿದ್ಧರನ್ನು ಕಾಣುತ್ತಾನೆ.

(೪) ಮರುಳಸಿದ್ಧನು ರೇವಣಸಿದ್ಧರೊಡನೆ ಕೊಲ್ಲಾಪುರಕ್ಕೆ ಮಾಯಾಮರ್ದನೆಗಾಗಿ ಹೊರಡುವನು. ರೇವಣಸಿದ್ಧರು ಊರ ಹೊರಗಡೆ ಒಂದೆಡೆ ತಾಣ ಮಾಡಿರುವರು. ಭಿಕ್ಷೆಗೆಂದು ಮರುಳಸಿದ್ಧನನ್ನೇ ಕಳುಹುವರು. ಮರುಳ ಸಿದ್ಧನು ಮಾಯೆಯ ಮನೆಗೆ ಭಿಕ್ಷಕ್ಕೆ ಹೋಗುವಾಗ, ಗೋರಕ್ಷ ಮೊದಲು ಎರಡನೆಯವನಾಗಿ ಗಜಾಸುರ, ಮೂರನೆಯವನಾಗಿ ಕಂಡಾಸುರ, ನಾಲ್ಕನೆಯವನಾಗಿ ಕೊಂಗಾಸುರ ಇವರೆಲ್ಲರೂ ಆಯಾ ಬಾಗಿಲುಗಳಲ್ಲಿ ಮರುಳಸಿದ್ಧನನ್ನು ತಡೆಯುವರು. ಇವರನ್ನೆಲ್ಲ ಅನುಕ್ರಮವಾಗಿ ಗೆದ್ದು ಮರುಳಸಿದ್ಧನು ಮಾಯಾ ಇದ್ದೆಡೆಗೆ ನಾಗಿ "ಪರಮಸಿದ್ಧಗೆ ಭಿಕ್ಷ, ಪಂಥಗಾರಗೆ ಭಿಕ್ಷ, ಪರವಾರಿ ಗಂಡಗೆ ಭಿಕ್ಷ, ಉರಿಯುವ ಕಾಲಕೂಟ ವಿಷವನುಂಬಗೆ ಭಿಕ್ಷ, ತರಹೇಳು ಮಾಯೆಗೆ ಭಿಕ್ಷ" (ಸಂ. ೪ ಪ. ೪೪ ) ಎಂದು ಭಿಕ್ಷೆಯನ್ನು ಕೇಳುವನು. ಮಾಯೆಗೂ ಮರುಳಸಿದ್ಧನಿಗೂ ಅನೇಕ ವಿಧವಾದ ಸಂಭಾಷಣೆಯಾದ ನಂತರ ಮಾಯೆಯ ಗರ್ವಭಂಗವಾಗುವುದು. ಕೈ ಮೂಗು ಮೊಲೆಗಳನ್ನು ಕತ್ತರಿಸುವುದಾದ ಮೇಲೆ ಮರುಳಸಿದ್ಧನ ಹಸ್ತಸ್ಪರ್ಶ ಮಾತ್ರದಿಂದ ಮಾಯೆಗೆ ಪೂರ್ವ ಜನ್ಮದ ಸ್ಮರಣೆಯಾಗುವುದು. "ಬಿಡದೆ ಕೈಲಾಸದಿ ದೇವಿಯ ಚರಣವನೊಡವೆರನೆನ್ನುತ ( ಪ. ೭೦ ) ಬೇಡುವಳು. ಜಗವನ್ನೇ ಎತ್ತುವ ಮರುಳಗೆ ಮಗುವೊಂದು ಭಾರವೇ? ಮರುಳಸಿದ್ಧನು ಆಗಲೇ

ಶಿವದೂತರನ್ನು ಕರೆದು ಪಾರ್ವತಿಯಲ್ಲಿಗೆ ಇವಳನ್ನು ಕಳುಹಿಸುವನು. ಇಷ್ಟಾದ ಬಳಿಕ ಮರುಳಸಿದ್ಧನು ಈ ವಿಜಯವನ್ನು ರೇವಣಸಿದ್ಧನಿಗೆ ಅರುಹುವನು ಆತನಿಗೂ ಸಂತೋಷವಾಗುವುದು, ಬಳಿಗೆ ಕರೆದು “ ಕಂದನೆ ಕಾಮನ ಕೊಂದನೆ, ನಿಗಮಕೆ ಎಂದಿಗೂ ಶಿಲುಕದ ಭವನೆ, ಹೊಂದಿದ ಈರೇಳು ಧರೆಯ ರಕ್ಷಿಸುವನೆ ಒಂದು ಮಾತನು ಕೇಳು ಮಗನೆ ! ಚರಲಿಂಗದಾಚಾರ್ಯನಾಗಿ ಮರ್ತ್ಯದೊಳು ಶರಣರ ಪ್ರೀತಿ ಸಾಕಿನ್ನು, ವರಲಿಂಗವಾಗಿ ಶಿಲೆಯ ಕಂಥೆಯನು ತೊಟ್ಟು ಹರುಷದಿಂದಿರು ” ( ಪ. ೮೬, ೮೭ ) ಎಂದು ಮುಂತಾಗಿ ಆಜ್ಞೆಮಾಡಿ ಕೌಶಲ್ಯ ದೇಶದಲ್ಲಿ ಉಜ್ಜಯಿನಿ ಎಂಬ ಪಟ್ಟಣವಿದೆ, ಶಿವಭಕ್ತನಾದ ವಿಕ್ರಮನು ಆ ಪಟ್ಟಣವನ್ನಾಳುತ್ತಾನೆ. ನೀನು ಅಲ್ಲಿ ಸಿದ್ಧೇಶನೆಂಬ ಹೆಸರಿನಿಂದ ಲಿಂಗಾಕಾರನಾಗಿ ಉದ್ಭವಿಸು ಎಂದು ಅಪ್ಪಣೆ ಕೊಡಿಸುವನು. ಅದಕ್ಕೆ ಮರುಳಸಿದ್ಧನು ದೇವಾ ! ವಿಕ್ರಮನು ಅಂತಹ ಶಿವಭಕ್ತನೇ ? ಅವನ ವಾರ್ತೆ ಏನೆಂದು ಕೇಳುವನು. ರೇವಣಸಿದ್ಧನು :— ಪೂರ್ವದಲ್ಲಿ ನನ್ನಿಂದ ಸುರಗಿ, ಕಠಾರಿಗಳನ್ನು ಪಡೆದ ವಿಕ್ರಮನೆ ಅವನು· ಪರಮ ಶಿವಭಕ್ತನು ಎಂದು ಮುಂತಾಗಿ ಹೇಳುವನು. ಮರುಳಸಿದ್ಧನು ಆ ಉಜ್ಜನಿಯ ಊರ ಹೊರಗಿನ ಒಂದು ತೋಟದಲ್ಲಿ ಲಿಂಗಾಕಾರನಾಗಿ ಲೀಲೆ ಮಾಡುವನು. ಈ ವಾರ್ತೆಯು ವಿಕ್ರಮನಿಗೆ ಮುಟ್ಟುವುದು. ಮುಂದೆ ಅಲ್ಲಿಂದೇ ಮಂದಿರವಾಗುವುದು.

ಮರುಳಸಿದ್ಧ ಕಾವ್ಯದಲ್ಲಿ ಕಗ್ಗಲ್ಲಲ್ಲಿ ಹುಟ್ಟಿ ಕಾಳಿಕಾ ಉಜ್ಜಯಿನಿಯಲ್ಲಿ ಬಾಳಿ ಕೊಟ್ಟೂರು ಬಳಿಯಿರುವ ಉಜ್ಜನಿಗೆ ಬಂದು ಲಿಂಗಾಕಾರನಾಗಿ ಒಕ್ಕಲಿಗನಿಂದ ಮಂದಿರವನ್ನು ಕಟ್ಟಿಸಿಕೊಳ್ಳುವ ಮರುಳಸಿದ್ಧನು ಈ ಸಾಂಗತ್ಯದಲ್ಲಿ ಕೇತನಹಳ್ಳಿ (ಈಗಿನ ಕೊಟ್ಟೂರು ಉಜ್ಜನಿ) ಯಲ್ಲಿ ಹುಟ್ಟಿ ಕೌಶಲ್ಯ ದೇಶದ ವಿಕ್ರಮಾದಿತ್ಯನ ಉಜ್ಜನಿಯಲ್ಲಿ ಲಿಂಗಾಕಾರನಾಗಿ ವಿಕ್ರಮನಿಂದ ಮಂದಿರವನ್ನು ಕಟ್ಟಿಸಿಕೊಳ್ಳುವನು. ಇದೆಷ್ಟು ವ್ಯತ್ಯಾಸ !

(೫) ವಿಕ್ರಮನು ಆ ಶಿವಲಿಂಗಕ್ಕೆ ಅಭಿಷೇಕ ಮಾಡುವನು. ಬಹು ಭಕ್ತಿಯಿಂದ ನಡೆದುಕೊಳ್ಳುವನು. ಒಂದು ದಿನ ರಾತ್ರಿಯಲ್ಲಿ ಜಕ್ಕಣಾಚಾರ್ಯನು ಈ ಲಿಂಗವನ್ನು ಸ್ತುತಿಸುವನು. ಈತನ ಭಕ್ತಿಗೆ ಮೆಚ್ಚಿ ಆ ಲಿಂಗವಾದ ಸಿದ್ಧೇಶನು ಮೂವತ್ತೈದು ವರ್ಷದ ಪ್ರಾಯದವನಾಗಿ ಆಚಾರ್ಯ ರೂಪದಲ್ಲಿ ಕಾಣುವನು. ಜಕ್ಕಣಾಚಾರ್ಯನನ್ನು ಕಂಡು ಒಂದು ಮಂದಿರವನ್ನು ರಚಿಸಲು ಹೇಳುವನು. ಆಗ ಜಕ್ಕಣನು “ ಕಲ್ಪಿತದಿಂದಲಿ ಕರವು

ಖಂಡಿಸಿತಯ್ಯಾ ಕಲ್ಪಶಾಸ್ತ್ರವು ನಿಮ್ಮ ಇರವು" (ಸ. ೫, ಪ. ೨೧) ಎಂದು ಉತ್ತರ ಕೊಡುವನು. ಜಕ್ಕಣಾಚಾರ್ಯನೂ ಪೂರ್ವಾಚಾರ್ಯನೂ ತಂದೆ ಮಕ್ಕಳೆಂಬದು ಇತಿಹಾಸ ಪ್ರಸಿದ್ಧ ವಿಷಯ. ಬೇಲೂರಲ್ಲಿರುವ ಚೆನ್ನಕೇಶವ ಮೂರ್ತಿಯನ್ನು ಜಕ್ಕಣಾಚಾರ್ಯನು ನಿರ್ಮಿಸಿರುವನು. ಪ್ರತಿಷ್ಠೆಯ ಕಾಲ ದಲ್ಲಿ ಪೂರ್ವಾಚಾರ್ಯನು ಅಲ್ಲಿಗೆ ಬಂದು ಮೂರ್ತಿಯಲ್ಲಿ ದೋಷವಿದೆ ಎಂದು ಮೈತುಂಬ ಗಂಧವನ್ನು ಸವರಿ ಹಸಿಯು ಆರದಿರುವ ಸ್ಥಾನದಲ್ಲಿ ಉಳಿಯಿಂದ ಹೊಡೆದು ಕಪ್ಪೆಯನ್ನು ತೋರಿಸುವನು; ತಂದೆ ಮಕ್ಕಳೆಂಬುದು ಆಗ ತಿಳಿ ಯುವುದು. ದೋಷ ಕಂಡರೆ ಜಕ್ಕಣನ ಕೈ ಕಡಿಯುವಂತೆ ಮೊದಲೇ ಮಾತಾಗಿದ್ದರೂ ತಂದೆಯೆಂದು ಆತನ ಅಂಗಿಯ ತೋಳನ್ನು ಕತ್ತರಿಸಲಾಯಿ ತೆಂದು ಐತಿಹ್ಯವಿದೆ

ಇಲ್ಲಿ ಮರುಳಸಿದ್ಧರಿಗೆ ಜಕ್ಕಣಾಚಾರ್ಯನು ಆ ವಿಷಯವನ್ನೇ ಅರಿಕೆ ಮಾಡಿಕೊಳ್ಳುವನೆಂದ ಮೇಲೆ ಮರುಳಸಿದ್ಧ ದೇವಾಲಯವನ್ನು ಕಟ್ಟಿದ ಜಕ ಣಾಚಾರ್ಯನು ಐತಿಹಾಸಿಕ ವ್ಯಕ್ತಿಯೆಂಬುದು ಸ್ಪಷ್ಟವಾಗುತ್ತದೆ. ಹೀಗಿ ದ್ದರೂ ಪೀಠಿಕಾ ಪು. ೧೨ ರಲ್ಲಿ ಶ್ರೀ ಅ. ನ. ಕೃಷ್ಣರಾಯರು "ಜಕ್ಕಣಾ ಚಾರ್ಯ ಐತಿಹಾಸಿಕ ವ್ಯಕ್ತಿಯಲ್ಲ" ಎಂದು ಹೇಳಿದ್ದಾರೆ. ಅಸ್ತು!

ಜಕ್ಕಣಾಚಾರ್ಯನನ್ನು ಮೇಲಿನಂತೆ ಮರುಳಸಿದ್ಧರು ಕೇಳಿದ ಮೇಲೆ ಜಕ್ಕಣಾಚಾರ್ಯನಿಗೆ ನಾಲ್ಕು ಕೈಗಳಾಗುವಂತೆ ಆಶೀರ್ವದಿಸುವರು. ಜಕ್ಕಣ ನಿಂದ ಮಂದಿರ ಸಿದ್ಧವಾಗುವುದು. ಉಜ್ಜನಿಯಲ್ಲಿ ಸಿದ್ಧೇಶ ಲಿಂಗಭಕ್ತಿಯು ಹೆಚ್ಚುವುದು. "ನೊಸಲ ಭಸಿತ ರುದ್ರಾಕ್ಷಿ ಲಿಂಗದ ಪೂಜೆ ಶಿಶು ಬಾಲ ವೃದ್ಧರಿಗೆಲ್ಲರಿಗೆ" (ಸ. ೫ ಪ. ೪೯) ಪ್ರಚಾರದಲ್ಲಿ ಬರುವುದು. ಉಜ್ಜನಿ ಯಲ್ಲಿ ದೊಡ್ಡ ಜಾತ್ರೆ ನಡೆಯುವುದು. ರಥೋತ್ಸವವಾಗುವುದು; ದಿಕ್ಕು-ದಿಕ್ಕುಗಳಿಂದ ರಾಜರು ಮೊದಲಾದವರು ಬಂದು ಸೇವೆ ಮಾಡುವರು. ಮರುಳಸಿದ್ಧನು ಲೀಲೆಗಳನ್ನು ಮುಗಿಸಿ ಕೈಲಾಸಕ್ಕೆ ಶಿವನೆಡೆಗೆ ಸೇರುವನು. ಅಲ್ಲಿರುವ ಸರ್ವರಿಗೂ ಆನಂದವಾಗುವದು; ಆಗ "ಸೃಷ್ಟಿಯೊಳಗೆ ಗಾವಿಲ ನಾಗಿ ಕರುಗಾಯ್ದದೃಷ್ಟ ಮೂರುತಿಯೆ ಚಿತ್ತೈಸು, ಭ್ರಷ್ಟ ಮತಿಯು ನುಡಿ ತಪ್ಪೆಂದು ಶರ್ವಾಣಿ ಸಾಷ್ಟಾಂಗ ವೆರಗಿ" (ಪ. ೧೬೨) ತನ್ನನ್ನು ಕ್ಷಮಿಸೆಂದು ಬಿನ್ನವಿಸುವಳು. ಮರುಳಸಿದ್ಧನಿಗೆ ಮೊದಲಿನ ಸ್ಥಾನವು ದೊರೆಯುವುದು. ಕೊನೆಗೊಮ್ಮೆ ಕವಿಯ ನಾಮ ನಿರ್ದೇಶದಿಂದ ಸಾಂಗತ್ಯ ಸಮಾಪ್ತವಾಗು ವುದು.

ಮರುಳಸಿದ್ಧ ಕಾವ್ಯವು ೬ ಸಂಧಿಗಳಿಗೆ ಸಮಾಪ್ತವಾದರೆ ಸಾಂಗತ್ಯವು ೫ ಸಂಧಿಗಳಿಗೇ ಸಮಾಪ್ತವಾಗಿದೆ.

ಕೇತನ ಹಳ್ಳಿಯೇ ಈಗಿರುವ ಕೊಟ್ಟೂರು ಉಜ್ಜಯಿನಿಯೆಂಬುದನ್ನು ನಾಗಭೂಷಣನು ಒಪ್ಪುತ್ತಾನೆ. (ಸ. ೧ ಪ. ೩೦, ೩೧, ೩೨)

ಸೊನ್ನಲ ದೇವಿಗೆ ಪತಿಯಾದ ಮಾರಯ್ಯನು ಯಾರಿರಬಹುದು? ಮುಕ್ತಾಯಕ್ಕ ಎಂಬವಳು ಯಾರಿರಬಹುದು? ಎಂಬುದು ಶೋಧಿಸಬೇಕಾದ ಅಂಶ, ಕೊಲ್ಲಾಪುರದಲ್ಲಿ ಮಾಯಾಮಂದಿರದ ದ್ವಾರಪಾಲಕರಲ್ಲಿ ಒಬ್ಬ ಕರಟಾಸುರನೆಂಬವನಿದ್ದಂತೆ ಸಾಂಗತ್ಯಕಾರ ನಾಗಭೂಷಣನು ಹೇಳುತ್ತಾನೆ. ಆದರೆ ಇವನೇ ಮಾಯೆಯ ತಂದೆಯೆಂಬುದನ್ನು ಒಪ್ಪುವುದಿಲ್ಲ.

ಈ ವಿಧವಾಗಿ ಅನಂತ ವಿಷಯಗಳಲ್ಲಿ ಸಾಂಗತ್ಯಕಾರನು ಮರುಳಸಿದ್ಧ ಕಾವ್ಯಕ್ಕೆ ಬಹಳ ಭಿನ್ನವಾದ ಅಭಿಪ್ರಾಯವುಳ್ಳವನೆಂಬುದು ಸ್ಪಷ್ಟವಾಗಿಯೇ ಇದೆ. ಆದುದರಿಂದ ಇವನ ಸಾಂಗತ್ಯ ರಚನೆಗೆ ಮರುಳಸಿದ್ಧ ಕಾವ್ಯವನೂ ಸಹಾಯ ಮಾಡಿಲ್ಲವೆಂದು ನಾವು ಸ್ಪಷ್ಟ ಪಡಿಸಬೇಕಾಗಿದೆ.

ಸಾಂಗತ್ಯಕಾರನಾದ ನಾಗಭೂಷಣನು ತನ್ನ ಕೃತಿಗೆ ಯಾವ ಆಧಾರ ಗ್ರಂಥಗಳನ್ನು ಸ್ವೀಕರಿಸಿದನೆಂಬುದು ತಿಳಿಯುವಂತಿಲ್ಲ ಇವನ ಕಾಲಮಾನವು ಇದು ವರೆಗೂ ಸುಸ್ಪಷ್ಟವಾಗಿಲ್ಲ, ನಿರ್ಧಾರವಾಗಿಲ್ಲ. ಗ್ರಂಥಗಳಲ್ಲಿಯ ಕೆಲವು ಹೋಲಿಕೆಗಳಿಂದಲೇ ಇವನು ದೇಪಕವಿಯಿಂದ ಈಚಿನವನೆಂದು ನಿರ್ಣಯಿಸುವದು ಇತಿಹಾಸ ಮಾರ್ಗಕ್ಕೆ ವಿರೋಧ.

ಉಜ್ಜಯಿನಿಗಳೆರಡಿದ್ದವೆಂಬುದನ್ನು ದೇಪನೂ ನಾಗಭೂಷಣನೂ ಒಪ್ಪುವರು, ಒಂದನೆಯ ಉಜ್ಜನಿಯನ್ನು ದೇವನು ಕಾಳಿಕಾ ಉಜ್ಜನಿಯೆಂದು ಹೇಳಿದರೆ ನಾಗಭೂಷಣನು ಕೌಶಲ್ಯ ದೇಶವ ವಿಕ್ರಮನ ಉಜ್ಜನಿಯೆಂದು ಹೇಳುತ್ತಾನೆ. ಸಿದ್ಧೇಶ ಲಿಂಗವು ಈ ಒಂದನೆಯ ಉಜ್ಜನಿಯಲ್ಲಿಯೇ ಇರುವುದನ್ನು ಇಬ್ಬರು ಕವಿಗಳೂ ಒಪ್ಪುವರು. (ಮ. ಕಾ. ಸ. ೪ ಪ. ೧೦೭) ಮ. ಸಾಂ. ಸಂ. ೪ ಪದ್ಯ ೫) ಆದುದರಿಂದ ಮರುಳಸಿದ್ಧರ ನಿಜವಾದ ಚರಿತ್ರೆಯ ಪ್ರಾರಂಭವು ಒಂದನೆಯ ಉಜ್ಜಯಿನಿಗೇನೇ ಬಹಳವಾಗಿ ಸಂಬಂಧಿಸುವುದೆಂದು ಇಲ್ಲಿ ನಾವು ಗ್ರಹಿಬೇಕಾದ ಅಂಶ; ಎರಡನೆಯ ಉಜ್ಜಯಿನಿಯಲ್ಲಿರುವ ಲಿಂಗವು ಮರುಳ ಸಿದ್ಧೇಶ್ವರ ಎಂದು ಗ್ರಹಿಸಬೇಕು. ತೆಲಗು ಬಾಳು ಒಕ್ಕಲಿಗ ಸಿದ್ಧಪ್ಪ ಇವರ ಸುಳಿವೇ ಸಾಂಗತ್ಯದಲ್ಲಿಲ್ಲ.

ಸಾಂಗತ್ಯ ಕೂಡಾ ಐತಿಹಾಸಿಕ ಮಾರ್ಗದಲ್ಲಿ ಬಹಳವಾಗಿ ಕುಂಟಿದೆ ಎಂಬುದು ಸಹಜ. ವಿಷಯಗಳು ಕ್ರಮವನ್ನು ಹಿಡಿದಿಲ್ಲ. ಹಿಂದಿನದು ಮುಂದೆಯೂ ಸೇರಿ ವ್ಯತ್ಯಾಸವಾಗಿದೆ.

## ವಿಮರ್ಶಕನು ಯಥಾರ್ಥ ವಾದಿಯಾಗಬೇಕು

ಹಿಂದಿನ ಕಾಲದಲ್ಲಿ ಮತದ್ವೇಷಗಳ ಹಾವಳಿಯು ಇದೇ ವಿಧವಾಗಿ ಎಲ್ಲ ಮತ ತತ್ವಗಳನ್ನು ಹದಗೆಡಿಸಿದೆ. ಆದುದರಿಂದ ಸಾಧಕ ಬಾಧಕ ವಿಚಾರವಿಲ್ಲದೆ ಇದು ಹೀಗೆಂಯೇ ಎಂದು ನಂಬಿ ಅದಕ್ಕೆ ಬೆಂಬಲಕೊಡುವುದು ಉಚಿತವಲ್ಲ. ಅ. ನ. ಕೃಷ್ಣರಾಯರು ತಮಗೆ ಮುನ್ನುಡಿಯಲ್ಲಿಯೇ ಸಂದೇಹ ಬಂದ ವಿಷಯದಲ್ಲಿ ಹಲಕೆಲವರ ಟಿಪ್ಪಣಿಗಳ ಪ್ರೋತ್ಸಾಹಣೆಯಿಂದ ಅವರನ್ನು ಹೊಗಳುವ ಸರಣಿಯಲ್ಲಿ ಮೂಲಮರುಳ ಸಿದ್ಧನನ್ನು ಮಾದಿಗನನ್ನಾಗಿ ಮಾಡಿಯೇ ಬಿಟ್ಟಿದ್ದಾರೆ. ಇದು ಬೇರೆ ವಿಧವಾದ ಸಿಂದೆಗೆ ಅಥವಾ ಅಪ-ಪ್ರಚಾರಕ್ಕೆ ಕಾರಣವಾಗಬಾರದೆಂದು ಕೌಟಿಲ್ಯ ನೀತಿಯನ್ನು ಮುಂಚಿತವಾವಾಗಿಯೇ ಚಿಂತಿಸಿ, ಪಾಪ! ನಿಷ್ಪಾಪ ಬಾಪೂಜೀ ಮಹಾತ್ಮ ಗಾಂಧಿಯವರಿಗೆ ಪೀಠಿಕಾರಂಭದಲ್ಲಿ ಮಣೆ ಹಾಕಿ ಈ ಕಾವ್ಯವನ್ನು ಒಪ್ಪಿಸಿದ್ದಾರೆ. ದೊಡ್ಡ ಸಾಹಸ ಮಾಡಿದ್ದಾರೆ! ಈ ಕಾವ್ಯವನ್ನು ಹಲವಾರು ಪತ್ರಿಕೆಗಳಿಗೆ ಭಟ್ಟಂಗಿ ಹೊಡೆಯಿರೆಂದು ಸಂಪಾದಕರು ಕಳುಹಿಸಿದ್ದು ಆಯಿತು. ಪತ್ರಿಕೆಯವರು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ವಿಮರ್ಶೆ ಮಾಡಿದುದೂ ಆಯಿತು. ಪರರ ಮತ ಶಾಸ್ತ್ರಗಳನ್ನೂ ಓರೆಗಣ್ಣಿನಿಂದ ನೋಡುವ ಇವರ ಪಕ್ಷ ಪೋಷಕರನೇಕರು ಇವರಿಗೆ ಅನುಕೂಲವಾದ ತಾಳಹಾಕುತ್ತ ಧನ್ಯವಾದಗಳನ್ನೇ ಸಲ್ಲಿಸಲು ಹಿಂದು ಮುಂದು ನೋಡಲಿಲ್ಲ ತಾನೆ ?

ವಿಜಾಪುರದಲ್ಲಿ ಹೊರಡುತ್ತಿರುವ ಶಿವಾನುಭವ ಮಾಸಪತ್ರಿಕೆಯ ೧೯೪೧ರ ಸಪ್ಟಂಬರ ಸಂಚಿಕೆಯಲ್ಲಿ ಪು. ೨೨೯ರಿಂದ ೨೩೦ ಪುಟಗಳವರೆಗೆ ಚಿತ್ರದುರ್ಗದ ಶ್ರೀಮಾನ್ ಹುಲ್ಲೂರು ಶ್ರೀನಿವಾಸ ಜೋಯಿಸ ವಕೀಲರು ಮರುಳಸಿದ್ಧ ಕಾವ್ಯದ ವಿಮರ್ಶೆಯನ್ನು ಸುದೀರ್ಘವಾಗಿ ಮಾಡಿದ್ದಾರೆ.

ಮ. ಸಿ. ಕಾವ್ಯ ಸಂ. ಶ್ರೀ ಅ. ನ. ಕೃಷ್ಣರಾಯರಿಗೆ ಕೆಲವೆಡೆ ಬುದ್ಧಿ ಹೇಳುವವರಂತೆ ನ... ...ಜೋಯಿಸರು ಕಾವ್ಯದಲ್ಲಿಲ್ಲದ ಶಬ್ದಗಳನ್ನು ಕೆಲವರ ಉತ್ತೇಜನದಿಂದ ಉ... ...ಪೂರ್ವಕವಾಗಿ ತೆಗೆದುಕೊಂಡು ವೀರಶೈವ ಸಮಾಜಕ್ಕೆ ಬೆಂಕಿಹಚ್ಚಲು ಯತ್ನಿಸಿದ್ದಾರೆ. ವಿಮರ್ಶಕರು ಹೀಗೆ ಒಂದೊಂದು

ಸಂಗಡದವರ ವರ್ಚಸ್ಸಿಗೆ ಒಳಪಟ್ಟು ತಮ್ಮ ಯೋಗ್ಯತೆಯನ್ನು ಮಾರಿ ಕೊಳ್ಳುವುದು ಯೋಗ್ಯವಲ್ಲವೆಂದು ನನಗೆ ತೋರುತ್ತದೆ. ಸದರಿಯವರ ಪುಟ ೨೨೯ರಲ್ಲಿ "ಉಜ್ಜಯಿನೀ ಸದ್ಧರ್ಮ ಸಿಂಹಾಸನ ತರಳಬಾಳು ಗುರು ಪೀಠಸ್ಥಾಪಕ" ಎಂದು ಕಾವ್ಯದಲ್ಲಿಲ್ಲದ ಸಮಸ್ತ ಪದವನ್ನು ಹೇಳಿದಿರುವುದುಏತಕ್ಕಾಗಿ? ಈ ಸಮಸ್ತಪದವನ್ನು ಜೋಯಿಸರು ಕಾವ್ಯದಲ್ಲಿ ತೋರಿಸಬಲ್ಲರೋ? ಅದರ ಕೆಳಗೆ "ಇದನ್ನು ಅನುಸರಿಸಿ ಬರೆದ ಕವಿ ಹೆಸರಾದ ಬಾಳ್ಗುಳಿಯ ದೇಪ" ಎಂದು ಬರೆದಿದ್ದಾರೆ. ದೇಪಕವಿಯು "....ಬಾಳ್ಗುಳಿಯ ಕಲಿದೇವ ಸಿಂತು ಸುರಿದೊಲು ದೇಪಪೇಳ್ದಂ...." (ಸಂ. ೧. ಪ ೧೬) ಸ್ಪಷ್ಟವಾಗಿ ಬಾಳ್ಗುಳಿಯ ಕವಿದೇಪ ಹೇಳಿದಂತೆ ನಾನು ( ದೇಪ ) ಹೇಳಿದೆನೆಂದು ಅನ್ನುತ್ತಿರುವಾಗ ಬಾಳ್ಗುಳಿಯ ದೇವನು ಕಾವ್ಯಕಾರನಾಗದೆ ಆತನಿಂದ ಭಿನ್ನವಾದ ದೇಪ ನೆಂಬೊಬ್ಬನು ಕಾವ್ಯಕಾರನೆಂದು ತಿಳಿಯಲು ಸುಲಭಸಾಧ್ಯವಾಗಿದೆ; ಆದುದ ರಿಂದ ಜೋಯಿಸರ ಈ ತರ್ಕವು ಅಸಂಬದ್ಧವಾದುದು.

೨೩೦ ನೆಯ ಪುಟದಲ್ಲಿ ಜೋಯಿಸರು " ನೊಣಬೇಶ, ನೊಣಬೇಶ," ಎಂದು ಅಂದಿದ್ದಾರೆ. ಕಾವ್ಯದಲ್ಲಿ ಆ ಶಬ್ದವಿರದೆ "ನೊಣಬಚಕ್ರೇಶ" ಎಂದಿದೆ. ನೋಡಿಕೊಳ್ಳಬೇಕು.

ಪು. ೨೩೩ ರಲ್ಲಿ " ಚಿನ್ಮೂಲಗಿರಿ ಎಂದರೆ ಚಿತ್ರದುರ್ಗ........ರೇವಣ ಸಿದ್ಧನು........ವಾಸಮಾಡಿದ್ದನು" ಎಂದು ಜೋಯಿಸರು ಹೇಳಿದ್ದಾರೆ. ಮ. ಸಿ. ಕಾವ್ಯದಲ್ಲಿ ಚಿನ್ಮಯಗಿರಿಯೆಂದೂಚಿನ್ಮೂಲಗಿರಿ ಎಂದೂ ಎರಡು ಶಬ್ದಗಳು ಉಕ್ತವಾಗಿವೆ. ( ಸಂ ೩ ಪ ೧೨೦ ) ( ಸಂ ೪. ಪ. ೧-೨ ) ಜೋಯಿಸರು ಚಿನ್ಮೂಲಗಿರಿ ಎಂದು ಮಾತು ತೆಗೆದುಕೊಂಡಿದ್ದಾರೆ; ಆದರೆ ಈ ಬಗ್ಗೆ ಐತಿ ಹಾಸಿಕ ಆಧಾರಗಳೇನನ್ನೂ ಹೇಳಿಲ್ಲ. ಕೇವಲ ಸಿದ್ಧನಾಥ-ಸಿದ್ಧೇಶ್ವರ ದೇವಾ ಲಯಗಳಿದ್ದ ಮಾತ್ರಕ್ಕೆ ಅದು ರೇವಣಸಿದ್ಧರ ಮೂಲ ನಿವಾಸವಾಗಲಾರದು. ಆ ಬಗ್ಗೆ ಬಲವಾದ ಆಧಾರಗಳು ಬೇಕು. ವೀರಶೈವ ಮತಾಚಾರ್ಯ ಸಾಂಪ್ರದಾಯದ ವಿಚಾರದಂತೆ ರೇಣುಕ—ರೇವಣಸಿದ್ಧ ಇವರ ಪೀಠವು ಶೃಂಗೇರಿ ಪ್ರಾಂತದ ಮಲೆಯಾದ್ರಿಯ ರಂಭಾಪುರಿ (ಬಾಳೆಹೊನ್ನೂರು)ಎಂದು ಪಾರಂಪರ್ಯವಿಡಿದು ಬಂದಿದೆ. ಆದುದರಿಂದ ಆ ಕಾಲದ ಮಹಾಮಹಾ ಮುನಿಗಳಿಗೆ ತಪೋಭೂಮಿಯಾದ ಮಲೆಯಾದ್ರಿಯೇ ಚಿನ್ಮಯಗಿರಿ ಅಥವಾ ಚಿನ್ಮೂಲಗಿರಿಯೆಂದು ತಿಳಿದುಕೊಳ್ಳುವುದು ಸೂಕ್ತವಾಗಿದೆ. ಮ. ಸಿ

ಕಾವ್ಯಾಭಿಪ್ರಾಯದಂತೆ ಹಳೆ ಬೀಡು ಮಾರ್ಗವಾಗಿ ಹೊರಟು ಬರುತ್ತಿರುವ ಮರುಳಸಿದ್ಧರಿಗೆ ಇದುವೇ ಸಮೀಪವರ್ತಿಯಾಗಿದೆ.

ಪು. ೨೩೪ರಲ್ಲಿ "ಒಕ್ಕಲಿಗ ಕಾಯಕದ ಸಿದ್ದಯ್ಯನಿಗೆ........ಮಠಾಧಿಕಾರಿಯನ್ನಾಗಿ ಮಾಡಿದಮೇಲೆ ಗುರುಸೇವೆಯನ್ನು ಮಾಡೆಂದು ಹರಸಿದನು" ಎಂದು ಜೋಯಿಸರು ಹೇಳಿದ್ದಾರೆ. ಮಠಾಧಿಕಾರಿಯನ್ನಾಗಿ ಮಾಡಿದ ಮೇಲೆ ಗುರುಸೇವೆಯನ್ನು ಮಾಡೆಂದು ಹರಸಿದ ಕಾರಣವೇನೆಂಬುದನ್ನು ಜೋಯಿಸರು ಸ್ವಲ್ಪ ವಿಮರ್ಶೆಮಾಡಬೇಕಾಗಿದ್ದಿತು. ಪ್ರಧಾನವಾಗಿ ಇದೇ ವಿಷಯವನ್ನು ಸಮರ್ಥನೆ ಮಾಡುವುದು ಜೋಯಿಸರಿಗೆ ಅಭೀಷ್ಟವಾಗಿರುವಾಗ ವಿಮರ್ಶೆಯನ್ನೇಕೆ ಮಾಡಿಯಾರು? ಪರರ ವರ್ಚಸ್ಸಿಗೆ ಒಳಗಾದವರ ವಿಮರ್ಶೆನೆಗಳು ಹೀಗೆ ಆಗುವುದು ಸ್ವಾಭಾವಿಕ !

ಪುಟ ೨೩೫ರಲ್ಲಿ "ಕಲಿದೇವನು ದೇವನ ಗುರುವಲ್ಲ; ದೇವನ ಆರಾಧ್ಯ ದೇವರು' ಎಂದು ಬರೆದಿದ್ದಾರೆ. ಜೋಯಿಸರ ಅಭಿಪ್ರಾಯದಂತೆ ಬಾಳ್ಗುಳಿಯಲ್ಲಿ ಕ್ರಿ. ಶ. ೧೧೦೦ಲಕ್ಕೆ ಪೂರ್ವದಲ್ಲಿಯೇ ಸ್ಥಾಪಿತವಾಗಿದ್ದ ಕಲ್ಲೇಶ್ವರ ದೇವರಿಗೆ ಕಲಿದೇವ ಎಂಬ ಹೆಸರು ಶಾಸನಗಳಲ್ಲಿ ಉಕ್ತವಾಗಿದ್ದರೆ ಈ ಕಲಿದೇವನು ( ೯೩೭ ವರ್ಷಗಳಷ್ಟು ಪೂರ್ವದವನು ) ಇಂದಿಗೆ ೩೫೮ ವರ್ಷಗಳ ಅವಧಿಯಲ್ಲಿದ್ದ ದೇಪಕವಿಗೆ ಗುರುವಾಗಲಾರನು; ಸರಿಯೆ. ಆದರೆ ದೇಪನು ಕಲಿದೇವನನ್ನು ತನ್ನ ಗುರುವೆಂದು ಹೇಳಿಲ್ಲ "ಕಲಿದೇವ ಸಿಂತುಸುರಿದೊಲು ದೇಪ ಪೇಳ್ದಂ" ಕಲಿದೇವನು ಹೀಗೆ ಹೇಳಿರುವಂತೆ ತಾನು (ದೇಪನು) ಹೇಳಿದನೆಂದು ಒಪ್ಪುತ್ತಾನೆ. ಆದುದರಿಂದ ಬಾಳ್ಗುಳಿಯ ಕಲಿದೇವನು ಮರುಳಸಿದ್ಧರ ಬಗೆಗೆ ಅವಶ್ಯವಾಗಿ ಒಂದು ಗ್ರಂಥವನ್ನು ಬರೆದಿರಬೇಕೆಂದು ನಿರ್ಣಯವಾಗುವದು. ಜೋಯಿಸರ ಅಭಿಪ್ರಾಯದಂತೆ ಕಲ್ಲೇಶ್ವರ ಲಿಂಗವೇ ಕಲಿದೇವನಾಗಿದ್ದರೆ "ಉಸುರಿದೊಲು" ಎಂಬ ಶಬ್ದವನ್ನು ದೇಪನು ಸೇರಿಸುತ್ತಿದಿಲ್ಲವಾದುದರಿಂದ ಬಾಳ್ಗುಳಿಯ ಕಲಿದೇವನು ಒಬ್ಬ ಮಹಾತ್ಮನೇ ಹೊರತು ಸ್ಥಾವರಲಿಂಗವಲ್ಲವೆಂದು ಜೋಯಿಸರು ಗ್ರಹಿಸಬೇಕು "ಉಸುರಿದೊಲು" ಎಂಬ ಶಬ್ದವಿರದಿದ್ದರೆ ಶ್ರೀ. ಶ್ರೀನಿವಾಸರ ಅಭಿಪ್ರಾಯವು ಸಾಧುವಾಗಬಹುದಿತ್ತು !

ಪುಟ ೨೩೬ರಲ್ಲಿ "ಕುಲಸ್ತ್ರೀಯರು ಋತುವಾದ ಸಮಯದಲ್ಲಿ ಶುಭ ಕೆಲಸವನ್ನು ಮಾಡಕೂಡದೆಂಬುದು ಹಿಂದೂ ಧರ್ಮ ನಿಯಮ ಬದ್ಧವಾ

ದುದು; ದೇವರ ಪೂಜೆಯು ನಿಷಿದ್ಧ" ಎಂದು ಬರೆದಿದ್ದಾರೆ. ಹೀಗೆ ಬರೆಯು ವಾಗ ಜೋಯಿಸರು "ವೀರಶೈವ ಧರ್ಮಭಾಷ್ಯ"ಗಳನ್ನಾಗಲಿ ಅಥವಾ ತಮ್ಮ ಧರ್ಮದ ಭಾಷ್ಯ ಅಥವಾ ಅದನ್ನು ಬಲ್ಲ ಯಾಜ್ಞಿತರನ್ನಾದರೂ ವಿಚಾ ರಿಸಿ ಬರೆದಿದ್ದರೆ ಉತ್ತಮವಾಗುತ್ತಿದ್ದಿತು.

ಸ್ನಾತಕಾದಿಗಳು ಆಚರಿಸುವ ಪೌಂಡರೀಕಾದಿಯಾಗ (ಪೂಜೆ)ಕಾಲದಲ್ಲಿ ರಜಃ ಸೂತಕಾದಿಗಳು ಇಲ್ಲವೆಂದು ಭಾಷ್ಯಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ; ಹಾಗೆ ಪ್ರಚಾರದಲ್ಲಿಯೂ ಇದೆ. ವೀರಶೈವ ಭಾಷ್ಯಗಳೂ ಪೂಜಾಕಾಲದಲ್ಲಿ ಮುಟ್ಟಾಗುವಿಕೆ ಮೊದಲಾದ ಪಂಚಸೂತಕಗಳೂ ದೋಷಕರವಲ್ಲವೆಂದು ಸಾರುತ್ತಿವೆ. ಜೋಯಿಸರು ಇವನ್ನು ಗಮನಿಸದೆ ಶ್ರೀ ಅ. ನ. ಕೃಷ್ಣರಾಯ ರನ್ನು ಟೀಕಿಸಿರುವುದೂ ಕುಕವಿಕಲ್ಪಿತವಾದ ಋಷಿಯ ಶಾಪವನ್ನು ಸಮ ರ್ಥಿಸಿರುವುದೂ ಹುರುಳಿಲ್ಲದ ಬರೆಹ !

ಪುಟ ೩೬೯ರಲ್ಲಿ "ಸಾಧುಗಳಿಗೆ ಇದು ಸಲ್ಲದು" ಎಂದು ಅರಸನು ನುಡಿದ "ಸಾಧು" ಶಬ್ದದ ವಿವರಣೆಯನ್ನು ಕೆಳಗೆ ೭ ಅಂಕಿಯನ್ನಿಟ್ಟು "ಸಾಧು—ಅಹಿಂಸಕ; ಸಾಧು ಸಮಾಜಕ್ಕೆ ಸೇರಿದ ಎಂಬ ಎರಡರ್ಥದಲ್ಲಿ ಕವಿಯು ಸಾಧು ಶಬ್ದವನ್ನು ಉಪಯೋಗಿಸಿದಂತೆ ಕಾಣುತ್ತದೆ" ಎಂದು ಬರೆದು ಜೋಯಿಸರು ತಮ್ಮ ವ್ಯಾಕರಣ ಪಾಂಡಿತ್ಯವನ್ನು ವಿಶಾಲಗೊಳಿಸಿ ಕೊಂಡಿದ್ದಾರೆ. ಆದರೆ ಮರುಳಸಿದ್ಧನ ದೂರನ್ನು ಕಂಚುಕಿಗ ರಾಮ ಹೊದ ಲಾದವರು ಸೋಣಬಚಕ್ರೇಶನಲ್ಲಿಗೆ ಒಯ್ದುದರಿಂದ ಮೋಚಿ ಸೋಣಬನಾದ ಅರಸು ತನ್ನನ್ನು ಸಾಧು ಅಥವಾ ಸಾಧು ಸಮಾಜದವನೆಂದು ಹೇಳಿಕೊಂಡಿರ ಬಹುದೋ, ಎಂಬ ಯೋಚನೆಯನ್ನಷ್ಟು ಮಾಡಿದ್ದರೆ ಚೆನ್ನಾಗಿತ್ತಲ್ಲವೆ ? ಆದುದರಿಂದ ಇಲ್ಲಿ ಬಂದಿರುವ ಸಾಧುಶಬ್ದವು ಸಮಾಜ ದ್ಯೋತಕವಾಗದೆ ಸ್ವಾಭಾವಿಕವಾಗಿ ಸೌಜನ್ಯದ್ಯೋತಕವಾಗಿ ಉಪಯೋಗಿಸಲ್ಪಟ್ಟಿದೆ ಎಂದು ಜೋಯಿಸರು ಗ್ರಹಿಸಬೇಕು.

ಪುನಃ ಸದರಿ ಜೋಯಿಸರು ಪುಟ ೩೪೮ ಮತ್ತು ೩೪೯ರಲ್ಲಿ "ತೆಲಗು ಬಾಳಿಗೆ ಬಂದು..... ಸಿದ್ಧಯ್ಯನಿಗೆ ..... ಚರಮೂರ್ತಿಯನ್ನಾಗಿ ಮಾಡಿ ಮಠಾಧಿಪತ್ಯವನ್ನು ವಹಿಸಿರುವಂತೆ ಹರಸಿದನು" ಎಂದೂ ತೆಲಗು ಬಾಳಸಿದ್ಧ ಯ್ಯನನ್ನು ತರಳ! ಬಾಳು! ಎಂದು ಹರಸಿ ಮಠದ ಉತ್ತರಾಧಿಕಾರವನ್ನು ವಹಿಸಿ ಶಿವಲಿಂಗನಲ್ಲಿ ಐಕ್ಯನಾದನು" ಎಂದೂ ಬರೆದಿದ್ದಾರೆ. ಇದೆಲ್ಲ ಒಂದು

ಪಂಗಡದವರ ಬೋಧನೆಯಿಂದ ಜೋಯಿಸರ ಲೆಕ್ಕಣಿಕೆಯಿಂದ ಜಾರಿ ಬಂದ ವಾಕ್ಯ ಪಂಕ್ತಿಯೆಂಬುದು ಸ್ಪಷ್ಟವಾಗಿದೆ. ಕಾವ್ಯದಲ್ಲಿ "ಚರಮೂರ್ತಿಯನ್ನಾಗಿ ಮಾಡಲು ಯಾವ ಶಬ್ದವು ಜೋಯಿಸರಿಗೆ ಸಹಾಯ ಮಾಡುತ್ತಿದೆಯೋ? ಹಾಗೆಯೆ ತರಳ! ಬಾಳು!! ಎಂಬ ಶಬ್ದದ್ವಂದ್ವವು ಯಾವ ಸಂಧಿ ಯಾವ ಪದ್ಯದಲ್ಲಿ ಹುಟ್ಟುತ್ತದೆಯೋ ? ಸ್ಪಷ್ಟಪಡಿಸಿದ್ದರೆ ಜೋಯಿಸರು ವರ್ಚಸ್ಸಿಗೆ ಒಳಗಾದವರಲ್ಲವೆಂದು ನಂಬ ಬಹುದಿತ್ತು. ಇದೆಂತಹ ಅಸಪ್ರವರ್ತನೆ! ಮೊದಲೇ ಪಂಗಡಗಳ ಅತ: ಕಲಹ! ಅದರಲ್ಲಿ ಜೋಯಿಸರ ಪುಳ್ಳಿಯ ಕೊಳ್ಳಿ! ಎಂದ ಮೇಲೆ ಇವರ ಬರೆಹದಿಂದ ಸಮಾಜಸಾಹಿತ್ಯಕ್ಕೆ ಎಷ್ಟು ಉಪಕಾರವಾದೀತೆಂಬುದನ್ನು ನಿಷ್ಪಕ್ಷಪಾತಿ ಪಂಡಿತರೇ ನಿರ್ಣಯಿಸಲಿ!

ವಾಚಕರು ಈ ಕಾವ್ಯದಲ್ಲಿ ಮೂಲಮರುಳಸಿದ್ಧರ ಬಗೆಗೆಂದು ಹೇಳಲಾಗಿರುವ ಅವರ ಜನನವೇ ಮೊದಲಾದ ಅಪಭ್ರಂಶ ವಿಷಯಗಳಿಗೆಲ್ಲ ಸಾವಿರ ಸಾರೆ ಧಿಕ್ಕಾರವಿತ್ತರೂ ಅದು ಅಲ್ಪವೆಂದು ಲೇಖಕನಾದ ಶಿವನ ಅಭಿಪ್ರಾಯ. ಕವಿಗಳೂ ಪಂಡಿತರೂ ಇತಿಹಾಸ ಕೋವಿದರೂ ವಿಮರ್ಶಕರೂ ಈ ಕಾವ್ಯದ ವಿಷಯದಲ್ಲಿ ದುಡುಕಿ ಸಾಹಿತ್ಯ ಪ್ರಪಂಚಕ್ಕೆ ತನ್ಮೂಲಕ ವೇದಾಗಮ ಮಾನ್ಯವೂ ಪವಿತ್ರವೂ ಆದ ವೀರಶೈವ ಸಂಸ್ಕೃತಿಗೆ ಅವಮಾನವನ್ನುಂಟುವುದು ಉತ್ತಮವಲ್ಲ.

ಬೆಳಗು ಪಂಚಾಚಾರ್ಯ ತತ್ವವೆ !
ಬೆಳಗು ಬಸವನ ಭಕ್ತಿ ತತ್ವವೆ ! !
ಬೆಳಗು ವಿರತರ ಶೂನ್ಯ ತತ್ವವೆ ! ಸರ್ವ ಸಮತೆಯೊಳು ||
ಬೆಳಗು ಜಂಗಮ–ವಂಶ ದೀಪವೆ !
ಬೆಳಗು ಭಕ್ತರ ವಂಶ ದೀಪವೆ ! !
ಬೆಳಗು ದ್ವೇಷಾಸೂಯೆ ಗಳಕಡು ಕತ್ತಲೆಯೆಕಳೆದು||

———

# ದೇವಕವಿಯ ಮರುಳಸಿದ್ಧ

ಲೇಖಕ:—ವೇ|| ಪುರಾಣಿಕ ಮಠದ ವಿರೂಪಾಕ್ಷ ಶಾಸ್ತ್ರಿಗಳು, ಹಿರೇಹಡಗಲಿ

ಈ ಕಲಿಯುಗದಲ್ಲಿ ನವಯುಗವು ಸಮಾವೇಶವಾಗಿ ಚಿತ್ರಮಯ ಜಗತ್ತೆನಿಸಿರುವದು. ನಮ್ಮೀವೀರಶೈವ ಧರ್ಮದಲ್ಲಿ ಐಕ್ಯತೆಯಿಲ್ಲದೆ ಒಕ್ಕಟ್ಟಿನಲ್ಲಿ ಇಕ್ಕಟ್ಟು ಇಕ್ಕಟ್ಟಿನಲ್ಲಿ ಮುಕ್ಕಟ್ಟುಗಳಾಗುತ್ತ ನಡೆದಿರುವ ವಿಷಮ ಸಮಯದಲ್ಲಿ ಬೇರೆ ಮತದವರೊಬ್ಬ ಅ. ನ. ಎಂಬ ಸಾಹಿತಿಗಳು ಮರುಳಸಿದ್ಧ ಕಾವ್ಯವನ್ನು ದೇವಕವಿ ರಚಿತವೆಂದು ಪ್ರಕಟನೆಗೊಳಿಸಿ ವೀರಶೈವ ಮತೀಯರಿಗೆಲ್ಲಾ ತುಂಬಾ ವಿಷಾದವನ್ನುಂಟುಮಾಡಿದ್ದಾರೆ.

ವೀರಶೈವ ಮತ ತತ್ವಗಳನ್ನು ಲಿಖಿಸುವದು ವೀರಶೈವ ಪಂಡಿತರಿಗೇ ಸಾಧ್ಯವಲ್ಲದೆ ವೀರಶೈವೇತರರಿಗೆ ಗೋಚರವಾಗದು. ಹೀಗಿದ್ದರೂ ಕೆಲವರು ವೀರಶೈವ ಮತದ ವಿಷಯವನ್ನು ಬರೆಯಲಿಕ್ಕೆ ಪ್ರಯತ್ನಿಸುವರು. ಅದರಲ್ಲಿಯ ನ್ಯೂನತೆಗಳನ್ನೆಚ್ಚರಿಸಲು ಹಿಂದಿಸಿಂದ ತಮ್ಮ ತಪ್ಪಿಗೆ ಒಪ್ಪಿಕೊಳ್ಳುವರು. ತಮ್ಮಲ್ಲಿ ವಿಷ್ಣುವಿನ ದಶಾವತಾರಗಳ ವಿವರ, ಪಾಂಡವ ವಿಚಾರ, ವೇದವ್ಯಾಸರ ವಿಷಯ ಮುಂತಾದವುಗಳನ್ನೂ ಮತ ತತ್ವಗಳನ್ನೂ ಚನ್ನಾಗಿ ಅರಿತುಕೊಳ್ಳುವದನ್ನು ಬದಿಗಿರಿಸಿ "ಯೇನಕೇನ ಪ್ರಕಾರೇಣ। ಪ್ರಸಿದ್ಧಃಪುರುಷೋಭವೇತ್ ॥ ಎಂಬಂತೆ ಅ. ನ. ಇವರು ಸ್ವಬುದ್ಧಿಯಿಂದಲೋ ಪರಪ್ರೇರಣೆಯಿಂದಲೋ ಪೂರ್ವಾಪರ ದೀರ್ಘಾಲೋಚನೆ ಮಾಡಿನೋಡದೆ—ಈ ಕಾವ್ಯವನ್ನು ಪ್ರಕಟಿಸಿದ್ದಾರೆ. ಇದರಿಂದ ಇವರಿಗೆ ದೊರೆತ ಬಹುಮಾನವೇನು—ತಮ್ಮ ಪ್ರಾವೀಣ್ಯವನ್ನು ಕಥೆ ಕಾದಂಬರಿಗಳಲ್ಲಿ ತೋರಿಸುವದೊಳಿತಾಗಿತ್ತು. ಧಾರವಾಡದ ಕನ್ನಡ ಸಾಹಿತ್ಯ ಮಂದಿರದವರಾದರೂ ಯೋಚಿಸದೆ ಮನೋಭೇದಕವಾದೀ ಕಾವ್ಯವನ್ನು ಪ್ರಸಿದ್ಧಗೊಳಿಸಿದುದು ಅನುಚಿತವು.

ವಾಚಕ ಮಹಾಶಯರೇ ಈ ಮರುಳಸಿದ್ಧ ಕಾವ್ಯವು ಮೂಲ ಪಂಚಾಚಾರ್ಯರಲ್ಲೊಬ್ಬರಾದ ಶ್ರೀ ಮದುಜ್ಜಯಿನಿ ಸದ್ಧರ್ಮಪೀಠದ ಜಗದ್ಗುರು ಮರುಳಸಿದ್ಧ ಶಿವಾಚಾರ್ಯರದಾಗಿರದೆ ಇತ್ತೀಚಿಗೆ ಇದೇ ಹೆಸರಿನ ಕೆಲವು ಮರುಳಸಿದ್ಧರ ಹೆಸರಿನವರ ಕೃತಿಗಳ ಚರಿತ್ರವಾಗಿರುತ್ತದೆ. ಅಸಮಂಜಸವಾದ ವಿಷಯಗಳನ್ನು ಬಲಾತ್ಕರವಾಗಿ ಎಳೆದುತಂದು ಮೂಲಾಚಾರ್ಯ

ರಾದ ಶ್ರೀ. ಮರುಳಸಿದ್ಧ ಶಿವಾಚಾರ್ಯರಿಗೆ ಸಂಬಧಿಸಿ ಬರೆದು ತಾವೇ ಹಿಗ್ಗಿ ಹಿಗ್ಗಿ ಪ್ರಕಟಿಸಿರುವುದು ಭೂಷಣವೆ!

ಅಸಂಬದ್ಧ ಪ್ರಲಾಪವಾಗಿರುವ ಈ ಕಾವ್ಯವನ್ನು ಕೆಲವು ತಜ್ಞರು ಚನ್ನಾಗಿ ವಿಮರ್ಶಿಸಿ ಇದು ದೇಶದಲ್ಲಿ ಪ್ರಸಿದ್ಧವಾದರೆ ಸದ್ಭಕ್ತರ ಮನಸ್ಸು ವಿಪರ್ಯಾಸಹೊಂದಬಹುದೆಂದು ಈ ಕಾವ್ಯದ ಖಂಡನೆಯನ್ನು ಬರೆದು ಈ ಕೆಳಗೆ ಕಾಣಿಸಿದಂತೆ ವಿಶದಪಡಿಸಿದ್ದಾರೆ. ಅವಲೋಕನಮಾಡುವದು.

(೧) ಬೆಂಗಳೂರ ಶರಣಸಾಹಿತ್ಯ ಮಾಸಪತ್ರಿಕೆಯು ೧೯೪೫ನೆ ನವಂಬರ ಸಂಚಿಕೆಯಲ್ಲಿ ಸಂಪಾದಕರಾದ ಶ್ರೀಮಾನ್ ಮೈಸೂರ ಆಸ್ಥಾನ ವಿದ್ವಾನ ಬಿ. ಶಿವಮೂರ್ತಿಶಾಸ್ತ್ರಿಗಳು "ಈ ಗ್ರಂಥಕರ್ತ ದೇವಕವಿಯು ಸನ್ ೧೫೮೭ ಮೇ ತಿಂಗಳಲ್ಲಿ ಇದನ್ನು ಮುಗಿಸಿದಂತೆ ಇದೆ. ಇದರ ಪದ್ಯದಲ್ಲಿ ಹೇರಳವಾಗಿ ವ್ಯಾಕರಣಛಂದಸ್ಸುಗಳ ದೋಷಗಳಿವೆ ಈ ಕವಿಯು ಕಲ್ಪಿಸಿರುವ ಕಥಾವಸ್ತುವು ರಮಣೀಯವಾಗಿಲ್ಲ ಶಿವಪುರಾಣಗಳಲ್ಲಿ ಸುಪ್ರಸಿದ್ಧನಾದ ಶಿಲಾದ ಮುನಿಯು ಸುಲಭಕೋಪನಾಗಿ ತನ್ನ ಧರ್ಮಪತ್ನಿ ಮತ್ತು ಶಿಷ್ಯ ಇಬ್ಬರನ್ನೂ ಒಟ್ಟಿಗೆ ಶಪಿಸಿ ಹೊಲೆಯರ ಜಾತಿಯಲ್ಲಿ— ಅದರಲ್ಲಿಯೂ— ಗಂಡಹೆಂಡರಾಗಿ ಹುಟ್ಟುವಂತೆ ನಿರೂಪಿಸಿದುದು ಅನೌಚಿತ್ಯವೇ ಅಲ್ಲದೆ ಧರ್ಮವೂ ಅನೀತಿಯೂ ಆಭಾಸವೂ ಆದುದು. ಮಹಾತ್ಮನಾದ ಶಿಲಾದಮುನಿಯನ್ನು ಇಂತಹ ಅವಿವೇಕಿಯಂತೆ ಚಿತ್ರಿಸಿರುವ ದೇವಕವಿಯೂ ಲೋಕಾನುಭವಿಯೆಂದಾಗಲಿ ಶಾಸ್ತ್ರಜ್ಞನೆಂದಾಗಲಿ, ನಾವು ಕರೆಯುವದೆಂತು—ಮತ್ತು ಈ ಕಾವ್ಯದಲ್ಲಿ ಮಹಾತ್ಮನಾದ ಮರುಳಸಿದ್ಧನ ಹಲವು ಪವಾಡವೆಲ್ಲಾ ಮುಗಿದ ಮೇಲೆ ಉಜ್ಜಯಿನಿಯ ವರ್ಣನೆಯನ್ನು ಇದೇ (೧) ಸಂಧಿಮಾಡಿ ಕಾವ್ಯ ಶಾಸ್ತ್ರದಲ್ಲಿ ತನಗಿರುವ ಅವಜ್ಞತೆಯನ್ನು ಸ್ಪಷ್ಟಪಡಿಸಿರುತ್ತಾನೆ. ಇತ್ಯಾದಿಕಾರಣಗಳಿಂದ ಈ ಕಾವ್ಯವು ಸಾಹಿತ್ಯದೃಷ್ಟಿಯಿಂದ ಅಷ್ಟೊಂದು ಗಣನಾರ್ಹವಲ್ಲನೆಂದು ನಾವು ಧೈರ್ಯದಿಂದ ಹೇಳಬಹುದಾಗಿದೆ" ಇತ್ಯಾದಿ ವಿಮರ್ಶೆಮಾಡಿ "ಕಡೆಗೆ ಎಲ್ಲಾ ವಿಷಯಗಳನ್ನು ಪರ್ಯಾಲೋಚಿಸಲಾಗಿ ದೇವಕವಿಯು ಮರುಳಸಿದ್ಧನು ಪಂಚಾಚಾರ್ಯರಲ್ಲಿ ಪರಿಗಣಿತನಾದ ಆಚಾರ್ಯ ಮರುಳಸಿದ್ಧ ಅಥವಾ ಮರುಳಾರಾಧ್ಯನೆಂದು ಸ್ಪಷ್ಟವಾಗಿ ಹೇಳಲು ಅವಕಾಶವಿಲ್ಲೆಂ"ದು ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾರೆ.

ಮೈಸೂರು ಪ್ರಾ|| ವಿ|| ರಾ|| ಬ|| ಆರ್. ನರಸಿಂಹಾಚಾರ್ಯರು ತಮ್ಮಿಂದ ಸಂಗ್ರಹೀತವಾದ "ಕರ್ನಾಟಕ ಕವಿಚರಿತೆ" ೩ ಸಂಪುಟಗಳಲ್ಲಿಯೂ ೧೨ ನೂರು ಕವಿಗಳ ಶೋಧ ತೋರಿಸಿದ್ದಾರೆ (೧) ಕ. ಕ. ಚರಿತೆ ಪಾನು ೩೧೪ರಲ್ಲಿ ದೇವಕವಿ ಎಂಬುವನು ಕುಸುಮಾವಳಿ ಕಾವ್ಯವನ್ನು ರಚಿಸಿದ್ದಾನೆಂದೂ (೨) ಅದೇ ಚರಿತ್ರೆಯಲ್ಲಿ ಪಾನು ೫೩೦ ರಲ್ಲಿ ಮರುಳಸಿದ್ಧನೆಂಬ ಕವಿಯು ಬಸವ ರಾಜನ ಪವಾಡಗಳನ್ನು ರಚಿಸಿದ್ದಾನೆಂದೂ ಮತ್ತು ಪಾನು ೩೧ ರಲ್ಲಿ ದೇವ ಕವಿಯು ಬತ್ತೀಸಪುತ್ಥಳಿ ಕಥೆ ಮುಂತಾದ ೬ ಗ್ರಂಥಗಳನ್ನು ರಚಿಸಿರುವ ನೆಂದೂ ಪಾನು ೩೭ ರಲ್ಲಿ ದೇವನೆಂಬ ಕವಿಯು ದೇವಾಂಗ ಪುರಾಣ ಬರೆ ದಂತೆಯೂ ಲಿಖಿಸಿದ್ದಾರೆ. ಮರುಳಸಿದ್ಧ ಕಾವ್ಯರಚನೆಯು ಉಲ್ಲೇಖವಿಲ್ಲ.

ಮಹಾನುಭಾವರಾದ ಶ್ರೀ ಜಗದ್ಗುರು ಮರುಳಸಿದ್ಧ ಮೂಲಾಚಾರ್ಯರ ವಿಷಯ ಪ್ರತಿಪಾದಿಸುವ ಆಧಾರಗ್ರಂಥಗಳನ್ನು ಇಲ್ಲಿ ಇನ್ನೊಂದು ಸಾರೆ ವಿವ ರಿಸಲಾಗುವದು.

೧ ವೀರಲಿಂಗೋಪನಿಷತ್
೨ ಸ್ವಾಯಂಭುವಾಗಮ
೩ ಸುಪ್ರಭೇದಾಗಮ
೪ ರೇಣುಕವಿಜಯ ( ಸಂಸ್ಕೃತ )
೫ ಶ್ರೀಕರಭಾಷ್ಯಾರಂಭದಲ್ಲಿ
೬ ವೀರಶೈವಾಚಾರ ಪ್ರದೀಪಿಕಾ
೭ ವೀ| ಕೌಸ್ತುಭ
೮ ವೀ| ಸದಾಚಾರ ಸಂಗ್ರಹ
೯ ವೀರಶೈವಾನ್ವಯ ಚಂದ್ರಿಕಾ
೧೦ ವೀರಶೈವಾಮೃತ ಪುರಾಣ
೧೧ ಚನ್ನಬಸವ ಪುರಾಣ.
೧೨ ಗಾಜುಂದ್ರಣ ಪುರಾಣ
೧೩ ರಾಜಶೇಖರ ವಿಳಾಸ
೧೪ ವಿವೇಕ ಚಿಂತಾಮಣಿ
೧೫ ಚತುರಾಚಾರ್ಯ ಪುರಾಣ—ಇತ್ಯಾದಿ—

———

# ಮರುಳಸಿದ್ಧ ಕಾವ್ಯದಲ್ಲಿಯ ಮರುಳಾಟಿಗಳು.

ಲೇಖಕರು:— ರುದ್ರಯ್ಯನವರು ಪಟ್ಟದಯ್ಯನವರು ಹಿರೇಮಠ
ಯರೆಹಂಚಿನಾಳು ( ಕೊಪ್ಪಳ )

ಈ ಮರುಳಸಿದ್ಧ ಕಾವ್ಯದ ಕರ್ತನು ದೇವಕವಿ ( ದೇಪಕವಿ )ಯು. ಇದರ ಸಂಪಾದಕರು ಅ. ನ. ಕೃಷ್ಣ ರಾಯರು

## ಈ ಮರುಳಸಿದ್ಧನ ಕಥಾ ವಿಚಾರ

## ೧ನೆಯ ಸಂಧಿ

ಮರುಳಸಿದ್ಧನೆಂಬಾತನು ವೀರಶೈವ ಮತದ ಮೂಲಾಚಾರ್ಯರಲ್ಲಿ ಒಬ್ಬ ಮಹಾತ್ಮನು ಆಗಿಹೋಗಿದ್ದಾನೆ. ಆತನೇ ಈ ದೇವಕವಿಯ ಮರುಳಸಿದ್ಧನೆಂದು ಸಂಪಾದಕರ ಮಿಥ್ಯಾ ವಿಶ್ವಾಸ. ಶಿವಾಗಮಗಳು ಮೂಲ ಮರುಳಸಿದ್ಧರನ್ನು ಶಿವಲಿಂಗ ಮುಖೋದ್ಭೂತನೆಂದು ಹೇಳುತ್ತಿರುವವು. ಮತ್ತು ವೀರಶೈವ ಮತಾಚಾರ್ಯರೆಲ್ಲರೂ ಭಕ್ತಿಯಿಂದಲೇ ಮುಕ್ತಿಯೆಂದು ಉಪದೇಶಿಸಿದ್ದರಿಂದ ಶ್ರೀಬಸವಣ್ಣನವರಾದರೂ ಭಕ್ತಿಯ ಪ್ರಶಂಸೆ ಮಾಡುವಾಗ

> ಲಿಂಗ ಮುಖದಲು ದಯವಾದ ಶರಣಂಗಲ್ಲದೆ, ಅಯ್ಯಾ ಕೂಡಲ ಸಂಗನ ಶರಣರ ಭಕ್ತಿ ಭಂಡಾರವು, ಎನಗೆಂತು ಸಾಧ್ಯವಪ್ಪುದು? ಹೇಳೆನ್ನ ತಂದೆ '' ಎಂದು ನುಡಿದಿರುವರು.

> ಮತ್ತು ಚನಬಸವಣ್ಣನವರು " ನಮ್ಮ ಕೂಡಲ ಚನ್ನ ಸಂಗಯ್ಯನೆಂಬ ಮಹಾದಾನಿ ಲಿಂಗದ ಇಚ್ಛಾವಾಸಿಯಾಗಿರ್ಪುದು ಆ ಮಹಾಲಿಂಗದಲುದ್ಭವಿಸಿದ ದಿವ್ಯಜ್ಞಾನಿಗಳಿಗಲ್ಲದೆ ಇತರರ್ಗೆ ಸಾಧ್ಯವೇ ? " ಎಂದಿರುವರು

> ಮತ್ತು " ಲಿಂಗದಿಂದ ಉದಯಿಸಿ ಅಂಗವಿಡಿದ ಪುರಾತನರ ಇಂಗಿತವನೇನೆಂಬೆನು. ಅವರ ನುಡಿಯೇ ವೇದ. ಅವರ ನಡೆಯೇ ಆಗಮ. ಲೋಕದ ಮಾನವರೆನಬಹುದೇ ? ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು, ಮರಳಿ ಆ ಪುರಾತನರು ಲಿಂಗದೊಳಗೆ ಬೆರಸಿದರು ನೋಡಿರಯ್ಯಾ! ಇಂತಪ್ಪಾ ಪುರಾತನರಿಗೆ ಶರಣೆಂದು ಹುಟ್ಟುಗೆಟ್ಟೆನಯ್ಯಾ ಚನ್ನಮಲ್ಲಿಕಾರ್ಜುನಾ ||

ಎಂದು ಅಕ್ಕ ಮಹಾದೇವಿಯವರು ನುಡಿದಿರುವರು. ಆದುದರಿಂದ ಮೂಲ ಶಿವಾಚಾರ್ಯರು ಶಿವಲಿಂಗದ ಸದ್ಯೋ ಜಾತಾದಿ ಮುಖಗಳಿಂದಲೇ ಉದಯಸಿದರೆಂದು ಆಸ್ತಿಕರ ಸತ್ಯ ವಿಶ್ವಾಸ.

ಇಲ್ಲವಾದರೆ ಶಿವಾಗಮಗಳವಧೆ, ಬಸವೇಶ ಚನ್ನಬಸವೇಶ ಅಕ್ಕ ಮಹಾದೇವಿಯರ ವಚನಗಳ ವಧೆ, ಸಂಭವಿಸುವದರಿಂದ ವಿಚಾರಿಗಳಾದ ಆಸ್ತಿಕರಿಗೆ ಪಾಪ ಭಯವು ಉಂಟಾಗದೆ ಇರದು.

ದೇವ (ದೇಪ)ನು ಮರುಳಸಿದ್ಧನ ಬಗ್ಗೆ ಒಂದು ವಿಚಿತ್ರ ಕಥೆಯನ್ನು ಕಲ್ಪಿಸಿದ್ದಾನೆ. ಶಿಲಾದನ ಸತಿಯೂ, ವೃಷಭೇಶನ ಮಾತೆಯೂ ಆದ ಸುಪ್ರಭೆಯು ಶಿವಪೂಜೆಗೆ ಕುಳಿತಾಗ ಹೊಲೆ(ರಜೋಧರ್ಮವು) ಉಂಟಾದು ದರಿಂದ ಅದನ್ನು ತಿಳಿದು ಶಿಲಾದನು "ನೀನು ಹೊಲೆ ಜನ್ಮದಲ್ಲಿ ಜನಿಸು ಅಂದರೆ ಬಾಚಿಗೌಡನ ಭೃತ್ಯ ಕುಲಹೀನನ ಹೊಟ್ಟೆಯಲ್ಲಿ ಜನಿಸು, ಕುಲ ವಿಲ್ಲದ ಅಚಲನೊಳು ಬಾಳು" ಎಂದು ಶಾಪ ಕೊಟ್ಟನು. ಸುಪ್ರಭೆಯು ಶಾಪ ವಿಮೋಚನೆಯನ್ನು ಕೇಳಿಕೊಳ್ಳಲು "ಹರನುಮೆಯ ಕಥನದಿಂದ ಬಲವಂತ ಜನಿಸುವನು"; ಇದೇ ನಿನಗೆ ಸದ್ಯಃಫಲವೆಂದು ನುಡಿದು, ಭೃತ್ಯನೆಂದೆ ನಿಪ ಒರ್ವ ಶಿಷ್ಯನು ಎತ್ತಿನ ಅಸ್ಥಿಗಳನ್ನು ಪುಷ್ಪವೆಂದು ತರಲು ಗುರುವು ಕೋಪಗೊಂಡು "ನೀನು ಮರ್ತ್ಯಕ್ಕೆ ಪೋಗಿ ಕೂಚಿಮಾರನೆಂಬ ಹೆಸರಿಂದ ಕಗ್ಗಲ್ಲ ಪ್ರಭು ಬಾಚಣ್ಣನ ಭೃತ್ಯನಾಗಿರು" ಎಂದು ಕಳುಹಿದನು. ಹೀಗೆ ಶಿಲಾದನು ನುಡಿಯಲು ಅವನ ಆಜ್ಞೆಯಂತೆ ಸುಪ್ರಭೆಯು ಆ ಪುರಕ್ಕೆ ಬಂದಳು. ಇದು ಮೊದಲನೆ ಸಂಧಿಯಸಾರ.

ಶಿವ ಪುರಾಣ, ಲಿಂಗಪುರಾಣಗಳಲ್ಲಿ ಶಿಲಾದನ ಕಥೆಯು ಇದೆ. ಅದ ರಲ್ಲಿ ಶಿಲಾದನಿಗೆ ಸುಪ್ರಭೆಯೆಂಬ ಸತಿಯು ಇದ್ದಳೆಂದು ಸರ್ವಜ್ಞರಾದ ವ್ಯಾಸ ಮಹರ್ಷಿಗಳು ಹೇಳಿರುವುದಿಲ್ಲ. ಶಿಲಾದನ ತಪಸ್ಸಿಗೆ ಮೆಚ್ಚಿ ಶಿವನು ಕೊಟ್ಟ ವರದಿಂದ ನಂದೀಶ್ವರನು ಯಜ್ಞಾಂಗಣದಲ್ಲಿ ಹುಟ್ಟಿ ಶಿಲಾದನಿಗೆ ಮಗನಾದ ನೆಂದು ಮಾತ್ರ ಹೇಳಿದ್ದಾರೆ. ಮತ್ತು "ಎಂದೊಡಾಗಲಿ ಯೆಂದು ಮನ್ಮತ ದಿಂದಯೋನಿಜನಾಗಿ ಯೊಗೆದಂ।ನಂದಿಕೇಶ್ವರನೆಂಬ ಪೆಸರಿಂದಲಿ ಶಿಲಾದಂಗೆ" ಎಂಬ ಭೀಮ ಕವಿಯ ಬಸವ ಪುರಾಣದ ಎರಡನೆಯ ಸಂಧಿಯ ಹತ್ತನೆಯ ಪದ್ಯದಿಂದಲೂ ಇದೇ ಅಭಿಪ್ರಾಯವೇ ಹೊರಡುತ್ತದೆ.

ನಿರಾಧಾರವಾದ ದೇವನ ಈ ಕಲ್ಪನೆಯನ್ನು ನಾವು ಒಪ್ಪಿದರೆ ವ್ಯಾಸ ಮಹರ್ಷಿಗಳು ಅಸತ್ಯ ವಾದಿಗಳೆಂದೂ, ಶಿವಪೂಜಾ ಸಮಯದಲ್ಲಿ ರಜಸ್ಸು ತೋರಿದರೂ ದೋಷವಿಲ್ಲೆಂಬ ಶಿವಧರ್ಮ ಶಾಸ್ತ್ರವನ್ನೂ ಮತ್ತು ಶಿವಪೂಜಾ ಪ್ರಭಾವವನ್ನೂ ಅರಿಯದೆ ಶಾಪಕೊಟ್ಟ ಶಿವಭಕ್ತನಾದ ಶಿಲಾದ ಮುನಿಯು

ಅಜ್ಞಾನಿಯೆಂದೂ, ಮತ್ತು ತನ್ನ ತಾಯಿಯನ್ನು ಪವಿತ್ರಳನ್ನಾಗಿ ಮಾಡಲು ಅಥವಾ ಶಿಲಾದನಿಗೆ ಶಿವಧರ್ಮ ಶಾಸ್ತ್ರವನ್ನು ಅರುಹಿ ಅಲ್ಲಿಯೇ ಶಾಪಮುಕ್ತಳನ್ನಾಗಿ ಮಾಡಲು ಶಿವಾವತಾರಿಯಾದ ವೃಷಭನಿಗೆ ಸಾಮರ್ಥ್ಯವಿರಲಿಲ್ಲವೆಂದೂ ಹೇಳಬೇಕಾಗುವದು. ಇವೆಲ್ಲ ಕಾರಣಗಳಿಂದ ಸುಪ್ರಭೆಯ ಕಥೆಯೇ ಕಲ್ಪಿತವೆಂದು ಸಿದ್ಧವಾಗುವುದರಿಂದ ತನ್ಮೂಲಕವಾದ ಈ ಮರುಳಸಿದ್ಧನ ಕಥೆಯಾದರೂ ನಿಜವಲ್ಲವೆಂದು ಸ್ಪಷ್ಟವಾಗುವುದು.

ಇಲ್ಲಿ ಅಸ್ಥಿಗಳನ್ನು ಪುಷ್ಪಗಳೆಂದು ತಂದಿಟ್ಟ ಶಿಷ್ಯನ ಕಥೆಯು ಮೊದಲಿನ ಯಾವ ಪುರಾಣಗಳಲ್ಲಿಯೂ ಕಂಡುಬರುವದಿಲ್ಲ. ಮತ್ತು ದೇಪನಾದರೂ ಈ ಶಿಷ್ಯನಿಗೆ "ಭೌತ್ಸ" ನೆಂಬ ಹೆಸರಿತ್ತೆಂದು ಬರೆದಿರುವದೂ ಇಲ್ಲ. ಆದರೂ ಸಂಪಾದಕರು ತಾವೇ ಒಂದನೆಯ ಸಂಧಿಯ ಕಥಾಸಾರದಲ್ಲಿ ಇವನಿಗೆ ಕೊಟ್ಟಿರುವ "ಭೌತ್ಸ" ನೆಂಬ ನಾಮವು ವಿವಿಧ ಸಂಶಯಗಳಿಗೆ ಕಾರಣವಾಗಿರುವುದು. ಈ ವಿಷಯದಲ್ಲಿ ವಾಚಕರು ತುಂಬಾ ದೃಷ್ಟಿಯನ್ನು ಹಾಕಲಿ. "ಭೌತ್ಸರ" ಗುರುವಿನ ನಾಮವನ್ನು ಮಾತ್ರ ಉಭಯರೂ ಎತ್ತಿರುವದಿಲ್ಲ; ಮತ್ತು ಸುಪ್ರಭೆಯು ಹೊಲೆ ಜಾತಿಯಲ್ಲಿ ಜನಿಸಿದ ಮೇಲೆ ಅವಳಿಗೆ ಬೇರೆ ಯಾವ ಹೆಸರನ್ನೂ ಕೊಟ್ಟಿರುವದಿಲ್ಲ.

## ೨ನೆಯ ಸಂಧಿ

ಭೃಂಗಿಯು ನಟನ ಸಮಯದಲ್ಲಿ ಶಿವಮಹಿಮೆಯನ್ನು ಹೊಗಳುತ್ತಾ ಮಾಯಾ ಕೋಲಾಹಲ ಮಾಯಾ ಮದತಿಮಿರಹರ ಎಂದು ಮುಂತಾಗಿ ಹೊಗಳಲು ಗಿರಿಜೆಗೆ ಕೋಪವು ಉಂಟಾಯಿತು. ಆಗ ಶಿವನು ಎಲ್ಲರನ್ನೂ ಕಳುಹಿ; 'ಗಿರಿಜೆ' ಭೃಂಗಿಯು ನಿರ್ಗುಣನು; ಅವನು ನಿನ್ನ ಬಗೆಯುತ್ತಾನೆಯೆ' ಎನ್ನಲು ಗಿರಿಜೆಯು 'ನನ್ನ ಗುಣದಿಂದಲೇ ನಿನಗೆ ದೈವತ್ವವು' ಎಂದಳು. ಶಿವನು ಕೋಪಗೊಂಡು ಕೊಲ್ಲಾಪುರದಲ್ಲಿ "ಕರಟಾ" ಸುರನ ಮಗಳಾಗಿ ಜನಿಸು; ನಿನ್ನ ನಾಸಿಕವನ್ನು ಕೊಯ್ದು ಕಾಕುಮಾಡುವನೆಂದು ಕಳುಹಲು ಕರಟಾಸುರನ ಪತ್ನಿಯಾದ ಮಾಯಾ ದೇವಿಯ ಉದರದಲ್ಲಿ ಜನಿಸಿ ಮಾಯೆಗೆ ಎದುರಾರುಂಟೆಂದು ದಿಕ್ಕುದಿಕ್ಕಿಗೆ ಕಹಳೆಯನ್ನು ಊದಿಸಲು ಶಿವನು ಕೇಳಿ ಒರ್ವ ಚರಮೂರ್ತಿಯನ್ನು ಕರೆದು"ನೀನು ಮರ್ತ್ಯದಲ್ಲಿ ಮರುಳಸಿದ್ಧೇಶನಾಗಿ ಜನಿಸಿ ಮಾಯೆಯನ್ನು ಗೆಲ್ಲು. ಗುರು ರೇವಣನ ರೂಪದಿಂದ ಬಂದು ವರ ನೀಯುತ್ತೇನೆ;" ಎಂದು ಕಳುಹಲು ಚರಮೂರ್ತಿಯು"ನರಲೋಕದ ಇರವು ಪುಣ್ಯಾ ಬೀಡು" ಎಂದು ಬಂದನು. ಇಲ್ಲಿಗೆ (೫೦) ಪದ್ಯಗಳ ಸಾರವಾಯಿತು.

ಇಲ್ಲಿ ಭೃಂಗಿಗೂ ಗಿರಿಜೆಗೂ ಕಲಹವಾದರೆ ಭೃಂಗಿಯಿಂದಲೇ ಮಾಯಾ ರೂಪಿಣಿಯಾದ ಗಿರಿಜೆಯ ಮೂಗನ್ನು ಕೊಯ್ಸಿ ಕಾಕುಮಾಡಿಸಬೇಕಾ ಗಿತ್ತು. ಸರ್ವಜ್ಞನಾದ ಶಿವನಿಗೆ ಇದು ಹೇಗೆ ತಿಳಿಯಲಿಲ್ಲ ?

ಚರಲಿಂಗ ಮೂರ್ತಿಯು ಮರುಳಸಿದ್ಧೇಶ ನಾಮದಿಂದ ಮರ್ತ್ಯ ಲೋಕದಲ್ಲಿ ಸುಪ್ರಭೆಯಂತೆ ಹೊಲೆ ಜಾತಿಯಲ್ಲಿ ಜನಿಸುವದಕ್ಕೆ ಯಾವ ಪಾಪವು ಕಾರಣವಾಯಿತು? ಅದನ್ನು ದೇಪನು ಉಲ್ಲೇಖಿಸಿರುವದಿಲ್ಲ. ನಿರ ಪರಾಧಿಯಾದ ಚರಲಿಂಗ ಮೂರ್ತಿಗೆ ಹೊಲೆ ಜಾತಿಯಲ್ಲಿ ಜನಿಸಲಿಕ್ಕೆ ಸರ್ವ ಜ್ಞನಾದ ಶಿವನು ಅಪ್ಪಣೆಕೊಡಿಸಿರಬಹುದೆ! ಇದನ್ನು ಸತ್ಯವೆಂದು ಒಪ್ಪಿದರೆ ನಾವೇ ಅಪರಾಧಿಗಳಾಗುವೆವು ಇದು ದೇಪನ ಅಪರಾಧವು. ಇರಲಿ.

ಹೀನಕುಲ (ಹೊಲಜಾತಿ) ಉತ್ತಮ ಕುಲವೆಂದು ವಿಭಾಗಿಸುತ್ತಿರುವ ಈ ದೇಪನ ಕಾವ್ಯವು 'ಜಾತಿ ಮತಗಳ ಗೊಂದಲಕ್ಕೆ ಬೇಸತ್ತವರೂ ಅಸ್ಪೃಶ್ಯ ತೆಯ ರಾಕ್ಷಸೀ ವರ್ತನಕ್ಕೆ ಸಿಡಿ ಮಿಡಿ ಗೊಂಡವರೂ ಆದ' ಸಂಪಾದಕರ ಮನಸ್ಸಿಗೆ ಏಕೆ ಅಂಟಿತೋ ತಿಳಿಯದಾಗಿದೆ. ಜಾಣರಾದ ವಾಚಕರೇ ತಿಳಿದು ಕೊಳ್ಳಲಿ.

'ನರಲೋಕದ ಇರವು ಪುಣ್ಯದ ಬೀಡು' ಎಂದು ಮರುಳಸಿದ್ಧನು ನರ ಲೋಕಕ್ಕೆ ಬಂದರೆ ಶಿವಲೋಕ ವಿಷ್ಣು ಲೋಕಗಳು ಪಾಪದ ಬೀಡೆ ? ಆ ಲೋಕದವರು ಪಾಪವನ್ನು ಕಳೆದುಕೊಳ್ಳಲಿಕ್ಕೆ ನರಲೋಕದಲ್ಲಿ ಅವತರಿಸು ವರೆ ? ನರಲೋಕವು ಪುಣ್ಯದ ಬೀಡಾಗಿದ್ದರೆ ಮರುಳಸಿದ್ಧನಿಗೆ ಸ್ಮರಿಸಿದಿ ಷ್ಟಾರ್ಥಸಿದ್ಧಿಯನ್ನು ಕೊಟ್ಟು ಈತನ ನರಜನ್ಮವನ್ನು ಪರಿಯುವದಕ್ಕೆ ಗುರು ರೇವಣಸಿದ್ಧನನ್ನು ಹಿಂದೆ ಕಳುಹಿಸಲಿಕ್ಕೆ ಕಾರಣವೇನಿತ್ತು ? ಮಾಯೆಯ ಮೂಗನ್ನು ಕೊಯ್ದು ಕಾಕು ಮಾಡುವವನನ್ನು ಉದ್ಧರಿಸಲು ಮತ್ತೊಬ್ಬನು ಬೇಕೆ? ಶಿವಸನ್ನಿಧಿಯಲ್ಲಿರುವ ಉಭಯರಿಗೂ ಸಾಮರ್ಥ್ಯವು ಸಮವಾಗಿಯೇ ಇರಬಹುದು. ಅಲ್ಲದೆ ಗುರು ರೇವಣನಾದರೂ ಭೂಲೋಕದಲ್ಲಿ ಬಂದರೆ ನರಜನ್ಮವನ್ನೇ ತಾಳಿರಬೇಕು. ಅಂದ ಮೇಲೆ ಈತನ ನರಜನ್ಮವನ್ನು ಪರಿ ಯುವದಕ್ಕೆ ಮತ್ತೊಬ್ಬನು ಹೇಗೆ ಬೇಕಾಯಿತು?

ಜಗತ್ತಿನ ಉದ್ಧಾರಕ್ಕಾಗಿ ಅವತರಿಸಿದವರ ಉದ್ಧಾರಕ್ಕೆ ಮತ್ತೊಬ್ಬನು ಬೇಕೆಂಬುವದು ಉಚಿತವಲ್ಲ. ಆದ್ದರಿಂದ ಶಿವಾಗಮಗಳನ್ನೂ ಮಹಾತ್ಮರಾದ ಬಸವಾದಿ ಶಿವಶರಣರ ವಚನಗಳನ್ನೂ ಒಪ್ಪಲೇಬೇಕು.

ಮರುಳಸಿದ್ಧನು ಹೊಲೆಜಾತಿಯಲ್ಲಿ ಜನಿಸಿದ್ದರಿಂದ ಅವನ ಉದ್ಧಾರಕ್ಕಾಗಿ ಗುರುರೇವಣನನ್ನು ಕಳುಪಬೇಕಾಯಿತೆಂದರೆ ಅಲ್ಲಿ ಜನಿಸುವದಕ್ಕೆ ಮರುಳಸಿದ್ಧನು ಯಾವ ಅಪರಾಧವನ್ನು ಮಾಡಿದ್ದನು? ಸುಪ್ರಭೆಯು ಗರ್ಭದಲ್ಲಿ ಮರುಳಸಿದ್ಧನು ಜನಿಸಿದನೆಂದು ಸ್ಪಷ್ಟವಾಗಿ ಹೇಳಿರುವದೇ ಇಲ್ಲ "ಸಹಸ್ರದಳ ಪದ್ಮದೊಳುದಿಸಿದನೆಂದು ದೇಪನು ಹೇಳಿದ್ದಾನೆ" ಧ್ಯಾನಾಸಕ್ತರಾದವರ ಮನದಲ್ಲಿ ದೇವರು ಮೂಡಿದರೆ ಅವನ ಉದ್ಧಾರಕ್ಕೆ ಮತ್ತೊಬ್ಬ ದೇವರ್‍ಏಕೆ? ಮುಂದೆ (೫೧)ನೆಯ ಪದ್ಯದಿಂದ ಶಿಲಾದನ ಸತಿಯೂ ವೃಷಭೇಶನ ಮಾತೆಯೂ ಆದ ಸುಪ್ರಭೆಯು ಕಗ್ಗಲ್ಲ ಪುರದೊಳಗೆ ಮಾದಿಗರ ಜನ್ಮವಾದರ್ಗೆ ಸತಿಯೆನಿಸಿರಲು ಭೇದವಿಲ್ಲದವರ ಮನದನುಭವದೊಳಿಂತು ವೇದಿಸುವೆ" ಎನುತ ಮರುಳಸಿದ್ಧನು ಜಜ್ಜುಗಂಫೆ ಬಾರಿದಂಡದೊಡನೆ ಬಂದು ಬಾಚಿಗೌಡನ ವರಸುಜಾತ ಕೂಚಿಮಾರನೊಳು ನುಡಿದನು. ಏನಂದರೆ ನಾವು ಶ್ರೀಗಿರಿಗೆ ಹೋಗಬೇಕಾಗಿದೆ, ನಮ್ಮ ಪಾದಗಳಿಗೆ ಪಾದುಕೆಗಳಾಗಬೇಕು ಬೇಗಮಾಡಿಕೊಡು. ಕೂಚಿಮಾರನು ತನ್ನ ಸತಿಯಳಿಗೆ ಈ ಸಂಗತಿಯನ್ನು ತಿಳುಹಿಸಲು ಅವಳು ಶಿವನ ಪಾದಗಳಿಗೆ ಪಶುಚರ್ಮವು ಯೋಗ್ಯವಲ್ಲೆಂದು ಭಕ್ತಿಯಿಂದ ತನ್ನ ಮೊಲೆಗಳನ್ನು ಕೊಯ್ದು ಕೊಡಲು ಅವುಗಳಿಂದ ಕೂಚಿಮಾರನು ಪಾದುಕೆಗಳನ್ನು ಸಿದ್ಧಪಡಿಸಿ ಮರುಳಸಿದ್ಧನಿಗೆ ಮೆಟ್ಟಿಸಲು ಅವನು ಮೆಚ್ಚಿ ಮಗನೆ ವರವ ಬೇಡೆನಲು ಅವರು ಮಕ್ಕಳಿಲ್ಲದ ಬಾಳು ಹಾಳು ಎನುತ ಮಗನನ್ನು ಬೇಡಿದನು. ಮರುಳಸಿದ್ಧನು ಮಕ್ಕಳಾದರೆ ನಿಮಗೆ ದುಃಖ ಮರಣಗಳಾಗುವವು ಎನಲು ಮರಣಬಂದರೂ ಬರಲಿ ನೀನೆಮಗೆ ಮಗನಾಗೆಂದರು. ಆಗಲೆಂದು ವರವ ಕೊಟ್ಟು ಹೋದನು.

ಸುಪ್ರಭೆಯು ಆಧಾರಾದಿ ಚಕ್ರಗಳನ್ನೇರಿ ಸಹಸ್ರದಳ ಪದ್ಮದೊಳು ನಿಂದಾಗ ಬಾಲೆಗೆ ಪ್ರಸನ್ನನಾಗಿ ಮನದ ಕೊನೆಯೊಳುದಿಸಿದನು. ಅವನನ್ನು ಸತ್ಪಥದೊಳಿರಿಸಿ ಶಾಪಮಂ ಕಳೆದುಕೊಂಡು ಶಿಲಾದನಲ್ಲಿಗೆ ಹೋದಳು. ಆಗವನು ಪುರಹರನ ಚರಣಮಂ ನೀಕಂಡೆ ಎನುತ ತರುಣಿಯಂ ಸಂತೈಸಿ ಮುನ್ನಿನಾವಾಸದೊಳಿರಿಸಿ ಶಿಖರಾಗ್ರದೊಳು ವರತಪದೊಳಿರುತಿರ್ದನು ಎಂದು (೬೬)ನೆಯ ಪದ್ಯದವರೆಗಿನ ಅಭಿಪ್ರಾಯವು.

ಇಲ್ಲಿ, ಹಿಂದೆ ಹೇಳಿದ ಕೂಗಿಮಾರನೆ ಕೂಚಿಮಾರನೊ ಬೇರೆಯೋ ಸ್ಪಷ್ಟವಾಗಿ ಹೇಳಿರುವದಿಲ್ಲ. ಉಭಯರಿಗೂ ಕಗ್ಗಲ್ಲಪುರ ಬಾಚಿಗೌಡನ ಭೃತ್ಯ

ಎಂದು ದೇಪನು ಬರೆದಿದ್ದಾನೆ. ಆದರೆ ಸಂಪಾದಕರು ಕಗ್ಗಲ್ಲ ಇದರ ಬದಲಾಗಿ ಕರುಗಲ್ಲ ಎಂದು ಮೂಲದಲ್ಲಿಲ್ಲದ ಶಬ್ದವನ್ನು ಹಾಕಿ ಕರುಗಲ್ಲೆಂಬ ಪಟ್ಟಣದೊಡೆಯ ಎಂದು ಬರೆದಿದ್ದಾರೆ. ಆದರೂ ಇವಳ ಪಿತನಾರೊ ಪತಿಯಾರೊ ತಿಳಿಯದಾಗಿದೆ. ಒಬ್ಬನೇ ಎಂದರೆ ಧರ್ಮಶಾಸ್ತ್ರಕ್ಕೂ ವ್ಯವಹಾರಕ್ಕೂ ವಿರೋಧವು ಸಂಭವಿಸುವದು. ಇರಲಿ.

## ೩ನೆಯ ಸಂಧಿ

೬೦ನೆಯ ಪದ್ಯದಲ್ಲಿಯ ಜನನವಷ್ಟದಳ ಕಮಲದೊಳಗೆ ಎಂಬ ಮತ್ತು ಮುಂದೆ (೬೫)ನೆಯ ಪದ್ಯದಲ್ಲಿಯ ಸಹಸ್ರದಳ ಪದ್ಮದೊಳು ನಿಂದಾಗ..........ಎಂಬ ೬೭ರಲ್ಲಿಯ "ಮನದ ಕೊನೆಯೊಳುದಿಸಿದನು" ಎಂಬ ದೇಪನ ವಾಕ್ಯಗಳಿಂದ ಮುರುಳಸಿದ್ಧನು ಸುಪ್ರಭೆಯ ಗರ್ಭದಲ್ಲಿ ಜನಿಸಿಲ್ಲವೆಂದು ಸ್ಪಷ್ಟವಾಗುವದು. ಅಥವಾ ಶ್ರೀ ವಿಷ್ಣುವು ದೇವಕೀ ಗರ್ಭದಲ್ಲಿ ಜನಿಸಿದನೆಂದರೆ ಮೂಲ ವಿಷ್ಣುವೇ ಜನಿಸಿದನೆಂದು ಹೇಳಲಿಕ್ಕಾಗುವದಿಲ್ಲ. ಅವನ ಅಂಶವು ಜನಿಸಿತೆಂದು ಹೇಳಬಹುದು. ಹಾಗೆ ಇಲ್ಲಿಯೂ ತಿಳಿಯಬೇಕು. ಹಾಗಾದರೆ ಸುಪ್ರಭೆ ಕೂಚಿಮಾರರಿಗೆ ಪುತ್ರವರವನ್ನು ಕೊಟ್ಟ ಮುರುಳಸಿದ್ಧನಿಗಿಂತ ಹೊಲೆಯ ಮುರುಳಸಿದ್ಧನು ಬೇರೆ ಎಂದು ಸ್ಪಷ್ಟವಾಯಿತು. ಇದರಿಂದ ಮಕ್ಕಳಿಲ್ಲದ ಹೊಲೆ ಜಾತಿಯ ದಂಪತಿಗಳು ಮುರುಳಸಿದ್ಧನ ಮಠದ ಮಹಾದ್ವಾರದ ಮುಂದೆ ಭಕ್ತಿಯಿಂದ ನಿತ್ಯ ಕಸತೆಗೆಯುತ್ತಿರಲು ಅವರ ಭಕ್ತಿಗೆ ಮೆಚ್ಚಿ ಅವರಿಗೆ ಪುತ್ರನುದಿಸುವಂತೆ ಮುರುಳಸಿದ್ಧನು ಅನುಗ್ರಹಿಸಿದನೆಂತಲೂ, ಉದಿಸಿದ ಮಗುವಿಗೆ ಅವರು ಮುರುಳಸಿದ್ಧನೆಂದು ಹೆಸರಿಟ್ಟರೆಂತಲೂ, ಅವನು ಮಹಾಪುರುಷನಾದನೆಂತಲೂ, ಆ ಉಜ್ಜಯನಿಯ ಪ್ರದೇಶದಲ್ಲಿ ಪ್ರಸಿದ್ಧವಾಗಿರುವ ಈ ಐತಿಹ್ಯವು ಸರಿಹೋಗುತ್ತದೆ.

ಮತ್ತು ಶಿಲಾದನ ಕಾಲದಲ್ಲಿ ಮುರುಳಸಿದ್ಧನಿದ್ದರೆ ಸಂಪಾದಕರು ಅದನ್ನೇ ಮುರುಳಸಿದ್ಧನ ಕಾಲವೆಂದು ಒಪ್ಪಬೇಕಾಗಿತ್ತು. ಹಾಗೆ ಮಾಡದೆ "ರೇವಣನ ಕಾಲ" ೧೧ನೆಯ ಶತಮಾನದಿಂದ (೧೦)ನೆಯ ಶತಮಾನದವರಿಗೂ ತೂಗಾಡುತ್ತದೆ. ಮುರುಳಸಿದ್ಧ ರೇವಣನ ಕಿರಿಯ ಸಮಕಾಲೀನೆಂದು ಸ್ವತಃಸಿದ್ಧವಾಗುತ್ತದೆ ಎಂದು ಪೀಠಿಕೆಯ (೧೦)ನೆ ಪುಟದಲ್ಲಿ ಬರೆದಿದ್ದಾರೆ. ಇದು ಬಾಲಕರಿಗೂ ಸಹ ಒಪ್ಪಿಗೆಯಾಗುವವಮಾತಲ್ಲ.

### ೪ನೆ ಸಂಧಿ

ಈ ಸಂಧಿಯ ಹತ್ತನೆಯ ಪದ್ಯದಲ್ಲಿ ಚತುರ್ದಿಕ್ಕಿಗಾಚಾರ್ಯರ್ ಕಲಶವ ನಿಕ್ಕಿ ಗುರು ಕಲಶವೊಂದು ನಡುಮಧ್ಯದೊಳು ಸ್ಥಾಪಿಸಿಯ.........ಎಂದು ದೇಪನು ಬರೆದಿರುವನು ಇಲ್ಲಿ ಗುರುವೆ ಮಧ್ಯ ಕಲಶಾಚಾರ್ಯನಾದನು. ಉಳಿದ ಚತುರ್ದಿಕ್ಕಿನ ಕಲಶಗಳಿಗಾಚಾರ್ಯರಾರು ? ಇವರಲ್ಲಿ ಮರುಳಸಿದ್ಧ ನಿರುವನೊ ಇಲ್ಲವೊ ? ಇರುವದಿಲ್ಲವೆಂದರೆ ದೇಪನು ಮತ್ತೊಬ್ಬ ಕಲಶಾ ಚಾರ್ಯನನ್ನು ಹೇಳಬೇಕಾಗಿತ್ತು. ಆ ನಾಲ್ವರಲ್ಲಿ ಮರುಳಸಿದ್ಧನೂ ಕಲಶಾ ಚಾರ್ಯನಾಗಿ ಇರುವನೆಂದರೆ ದೀಕ್ಷೆಯಾಗತಕ್ಕ ಮರುಳಸಿದ್ಧನಿಗಿಂತ ಕಲಶಾ ಚಾರ್ಯನಾದ ಮೂಲ ಮರುಳಸಿದ್ಧನು ಭಿನ್ನನೆಂದು ಸಂಪಾದಕರು ಸಹ ಒಪ್ಪಬೇಕಾಯಿತು. ಹೀಗಿದ್ದರೂ ಪೀಠಿಕೆಯ (೫೩) ನೆಯ ಪುಟದಲ್ಲಿ "ವೀರಶೈವಾಚಾರ್ಯ ಪಂಚಕರಲ್ಲಿ ಒಬ್ಬರಾದ ಮರುಳಸಿದ್ಧರ ಬಗ್ಗೆ ಇವನು ಅನೇಕ ವಿಷಯಗಳನ್ನು ಸಂಗ್ರಹಿಸಿದ್ದಾನೆ" ಎಂದೂ ಮೂಲಾಚಾರ್ಯನಾದ ಮರುಳಸಿದ್ಧನೇ ದೇಪನ ಮರುಳಸಿದ್ಧನೆಂದೂ ತೋರಿಸಿ ಮುಂದೆ"ಈ ಮರುಳ ಸಿದ್ಧನೇ ಆಚಾರ್ಯರಲ್ಲಿ ಒಬ್ಬರಾದ ಮರುಳಾರಾಧ್ಯರೊ ಅಲ್ಲವೊ ? ಎಂಬ ವಿಷಯ ತೊಡಕಿನದು. ಅದರ ಚರ್ಚೆ ಅನವಶ್ಯಕ ರೋಷ ಕೋಪಗಳಿಗೆ ಕಾರಣವಾಗುವದರಿಂದ ನಾವುಅದಕ್ಕೆ ಕೈಹಾಕುವದಿಲ್ಲ"ಎಂದು ಬರೆದಿರುವರು. ಯಾವದು ತೊಡಕಿನದೊ ಆದು ಚರ್ಚೆಗೆ ಆಸ್ಪದವೇ ಇರುತ್ತದೆ; ಯಾವದು ಚರ್ಚೆಗೆ ಆಸ್ಪದವೊ ಅದರ ಚರ್ಚೆ ಸಂಪಾದಕರಿಗೆ ಅವಶ್ಯ ಕರ್ತವ್ಯವಾಗು ವುದು. ಹೀಗಿದ್ದರೂ ವೀರಶೈವರ ಮನ ನೋಯಬಹುದೆಂಬುದನ್ನು ಗಮ ನಕ್ಕೆ ತರದೆ ತಾವು ತೋರಿಸಬೇಕಾದ ತಮ್ಮ ಅಭಿಪ್ರಾಯವನ್ನು ತೋರಿಸಿ ಇದರ ಚರ್ಚೆ ಅನವಶ್ಯಕ ರೋಷ ಕೋಪಗಳಿಗೆ ಕಾರಣವಾಗುವುದರಿಂದ ನಾವು ಅದಕ್ಕೆ ಕೈಹಾಕುವದಿಲ್ಲ ಎಂದಾಡುವ ಮಾತು ಉಚಿತವಲ್ಲ. ಹೀಗ್ಗಿ ದ್ದರೆ ವಿದ್ವಾಂಸರಾದ (?) ಅ. ನ. ಕೃಷ್ಣರಾಯರು ಇವರ ಸಂಪಾದಕತ್ವಕ್ಕೆ ಕೈ ಯನ್ನೇ ಹಾಕಬಾರದಾಗಿತ್ತು. ಇವರ ಕನ್ನಡ ಸಾಹಿತ್ಯ ನಿಪುಣತೆಯನ್ನರಿತ ನಮಗಂತೂ ಇವರ ಎರಡು ನಾಲಗೆಯ ಲೇಖವನ್ನು ನೋಡಿ ಹೇಯವೇ ಉಂಟಾಗಿದೆ- ಇಂಥವರ ಈ ತೆರನಾದ ಕಪಟ ಸಾಹಿತ್ಯ ನಿಪುಣತೆಯಿಂದ ಯಾವ ಜನತೆಗೂ ಕಲ್ಯಾಣವಾಗಲಾರದು.

### ೫ನೆಯ ಸಂಧಿ

ಐದನೆಯ ಸಂಧಿಯಲ್ಲಿ ಕಗ್ಗಲ್ಲಪುರದ ಕೇತನಹಳ್ಳಿ ಮಧ್ಯದೊಳು ಇರುವ ಸ್ಥಲವು ತನಗೆ ಹಿತಕರವೆಂದು ಪುರದೊಡೆಯರಲಿ ಕರೆದು ಅವರ ಕೈ

ಯೊಳು ಇಪ್ಪತ್ತುನಾಲ್ಕುಚೌಕದ ಧರೆಯಕೊಂಡು ಅವರಿಗೆ ಹಣವನಿತ್ತು ದ್ವಾಪರದ ಕಡೆ ಕಲಿಯುಗಾದಿಯಲ್ಲಿ ಮರುಳಸಿದ್ಧನು ಯೋಗದೊಳು ಸಾರ ಸೌಖ್ಯದ ಸಮರಸವನುಂಡು ತೇಗಿದನು. ಮತ್ತು ತನ್ನ ಪೂರ್ವದ ಚರಿತ್ರವನ್ನು ನೆನದು ವಿಶ್ವದೊಳಗೆ ತನಗೊಂದು ದೇಗುಲ ಬೇಕೆಂದು ಜಕ್ಕಣಾಚಾರ್ಯ ನನ್ನು ಕರೆಯಿಸಿ ಕಲಿಯುಗದಾದಿ ಪುಗುತಲಿದೆ. ಮುಕ್ಕಾಲು ಮೂರುಘಳಿಗೆ ದೇಗುಲವನ್ನು ನಿರ್ಮಿಸು ಎಂದು ಅಜ್ಞಾಪಿಸಲು ಅವನು ಹಾಗೆ ಮಾಡಿದ ನೆಂದು ದೇಪನು ಬರೆದಿದ್ದಾನೆ.

ಇಲ್ಲಿ, ಪುರದೊಡೆಯನೆ ಭಕ್ತಿಯಿಂದ ಭೂಮಿಯನ್ನು ದಾನಮಾಡಿದ ನೆಂದಿದ್ದರೆ. ಅನಂತ ಪವಾಡಗಳನ್ನು ಮೆರೆದು ಆರುಸಾವಿರ ವರ್ಷ ಜೀವಿಸಿದ ತನ್ನ ಮರುಳಸಿದ್ಧನಿಗೆ ದೇಪನು ಪೂಜ್ಯತೆಯನ್ನೂ ಗೌರವವನ್ನೂ ಕೊಟ್ಟಂತಾ ಗುತಿತ್ತು. ಹಣ ಕೊಟ್ಟು ತಾನೇ ಭೂಮಿಯನ್ನು ಕೊಂಡನೆಂದರೆ ಮರುಳ ಸಿದ್ಧನನ್ನು ಪರ್ವತದ ಶಿಖರ ಮೇಲೊಯ್ದು ಕೆಳಗೆ ದೂಡಿದಂತಾಯಿತು. ಆಪುರದೊಡೆಯನಾದರೂ ಬೇರೆಯಲ್ಲ; ಮರುಳಸಿದ್ಧನ ಪಾಲಕನಾದ ಬಾಚಣ ಗೌಡನೇ ಇದ್ದಾನೆ. ಮತ್ತು ಮರುಳಸಿದ್ಧನು ಜಕ್ಕಣಾಚಾರ್ಯನಿಂದ ದೇಗುಲ ವನ್ನು ಕಟ್ಟಿಸಿದನೆಂದರೆ ಕಲಿಯುಗದ ಆದಿಯಲ್ಲಿ ಜಕ್ಕಣಾಚಾರ್ಯನಿದ್ದನೇ! ಇದನ್ನು ದೇಪನು ವಿಚಾರವಿಲ್ಲದೆ ಬರೆದರೂ ಸಂಪಾದಕರು ದೇವನ ಅವಿ ಚಾರವನ್ನು ಮರೆಮಾಜುವದಕ್ಕೆ ಜಕ್ಕಣಾಚಾರ್ಯ ಐತಿಹಾಸಿಕ ವ್ಯಕ್ತಿಯಲ್ಲ ಎಂದು ಬರೆದಿದ್ದಾರೆ. ಇದರಿಂದ ದೇವನ ಅವಿಚಾರ ಮುಚ್ಚುವುದೆ? ಜಕ್ಕಣಾಚಾರ್ಯನು ಐತಿಹಾಸಿಕ ವ್ಯಕ್ತಿ ಎಂಬುದನ್ನು ಎಲ್ಲರೂ ಬಲ್ಲರು.

ಇವನು ಕ್ರಿ. ಶ. ೧೧೧೭ರಲ್ಲಿದ್ದ ಹೊಯ್ಸಳ ಯಾದವ ಅರಸು ವಿಷ್ಣು ವರ್ಧನಕಾಲದಲ್ಲಿ ದೇವಾಲಯಗಳ ಮಹಾತ್ಕಾರ್ಯಗಳನ್ನು ಮಾಡಿ ಐತಿ ಹಾಸಿಕ ಪುರುಷನೆಂದು ಪ್ರಸಿದ್ಧನಾಗಿದ್ದಾನೆ.

## ೭ನೆಯ ಸಂಧಿ

ಈ ಸಂಧಿಯ ( ೮೩ ) ನೆಯ ಪದ್ಯದಲ್ಲಿ "ಮರುಳಸಿದ್ಧೇಶ ಚರಿತವು ನಾಲ್ಕು ಯುಗಕ್ಕೆ ಇದೇ ಆದಿ; ಇದನ್ನು ಚಾರ್ವಾಕರು ನೂತನವೆನ್ನಲು ನಾಯಕ ನರಕ ತಪ್ಪದು" ಎಂದು ದೇಪನು ನುಡಿದಿರುವನು. ಇದು ನಾಲ್ಕು ಯುಗಕ್ಕೂ ಆದಿಯು ಹೇಗೆ? ಕಾರಣವೇನು? ಇದನ್ನು ನೂತನವೆನ್ನುವ ರೆಂಬ ಸಂಶಯವು ಈ ಕಾವ್ಯ ಕರ್ತನ ಮನದಲ್ಲಿ ಏಕೆ ಮೂಡಿತು? ಇದು

ಪುರಾತನವೇ? ಪುರಾತನವಾಗಿದ್ದರೆ ಹೀಗೆ ಬರೆಯುವ ಪ್ರಸಂಗವೇ ಇದ್ದಿಲ್ಲ. ಈ ಚರಿತ್ರವು ಸತ್ಯವಾಗಿದ್ದರೆ ಮತ್ತು ಪುರಾತನವಾಗಿದ್ದರೆ ದೇಪನಿಗಿಂತ ಪೂರ್ವದ ಕವಿಗಳು ಕಾವ್ಯ ರೂಪದಿಂದ ಬರೆಯದೆ ಬಿಡುತ್ತಿರಲಿಲ್ಲ. ದೇಪನ ಈ ಕಾವ್ಯವಾದರೂ ನಿರ್ದಿಷ್ಟ ಕಾಲದಲ್ಲಿ ರಚಿತವಾಗಿದ್ದರೆ ದೇವನ ತರುವಾಯದ ಕವಿಗಳು ದೇಪನ ಹೆಸರನ್ನಾಗಲಿ ದೇಪನ ಈ ಕಾವ್ಯದ ಹೆಸರನ್ನಾಗಲಿ ತಕ್ಕೊಳ್ಳದೆ ಬಿಡುತ್ತಿರಲಿಲ್ಲ. ಯಾವುದೋ ಒಂದು ಕಾರಣದಿಂದ ಮರುಳ ಸಿದ್ಧನನ್ನೇ ಗುರಿಯಾಗಿ ಇಟ್ಟುಕೊಂಡು ಬರೆದ ಈ ಕಲ್ಪಿತ ಕಥೆಯನ್ನು ಯಾರು ಒಪ್ಪುವರು? ನರಕ; ಭಯವನ್ನು ತೋರಿಸಿದರೆ ಈ ಕಾವ್ಯ ಪುರಾತನ ವಾಗುವುದೆ?ಚಾರ್ವಾಕರು ನೂತನವೆಂದರೆ ಅವರಿಗೆ ನರಕ;ಚಾರ್ವಾಕಲ್ಲದವರು ನೂತನವೆಂದರೆ ಅವರಿಗೆ ನರಕವಿಲ್ಲ. ಎಂದ ಮೇಲೆ ನಮಗೇನು ಭಯ?

## ಈ ಕಾವ್ಯ ವಿಚಾರ

ಈ ಕಾವ್ಯವು ಕಾವ್ಯ ಪದಕ್ಕು ಸಹ ಅರ್ಹವಲ್ಲೆಂದು ಹೇಳಬೇಕು. ಇದ ರಲ್ಲಿ ರಸ ಭರಿತ ವಾಕ್ಯಗಳೂ ಇಲ್ಲ, ಕೌಶಲ್ಯವೂ ಕಂಡುಬರುವದಿಲ್ಲ, ಮತು ಔಚಿತ್ಯವೂ ಇರುವದಿಲ್ಲ. ಎಲ್ಲಾ ಪದ್ಯಗಳಲ್ಲಿ ಪ್ರಾಸಗಳಿವೆಯೆಂದು ಹೇಳ ಲಿಕ್ಕೂ ಆಗುವದಿಲ್ಲ. ಮೊದಲನೆಯ ಸಂಧಿಯ ೧—೨—೩—೪ ನೆಯ ಪದ್ಯಗಳನ್ನು ನೋಡಿದರೆ ಸಾಕು. ಪುನರುಕ್ತಿಗಂತೂ ಇದು ತವರ್ಮನೆ. ೫ನೆಯ ಪದ್ಯದಲ್ಲಿ "ಕಾಲುಚರಣಕ್ಕೆ ಶರಣು ಶರಣು" ಎಂಬ ಪ್ರಯೋಗ ವನ್ನು ನೋಡಬಹುದು, ಈ ಸ್ವಭಾವವು ಸಂಪಾದಕರಿಗೂ ಉಂಟು. ಮುನ್ನು ಡಿಯ (೧) ನೆಯ ಪುಟದಲ್ಲಿ ನಾಲ್ಕು ಜನ ವಿದ್ವಾಂಸರಲ್ಲಿ ಉಳಿಯಬೇಕಾದ ಮಾತು ಜನಜೀವನದಲ್ಲಿ ಹರಡಿ ಅನವಶ್ಯಕವಾದ ರೋಷ ಕೋಪಗಳಿಗೆ ಕಾರಣವಾಗುತ್ತದೆ ಎಂದೂ, ಮತ್ತು ಪೀಠಿಕೆಯ ( ೫೩ ) ನೆಯ ಪುಟದಲ್ಲಿ ಇದರ ಚರ್ಚೆ ಅನವಶ್ಯಕ ರೋಷ ಕೋಪಗಳಿಗೆ ಮೂಲವಾಗುವದರಿಂದ ನಾವು ಅದಕ್ಕೆ ಕೈಹಾಕುವದಿಲ್ಲ ಎಂದೂ ಬರೆದಿದ್ದಾರೆ. ಇಲ್ಲಿ ಕಾಲುಚರಣ ಶಬ್ದಗಳು ಒಂದೇ ಅರ್ಥವನ್ನು ಕೊಡುವಂತೆ ರೋಷ ಕೋಪ ಶಬ್ದಗಳಾ ದರೂ ಒಂದೇ ಅರ್ಥವನ್ನು ಕೊಡುತ್ತವೆ. ಆದರೆ ರೋಷ ಮತ್ತು ಕೋಪ ಶಬ್ದಗಳು ಸಂಸ್ಕೃತ; ದೇವನ ಪ್ರಯೋಗದಲ್ಲಿ ಕಾಲು ಕನ್ನಡ, ಚರಣ ಸಂಸ್ಕೃತ; ಇಷ್ಟೇ ಭೇದ.

## ಈ ಕವಿಯ ವಿಚಾರ

ಈ ದೇಪ ಕವಿಯು ಪಂಡಿತನಲ್ಲವೆಂದು ನಾವು ಬೇರೆ ಹೇಳುವ ಕಾರಣ ವಿಲ್ಲ, ಸಂಪಾದಕರು ಸ್ವತಃ ದೇಪ ಪಂಡಿತ ಕವಿ ಎಂದು ಒಪ್ಪುವದು ಕಷ್ಟ, ವ್ಯಾಕರಣ ಛಂಧಸ್ಸುಗಳಲ್ಲಿ ಅವನ ಪ್ರಾವೀಣ್ಯ ಪೊಟಕಿ, ಶಿವಸ್ತುತಿ ರೂಪ ವಾದ ಹಲವು ಪದ್ಯಗಳಲ್ಲಿ ಯಾವುದೂ ಮನಸ್ಸು ಮುಟ್ಟುವದಿಲ್ಲ. ಹರಿ ಹರನ ಉತ್ಕಟ ಭಕ್ತಿಯನ್ನು ಕಂಡು ಅವನರಗಳೆಗಳ ರಸಗಂಗೆಯಲ್ಲಿ ಮಿಂದ ವರಿಗೆ ದೇಪನ ತುಷ್ಕ ವರ್ಣನೆಗಳು ನೀರಸವಾಗಿ ಕಾಣುವದರಲ್ಲಿ ಸಂದೇಹ ವಿಲ್ಲ ಎಂದು ತಾವೇ ಬರೆದಿದ್ದಾರೆ.

ಮತ್ತು ಈ ದೇಪನು ತನ್ನ ಪಂಥವನ್ನು ಹೇಳಿಕೊಂಡಿರುವುದೇ ಇಲ್ಲ. ಆದ್ದರಿಂದ ಇವನು ಯಾವ ಜಾತಿಯವನೆಂದು ನಿರ್ಧರಿಸಲಿಕ್ಕೆ ಬರುವಂತೆಯೇ ಇಲ್ಲ. ಮೊದಲನೆಯ ಸಂಧಿ ಪದ್ಯ ( ೩೯ )ರಲ್ಲಿ ಶಿಲಾದನಿಗೆ " ಶಿಲಾಧರ " ನೆಂದೂ ಕಲ್ಲುಧರಿಸಿದವನೆಂದೂ ಮತ್ತು ( ೬ )ನೆಯ ಸಂಧಿ ಪದ್ಯ ( ೧೮ )ರಲ್ಲಿ ಹನಮಂತನಿಗೆ " ಅವಿರಳ ಪರಬ್ರಹ್ಮನೆಂಬ ಹನುಮಂತನು " ಎಂದೂ ಪ್ರಯೋಗಿಸಿರುವುದರಿಂದ ಇವನು ವೀರಶೈವನಲ್ಲ ವೆಂದು ಸಹಜವಾಗಿಯೇ ತಿಳಿದು ಬರುತ್ತದೆ. ವೀರಶೈವನು ಪರಶಿವನಿಗೆ ಪರಬ್ರಹ್ಮನೆನ್ನುವನಲ್ಲದೆ ಉಳಿದವರಿಗೆ ಅನ್ನಲಾರನು.

## ಇದರ ಸಂಪಾದಕರ ವಿಚಾರ

ವೈಷ್ಣವರಾದ ನವಿನುಡಿಯ ಈ ಸಂಪಾದಕರು ಮುನ್ನುಡಿಯಲ್ಲಿ ಪ್ರತಿ ಯೊಂದು ಹೆಜ್ಜೆಗೂ ಹತ್ತುವ ಜಾತಿ ದ್ವೇಷದ ಕಲಂಕವನ್ನು ಸ್ವಾರ್ಥಸಾಧ ನೆಯ ಆರೋಪವನ್ನೂ ಎದುರಿಸಿಕೊಂಡೇ ನಾವು ದುಡಿಯ ಬೇಕಾಗಿದೆ. ಎಂದು ಬರೆಯುವದಕ್ಕಿಂತ ಶೈವರಿಗೂ ವೈಷ್ಣವರಿಗೂ ಬಹುಕಾಲದಿಂದ ಸಹಜವಾಗಿ ಬಂದಿರುವ ಪ್ರಸಿದ್ಧವಾದ ಜಾತಿ ದ್ವೇಷವನ್ನೂ ಪುಸ್ತಕ ವಿಕ್ರಯ ದಿಂದ ಬರುವ ಸತ್ಯವಾದ ಸ್ವಾರ್ಥ ಸಾಧನೆಯನ್ನೂ ಎದುರಿಸಿಕೊಂಡೇ ನಾವು ದುಡಿಯಬೇಕಾಗಿದೆ ಎಂದು ಬರೆದಿದ್ದರೆ ಸರ್ವರಿಗೂ ವಿಶ್ವಾಸವು ಉಂಟಾಗು ತ್ತಿತ್ತು. ಸತ್ಯವಾದುದನ್ನು ಆರೋಪ ಎಂದರೆ ಯಾರೂ ಒಪ್ಪಲಾರರು. ಈ ಮುನ್ನುಡಿಯಲ್ಲಿಯೇ ಮರುಳಸಿದ್ಧನ ಬಗ್ಗೆ ಈವರೆಗೆ ದೊರೆತಿರುವ ಈ ಒಂದ ಮಾತ್ರ ಗ್ರಂಥಹೊರಬಿದ್ದರೆ ಸಂಶೋಧಕರಿಗೆ ನೆರವಾಗಬಹುದೆಂದು ನಾವು ಈ ಕೆಲಸಕ್ಕೆ ಕೈ ಹಾಕಿರುವುದು ಎಂದಿರುವದನ್ನು ವಿಚಾರಿಸಿದರೆ ಈ

ಏಕ ಮಾತ್ರ ಗ್ರಂಥವೇ ಸಂಪಾದಕರ ಅಪೇಕ್ಷೆಯನ್ನು ಸ್ವಲ್ಪಮಟ್ಟಿಗಾದರೂ ಶಾಂತಮಾಡುತ್ತದೆಂದಂತಾಯಿತು. ಇದರಿಂದ ಶಿವಾಗಮಗಳೂ ಬಸವಾದಿ ಶಿವಶರಣರ ವಚನಗಳೂ ಅಪ್ರಾಮಾಣ್ಯವೇ ಆದವು. ಎಂದ ಮೇಲೆ ಈ ಗ್ರಂಥವು ದೇವನ ಪಕ್ಷಪಾತಿಗಳಿಗೆ ಮಾತ್ರ ನೆರವಾಗಬಹುದು.

ಈ ಕಾವ್ಯ ಕಥೆಯು ಸತ್ಯವಾದುದಾದರೆ ಪೀಠಿಕೆಯ ಪುಟ ( ೫೪ )ರಲ್ಲಿ ಹೊಲೆಯರ ಹೊಟ್ಟೆಯಲ್ಲಿ ಮರುಳಸಿದ್ಧ ಹುಟ್ಟಿದ ಎಂದು ನೇರವಾಗಿ ಹೇಳದೆ ಮುನಿವೃತ್ತಾಂತವನ್ನು ಕಲ್ಪಿಸಿ ಆ ಮೂಲಕ ಪವಿತ್ರತೆಯನ್ನು ಕಲ್ಪಿಸಲು ಕವಿ ಯತ್ನಿಸಿದ್ದಾನೆಂದು ಏಕೆ ಬರೆದರು? ಇದರಿಂದ ಮುನಿ ವೃತ್ತಾಂತವೂ ಕಲ್ಪಿತ, ತನ್ಮೂಲಕವಾದ ಮರುಳಸಿದ್ಧನ ವೃತ್ತಾಂತವೂ ಕಲ್ಪಿತವೆಂದು ಸಿದ್ಧವಾಗು ವದು. ಎಂದ ಮೇಲೆ ಪವಿತ್ರತೆಯ ಕಲ್ಪನೆಗೆ ಸತ್ಯವಾದ ಸ್ಥಾನವಾವುದು? ಮತ್ತು ಈ ಕಲ್ಪಿತ ವೃತ್ತಾಂತದಲ್ಲಿರುವ ಐತಿಹಾಸಿಕ ದೃಷ್ಟಿಯ ಸತ್ಯತೆಯಾ ದರೂ ಯಾವದು?ಬೇಕಾದುದು ಹೇಗೆಯೇ ಇರಲಿಅದು ಬಲ್ಲವೇ ಆಗುವದು.

ಮುಂದೆ, "ಜಾತಿ ಮತಗಳ ಗೋಂದಲಕ್ಕೆ ಬೇಸತ್ತವರೂ ಅಸ್ಪೃಶ್ಯತೆಯ ರಾಕ್ಷಸೀ ವರ್ತನಕ್ಕೆ ಸಿಡಿಮಿಡಿಗೊಂಡವರೂ ಆದ ನಮಗೆ ಈ ಕಾವ್ಯದ ಘೋರಣೆ ಮನಸ್ಸಿಗೆ ಬಂದು ಅದರ ಕೆಲಸವನ್ನು ಕೈಕೊಳ್ಳಲು ಪ್ರೇರಿಸಿತು." ಎನ್ನುವ ಸಂಪಾದಕರು ಈ ಒಳಗೆ ಅಸ್ಪೃಶ್ಯರ ಕೂಡ ಯಾವ ಸಂಬಂಧ ವಿಟ್ಟುಕೊಂಡಿದ್ದಾರೆ ? ನುಡಿಯು ನಡೆಯಲ್ಲಿ ಬಂದಿದೆಯೇ ?

ಸಂಪಾದಕರು ಕಾಲನಿರ್ಣಯವನ್ನೆತ್ತಿಕೊಂಡು ೬ನೆಯ ಪದದಲ್ಲಿ ಕ್ರಿ. ಶ. ೧೧೬೭ ರಲ್ಲಿ ಹುಟ್ಟಿದ ಶಿರಿವಾಳ ಶಾಸನವನ್ನು ಉಲ್ಲೇಖಿಸಿ ಅಲ್ಲಮ ಪ್ರಭು ದೇವರ ಶಿಷ್ಯ ನಿರ್ಲಜ್ಜ ಶಾಂತಯ್ಯನೆಂಬ ದೇಶಿಕೇಂದ್ರನ ಶಿಷ್ಯ ಜಂಗಮ ಗಲ ಮಂಟಪದ ರೇವಣಸಿದ್ಧೇಶ್ವರನು ಶಿವಶರಣರಿಗೆ ಸ್ವಾನುಭವ ಮಂತ್ರ ವನ್ನು ಬೋಧಿಸಿದನು. ಎಂದರೆ ರೇವಣಸಿದ್ಧನು ಅಲ್ಲಮ ಪ್ರಭು ದೇವರ ಶಿಷ್ಯ ಪರಂಪರೆಗೆ ಸೇರಿದವನೆಂಬ ಅಭಿಪ್ರಾಯವನ್ನು ತೋರಿಸಿದ್ದಾರೆ. ಇಲ್ಲಿ ಪ್ರಿಯಮಿತ್ರರು ಬಸವಾದಿ ಶಿವಶರಣರಿಗಿಂತ ಮೊದಲಿನವರಾದ ನಿಜಗುಣ ಶಿವ ಯೋಗಿಗಳ ವಿವೇಕ ಚಿಂತಾಮಣಿಯಲ್ಲಿ ಉಕ್ತವಾದ ದೀಕ್ಷಾ ಕ್ರಮವನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕಾಗಿತ್ತು. ಅದರಲ್ಲಿ " ಪರಶಿವ ಸಂಜ್ಞಿತನಾಗಿ ಕುಳ್ಳಿರ್ದಾಚಾರ್ಯನ ಮಧ್ಯ ಕಲಶವನುಳಿದು| ಪೂರ್ವಾದಿ ನಾಲ್ಕು ಕಲ ಶಂಗಳನೇ ಕ್ರಮದಿಂ|| ರೇವಣಸಿದ್ಧ, ಮರುಳಸಿದ್ಧ, ರಾಮದೇವ, ಪಂಡಿತಾ

ರಾದ್ಯರೆಂಬಾಚಾರ್ಯರ ಸಾಂಪ್ರದಾಯಿಕರಾದ ....... ಋತ್ವಿಕ್ಕುಗಳೆಂ........ .. ಶ್ರೀಮತ್ಪಂಚಾಕ್ಷರ ಪೂರ್ವಕವಾಗಿ ಭಜಿಸುತ್ತ" ಎಂದು ಬರೆದಿದ್ದಾರೆ. ಇದರಿಂದ ಬಸವಾದಿ ಶರಣರ ಸಮಯದಲ್ಲಿದ್ದ ಅಲ್ಲಮ ಪ್ರಭು ದೇವನ ಕಾಲದಲ್ಲಿ ಮೂಲ ರೇವಣಸಿದ್ಧನು ಇದ್ದಿಲ್ಲವೆಂತಲೂ ನಿರ್ಲಜ್ಜ ಶಾಂತಯ್ಯಾದಿಗಳ ಶಿಷ್ಯ ಚಂಗಣಗಳ ಮಂಟಪದ ರೇವಣಸಿದ್ಧನಿಗಿಂತ ಭಿನ್ನನೆಂತಲೂ ಸಿದ್ಧವಾಗುವುದು.

ಮತ್ತು ಚಿತ್ರದುರ್ಗದ ಶ್ರೀ ಹುಲ್ಲೂರ ಶ್ರೀನಿವಾಸ ಜೋಯಿಸರ ಅಭಿಪ್ರಾಯವನ್ನು ವಿಚಾರಿಸಿದರೆ ರೇವಣಸಿದ್ಧರು ಕ್ರಿ. ಶ. ೧೧೦೦ ರಲ್ಲಿ ಜನಿಸಿ (೨೫) ವರ್ಷಗಳವರೆಗೂ ವಿದ್ಯಾಭ್ಯಾಸ ಪೂರೈಸಿಕೊಂಡು ಅಗಸ್ತ್ಯರೊಡನೆ ಗೋಷ್ಠಿ ನಡೆಸಿದರೆಂದು ತಿಳಿದು ಬರುತ್ತದೆ. ಇದನ್ನು ನಮ್ಮ ಮನವು ಒಪ್ಪಲಾರದು. ಶ್ರೀ ರಾಮಚಂದ್ರನ ಕಾಲದಲ್ಲಿದ್ದ ಅಗಸ್ತ್ಯನು ಕ್ರಿ. ಶ. ೧೧೦೦ ರಲ್ಲಿದ್ದನೆಂದರೆ ಯಾರೂ ಒಪ್ಪಲಾರರು. ಆ ಕುಂಭಸಂಭವನಾದ ಅಗಸ್ತ್ಯನಿಗೂ ರೇವಣಸಿದ್ಧನಿಗೂ ಗಂಟುಹಾಕಿರುವುದಾದರೂ ಯೋಗ್ಯವಲ್ಲ. ಆ ಅಗಸ್ತ್ಯ ಮುನಿಗೆ ಶ್ರೀ ರೇಣುಕನು ಷಟ್ಸ್ಥಲ ಶಾಸ್ತ್ರವನ್ನು ಬೋಧಿಸಿದನೆಂದು ಸಿದ್ಧಾಂತ ಶಿಖಾಮಣಿ ಗ್ರಂಥದಿಂದ ಮಾತ್ರ ಗೊತ್ತಾಗುತ್ತದೆ. ಅದುದರಿಂದ ರೇಣುಕನು ಬೇರೆ ರೇವಣಸಿದ್ಧನು ಬೇರೆ ಎಂಬುದನ್ನು "ರೇಣುಕೋ ರೇವಣೋ ರುದ್ರೋ ಮುನಿಸಿದ್ಧೋ ಮಹೇಶ್ವರಃ" ಎಂದು ಆಚಾರ್ಯರ ವಂಶವನ್ನು ಹೇಳುವ ಶ್ರೀಮರಿ ತೋಂಟದಾರ್ಯರ ವೀರಶೈವಾನಂದ ಚಂದ್ರಿಕೆಯಿಂದ ಅರಿಯಬಹುದು.

## ಇನ್ನು ಉಪಸಂಹಾರ

ಆ. ನ ಕೃಷ್ಣರಾಯರು ಸಂಪಾದಕತ್ವವನ್ನು ವಹಿಸುವಕ್ಕಿಂತ ಮೊದಲು ಗಮನಕ್ಕೆ ಬರಬೇಕಾಗಿದ್ದ ಕೆಲವು ಮಾತುಗಳನ್ನು ಹೇಳಿ ನನ್ನ ವಿಚಾರಗಳನ್ನು ಸಮಾಪ್ತಗೊಳಿಸುತ್ತೇನೆ.

(೧) ಮೊದಲು ಶಿಲಾದನಿಗೆ ಸುಪ್ರಭೆಯೆಂಬ ಸತಿಯು ಇದ್ದಳೋ ಇಲ್ಲವೋ" ಎಂದು ಶಿಲಾದನ ಚರಿತ್ರೆಗಳನ್ನು ಶೋಧಿಸಬೇಕಾಗಿತ್ತು. ಈ ವಿಷಯದಲ್ಲಿ ಸರ್ವಜ್ಞರಾದ ವ್ಯಾಸ ಮಹರ್ಷಿಗಳ ಅಭಿಪ್ರಾಯವೇನು! ಅದನ್ನು ಅವರ ಪುರಾಣಗಳಿಂದ ತಿಳಿಯಬೇಕಾಗಿತ್ತು. ದೇಪನ ಈ ಹುಚ್ಚು ಕಥೆಯನ್ನು ತಟ್ಟನೆ ನಂಬಬಾರದಾಗಿತ್ತು.

(೨) ಶಿವಭಕ್ತನಾದ ಶಿಲಾದಮುನಿಯು ಶಿವಾಗಮಗಳನ್ನು ತಿಳಿದಿರಲಿಕ್ಕೇ ಬೇಕು. ಶಿವಪೂಜಾ ಸಮಯದಲ್ಲಿ ರಜಸ್ವಲೆಯಾದರೂ ದೋಷವಿಲ್ಲೆಂಬ ಸಿದ್ಧಾಂತಕ್ಕೆ ಅವನು ಎಂದೂ ವಿರೋಧಿಯಾಗಲಾರನು. ಆದರೂ ಶಿಲಾದನು ಸುಪ್ರಭೆಗೆ ಶಾಪಕೊಟ್ಟನೆಂದು ದುಷ್ಟ ಹಸ್ತನಾದ ದೇವನು ಬರೆದಿರುವದನ್ನು ನೋಡಿ "ನಿಸರ್ಗನಿಯಮಕ್ಕನುಗುಣವಾಗಿ ಋತುವಾದುದು ಆಕೆಯ ತಪ್ಪಲ್ಲ. ಇದನ್ನು ತಿಳಿಯದೆ ಆಕೆಗೆ ಶಾಪಕೊಡುವ ಮುನಿ ಶುದ್ಧ ರಾಕ್ಷಸನಾಗಿರಬೇಕು ಎಂದು ದೇವನ ಪಕ್ಷವನ್ನು ವಹಿಸಿ ಸಂಪಾದಕರು ತಾವು ಹೀಗೆ ತಿಳಿಯುವದಕ್ಕಿಂತ ಸರ್ವಜ್ಞನಾದ ಮುನಿಯ ಕಥೆಯನ್ನು ಮನ ಬಂದಂತೆ ಕಲ್ಪಿಸಿ ಬರೆದ ದೇವನೇ ತಿಳುವಳಿಲ್ಲದವನು ಶಿವಧರ್ಮ ವಿರೋಧಿ ರಾಕ್ಷಸನೆಂದು ತಿಳಿಯಬೇಕಾಗಿತ್ತು.

(೩) (೨೨)ರಲ್ಲಿ ಶಿಲಾದನು ತನ್ನ ಸತಿಯಾದ ಸುಪ್ರಭೆಗೆ ಒಬ್ಬ ಹೊಲೆಯನಿಗೆ ಹೆಂಡತಿಯಾಗೆಂದು ಶಾಪಕೊಟ್ಟಿರಬಹುದೆ? ಇದೆಂಥ ನಿರ್ಲಜ್ಜತನವು! ದೇವನು ಹೀಗೆ ಬರೆಯಬಹುದೆ? ಇದು ಅಸತ್ಯವೆಂದು ಸಂಪಾದಕರು ತಿಳಿಯಬೇಕಾಗಿತ್ತು.

(೪) ಸುಪ್ರಭೆಯು ಶಾಪಮುಕ್ತಳಾಗಿ ಯಾವದೇಹದಿಂದ ಶಿಲಾದನಲ್ಲಿಗೆ ಹೋದಳು ಎಂಬ ಗಹನವಾದ ಪ್ರಶ್ನಕ್ಕೆ ಉತ್ತರವೇನು? ಎಂಬುದನ್ನು ವಿಚಾರಿಸಬೇಕಾಗಿತ್ತು. ಸಂಪಾದಕತ್ವವನ್ನು ವಹಿಸಿದ ಮೇಲೆ ಪೀಠಿಕೆಯಲ್ಲಿ ಇದರ ವಿಷಯವನ್ನು ಚರ್ಚಿಸಿ ತಮ್ಮ ಅಭಿಪ್ರಾಯವನ್ನು ಸಂಪಾದಕರು ಬರೆಯಬೇಕಾಗಿತ್ತು.

(೫) ಮರುಳಸಿದ್ಧನು ಸುಪ್ರಭೆಯ ಗರ್ಭದಲ್ಲಿ ಜನಿಸಿದನೆಂದು ದೇವನು ಹೇಳಿರುವನೋ? ಅವಳಮನದಕೊನೆಯೊಳುಉದಿಸಿದನೆಂದು ಹೇಳಿರುವನೋ? ಅವನ ನಿರ್ಧಾರವು ಯಾವುದು ? ಮರುಳಸಿದ್ಧನು ಅವಳ ಗರ್ಭದಿಂದಲೇ ಜನಿಸಿದ್ದರೆ ಮನದ ಕೊನೆಯೊಳು ಉದಿಸಿದನೆಂದು ಏಕೆ ಹೇಳಿರುವನು? ಇದನ್ನು ಚರ್ಚಿಸಿ ನಿರ್ಧರಿಸಿಕೊಳ್ಳಬೇಕಾಗಿತ್ತು.

(೬) ತಮ್ಮ ತಮ್ಮ ಮತಾಭಿಮಾನವು ಸರ್ವರಿಗೂ ಉಂಟು. ದೇವನು ಸಂ। ೧ ಪು। ೧೧ರಲ್ಲಿ ಶಿಲಾದನಿಗೆ ಶಿಲಾಧರನೆಂದು ಪದ ಪ್ರಯೋಗಿಸಿರುವ

ರಾಯರು ಇನ್ನಾದರೂ ಸತ್ಯದ ಬೆನ್ನುಬಿದ್ದು ತಾವು ಮಾಡಿರುವ ಪರ ಮತಸಾಹಿತ್ಯ ದ್ರೋಹದ ಅಪರಾಧದ ಬಗ್ಗೆ ಕ್ಷಮೆಯನ್ನು ಯಾಚಿಸಿ ಶುದ್ಧಾಂತರಂಗರಾಗಲೆಂಬುದೇ ನಮ್ಮಂತರಂಗದಾಶೆ.

ಶುಭಮಸ್ತು !



# ಮರುಳಸಿದ್ಧ ಕಾವ್ಯ ವಿಮರ್ಶೆ

ಲೇಖಕರು:— ಆಸ್ಥಾನವಿದ್ವಾನ್ ಶರಣ ಸಾಹಿತ್ಯ—ಸ್ವತಂತ್ರ
ಕರ್ನಾಟಕ ಸಂಪಾದಕರಾದ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳವರು
ಹುಲಕುಂಟಮರ, ಬೆಂಗಳೂರು.

೧. ಮೊದಲ ಮಾತುಗಳು:— ವೀರಶೈವ ಮತಚರಿತ್ರೆಯಲ್ಲಿ ಸುಪ್ರಸಿದ್ಧ ರಾದ ಧಾರ್ಮಿಕ ವಿಭೂತಿಗಳಲ್ಲಿ ಉಜ್ಜಯಿನಿಯ ಮರುಳಸಿದ್ಧನು ಪರಿಶೋಭಿ ಸುತ್ತಿದ್ದಾನೆ. ಈತನನ್ನು ಕುರಿತು ಕೆಲವು ಮಂದಿ ಪ್ರಾಚೀನ ಕವಿಗಳು ಷಟ್ಪದಿ ಸಾಂಗತ್ಯ, ಮೊದಲಾದ ಶೈಲಿಗಳಲ್ಲಿ ಕಾವ್ಯಗಳನ್ನು ಕಟ್ಟಿ ಹಾಡಿರುತ್ತಾರೆ. ಹಲವು ಮಂದಿ ವೀರಶೈವ ಕವಿಗಳು ಈತನ ಹೆಸರನ್ನು ಪವಿತ್ರವಾದ ಭಾವನೆ ಯಿಂದ ತಮ್ಮ ಕಾವ್ಯಗಳಲ್ಲಿ ಸ್ಮರಿಸಿರುತ್ತಾರೆ. ಇದೆಲ್ಲವೂ ಮರುಳಸಿದ್ಧನಿಗೆ ವೀರಶೈವ ಧರ್ಮಕ್ಷೇತ್ರದಲ್ಲಿ ಇರುವ ಪ್ರಾಮುಖ್ಯತೆಗೆ ನಿದರ್ಶನವಾಗಿದೆ.

ಮರುಳಸಿದ್ಧ ಕಾವ್ಯವನ್ನು ದೇಪಕವಿಯು ಬರೆದಿರುತ್ತಾನೆ. ಇವನು ಬಾಳ್ನೆಳಿಯ ಕಲಿದೇವನ ಭಕ್ತನೆಂದು (ಸಂಧಿ ೧. ಪದ್ಯ ೧೬ರಲ್ಲಿ) "ಬಾಳ್ನ ಳಿಯ ಕಲಿದೇವ ನಿಂತುಸಿರಿದೊಲು ದೇಪ ಪೇಳ್ದಂ" ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಈ ಗ್ರಂಥಕ್ಕೆ 'ಸಿದ್ಧಲಿಂಗನ ಚಾರಿತ್ರ' ಎಂಬ ಇನ್ನೊಂದು ಹೆಸರು ಉಂಟೆಂದೂ "ಗದ್ದುಗೆಯ ರಾಮಿತಂದೆಯು ಶರಣ ಸಂತತಿಗೆ ಉದ್ಧ ರಿಸಿ ಪೇಳ್ದ ಗುರುಬೋಧೆಯ ಮಹಾತ್ಮೆಯನು" ಈ ಕವಿಯು ಸಿದ್ಧಲಿಂಗನ ಕೃಪೆಯಿಂದ ಹೇಳಿದಂತೆಯೂ ತಿಳಿಸುತ್ತಾನೆ. ಕವಿಯು ಗ್ರಂಥಾದಿಯಲ್ಲಿ "ಶ್ರೀ ಗುರು ಮಲ್ಲೇಶ" "ಶ್ರೀ ಗಿರಿಯ ಮಲ್ಲೇಶ ಶರಣು" ಮೊದಲಾಗಿ ಸ್ಮರಿಸುವುದರಿಂದಲೂ "ಶ್ರೀಗಿರಿ ಮಹಿಮೆ ತಾನೆಂತುಟೊ" ಎಂದು ಶ್ರೀ ಶೈಲವನ್ನು ಬಹಳವಾಗಿ ಭಕ್ತಿಯಿಂದ ಶ್ಲಾಘಿಸುವುದರಿಂದಲೂ ಈ ಕವಿಯು ಶ್ರೀಗಿರಿ ಮಲ್ಲಿಕಾರ್ಜುನನ ಭಕ್ತನೆಂದು ಹೇಳಲವಕಾಶವಿದೆ. ಈತನಿಗೆ ದೇವ ಕವಿ ಅಥವಾ ದೇಪಕವಿ ಎಂಬ ಹೆಸರಿದೆ.

ಈ ಗ್ರಂಥದಲ್ಲಿ ೭ ಸಂಧಿಗಳಿವೆ, ೫೫೫ ಪದ್ಯಗಳಿವೆ. ಕವಿ ಈ ವರ್ಣಕ ಕಾವ್ಯವನ್ನು ವಾರ್ಧಕಷಟ್ಪದಿಯಲ್ಲಿ ಬರೆದಿದ್ದಾನೆ. ಅಲ್ಲದೆ ಗ್ರಂಥದ ಆದಿ ಯಲ್ಲಿ ಮತ್ತು ಸಂಧಿಯ ಮೊದಲಲ್ಲಿ ಕೆಲವು ಕಂದ, ವೃತ್ತ, ವಚನಗಳೂ

ಇರುವುದುಂಟು. ಈ ಗ್ರಂಥವು ಒಂದೇ ಪ್ರತಿಯ ಆಧಾರದಿಂದ ಪ್ರಕಟವಾಗಿದೆ ಎಂದು ಸಂಪಾದಕರು ಹೇಳಿರುವುದರಿಂದ ಗ್ರಂಥಸ್ಥ ಪದ್ಯಗಳಲ್ಲಿ ಹೇರಳ ವಾಗಿರುವ ವ್ಯಾಕರಣ ಮತ್ತು ಛಂದಸ್ಸಿನ ದೋಷಗಳನ್ನು ತಿದ್ದಲು ಸಾಧ್ಯ ವಾಗಲಿಲ್ಲವೆಂದು ತೋರುತ್ತದೆ. ಈ ಗ್ರಂಥವನ್ನು ಕವಿಯು ಶಾಲಿವಾಹನ ಶಕ ೧೮೦೯ನೇ ಸರ್ವಜಿತು ಸಂವತ್ಸರ ವೈಶಾಖ ಹುಣ್ಣಿಮೆ ಗುರುವಾರ [illegible] ಕ್ರಿಸ್ತಶಕ ೧೮೮೭ನೇ ಮೇ ತಿಂಗಳಿನಲ್ಲಿ ( ಈ ಕಾವ್ಯವನ್ನು ) ಮುಗಿಸಿ ದಂತೆ ತಿಳಿದುಬಂದಿದೆ.

೨. ಕಥಾಸಾರ:--

ಶ್ರೀಶೈಲದಲ್ಲಿ ತಪಸ್ಸು ಮಾಡುತ್ತಿದ್ದ ಶಿಲಾದ ಮುನಿಯ ಧರ್ಮಪತ್ನಿ ಸುಪ್ರಭೆಯು ಶಿವಪೂಜೆಯನ್ನು ಮಾಡುತ್ತಿದ್ದ ಸಮಯದಲ್ಲಿ ರಜಸ್ವಲೆ ಯಾಗಲು ಆ ವಿಷಯವನ್ನು ಮುಚ್ಚಿಕೊಂಡು ಪೂಜೆಯನ್ನು ಮುಂದು ವರಿಸಿದ ಪಾಪದ ಫಲವಾಗಿ ಗಂಡನಿಂದ ಶಾಪವನ್ನು ಪಡೆದು ಕನ್ನಡ ನಾಡಿನಲ್ಲಿ ಹೊಲೆಯಳಾಗಿ ಹುಟ್ಟುತ್ತಾಳೆ. ಹಾಗೆಯೇ ಶಿಲಾದನ ಆಜ್ಞೆ ಯನ್ನು ಮೀರಿದ 'ಭಾಸ್ಕ' ಎಂಬ ಶಿಷ್ಯನು ಗುರುವಿನಿಂದ ಶಾಪವನ್ನು ಪಡೆದು ಕ[illegible] [illegible]ಪುರದ ಬಾಚಣ್ಣಗೌಡನ ಭೃತ್ಯ ಹೊಲೆಯ ಜಾತಿಯ "ಕೂಗಿನಮಾರ"ನಾಗಿ ಹುಟ್ಟುತ್ತಾನೆ. ಶಿಲಾದನ ಪತ್ನಿ ಸುಪ್ರಭೆಯು ಹೊಲತಿ ಜನ್ಮದಲ್ಲಿ ಹುಟ್ಟಿ ಈ ಕೂಗಿನಮಾರನ ಹೆಂಡತಿಯಾಗುತ್ತಾಳೆ. ಇವರ ಮಗನೇ ಕಥಾನಾಯಕನಾದ ಮುರುಳಸಿದ್ಧ. ಇವನು ಪರಶಿವನ ಅಂಶೀಭೂತ ಘನಮಹಿಮ ಕೈಲಾಸದ ಚರಮೂರ್ತಿಯ ಅವತಾರ ಶಿವನ ಅಪ್ಪಣೆಯಿಂದ ಅವತರಿಸಿದಾತನು ಎಂಬುದು ಈ ಗ್ರಂಥ ಕರ್ತೃವಿನ ಅಭಿಪ್ರಾಯ.

ಮುರುಳಸಿದ್ಧನು ಹುಟ್ಟಿದ ಕೂಡಲೇ ತಂದೆ ತಾಯಿಗಳು ಸತ್ತು ಹೋಗು ತ್ತಾರೆ. ಬಾಚಣ್ಣಗೌಡನೂ ಅವನ ಹೆಂಡತಿ ಮಲ್ಲಮ್ಮನೂ ಆ ಮಗುವನ್ನು ಅಕ್ಕರೆಯಿಂದ ಸಾಕುತ್ತಾರೆ. ಆ ಮಗುವಿನ ಮಹಿಮೆಯಿಂದ ಬಾಚಣ್ಣ ಗೌಡನಿಗೆ ಧನ ಧಾನ್ಯ ಸಂಪತ್ತು ಹೆಚ್ಚುತ್ತದೆ. ಹುಡುಗನಿಗೆ ೭--೮ ವರ್ಷ ಗಳಾದ ಮೇಲೆ ಗೌಡನು ಈ ತನ್ನ ಸಾಕುವ ಮಗನನ್ನು ದನಕಾಯುವ ಕೆಲಸಕ್ಕೆ ನೇಮಿಸುತ್ತಾನೆ. ಮುರುಳಸಿದ್ಧನ ಮಹಿಮೆ ಅಲ್ಲಿಂದ ಪ್ರಾರಂಭವಾಗುತ್ತದೆ. ಇವನು ಕಾರಣ ಪುರುಷನೆಂಬುದು ಆಗಲೇ ತಿಳಿಯುತ್ತದೆ. ಮುಂದೆ ಮುರುಳ ಸಿದ್ಧನು ವಿಷ್ಣುಪವಾಡ, ಮಾರಿ ಮಸಣಿಗಳನ್ನು ಗೆಲ್ಲುವ ಪವಾಡ, ಸುಣ್ಣದ ಪವಾಡ, ಕುಂಭದಪವಾಡ ಮೊದಲಾದವುಗಳನ್ನು ಮಾಡಿ ಪ್ರಸಿದ್ಧನಾಗು

ತ್ತಾನೆ. ಮಹಾತ್ಮನೆನಿಸಿರುತ್ತಾನೆ. ಅನಂತರ ಮರುಳಸಿದ್ಧನು ಗದ್ದುಗೆಯ ರಾಮಯ್ಯನನ್ನು ಅನುಗ್ರಹಿಸಿ, ಗುಂಡಯ್ಯ ಬ್ರಹ್ಮಯ್ಯಗಳನ್ನು ಆಶೀರ್ವದಿಸಿ, ಓರುಂಗಲ್ಲು ರುದ್ರರಾಯನನ್ನು ಸಂದರ್ಶಿಸಿ, ಕೊಲ್ಲಾಪುರಕ್ಕೆ ಬಂದು ಅಲ್ಲಿನ ನವಕೋಟಿ ಸಿದ್ಧರನ್ನು ಬೆದರಿಸಿ ಅವರ ಮುಂದಾಳು ಕರಟಾಸುರನನ್ನು ಸಂಹರಿಸಿ ತನ್ನ ಮಹಿಮೆಯನ್ನು ಪ್ರಕಟಿಸುತ್ತಾನೆ.

ಕೊಲ್ಲಾಪುರದ ಪಕ್ಕದ ಸಿದ್ಧಗಿರಿಯಲ್ಲಿದ್ದ ಮಹಾಗುರು ರೇವಣಸಿದ್ಧೇಶ್ವರನನ್ನು ಮರೆಹೊಕ್ಕು ಅವರಿಂದ ಶಿವದೀಕ್ಷೆಯನ್ನು ಪಡೆದು ಲಿಂಗಧಾರಿಯಾಗಿ ಕೊಲ್ಲಾಪುರದ ಮಾಯಿಯ ಗರ್ವಭಂಗಮಾಡಿ ಅಲ್ಲಿಂದ ದೇಶದೇಶಾಂತರಗಳನ್ನು ಸಂಚರಿಸಿ ತೆಲುಗುಬಾಳಿಗೆ ಬಂದು ತನ್ನ ಭಕ್ತನಾದ ಒಕ್ಕಲಿಗ ಸಿದ್ಧಯ್ಯನನ್ನು ಕರುಣಿಸಿ ಕಡೆಗೆ ಬಳ್ಳಾರಿ ಜಿಲ್ಲೆ ಕೊಟ್ಟೂರು ತಾಲ್ಲೂಕಿನಲ್ಲಿರುವ ಉಜ್ಜಯಿನೀ ಕ್ಷೇತ್ರದಲ್ಲಿ ಬೈಲಾಗುತ್ತಾನೆ.

## ೩. ಸಾಹಿತ್ಯ ದೃಷ್ಟಿ:—

ಸಾಹಿತ್ಯದ ದೃಷ್ಟಿಯಿಂದ ಈ ಗ್ರಂಥವು ಉತ್ತಮ ಶ್ರೇಣಿಗೆ ಸೇರಿದುದಲ್ಲವೆಂದು ಇದರ ಪರಿಚಯ ವಿರುವ ವಿದ್ವಾಂಸರೆಲ್ಲರ ಅಭಿಪ್ರಾಯ. ಕಥಾವಸ್ತು, ವಿಷಯ ನಿರೂಪಣೆ, ವರ್ಣನೆ, ಸಂಭಾಷಣೆ, ಪಾತ್ರಪೋಷಣೆ, ಶೈಲಿ, ಅಲಂಕಾರ, ಮೊದಲಾದ ಯಾವ ದೃಷ್ಟಿಯಿಂದಲೂ ಈ ಕಾವ್ಯವು ಪ್ರಾಮುಖ್ಯತೆಯನ್ನು ಪಡೆದಿಲ್ಲ. ಕಾವ್ಯಸಮಾಧಿಯಲ್ಲಿ ಪರಿಣತನಾದವನಿಗಾದರೂ ಈ ಪುಸ್ತಕವನ್ನು ಕಲಾದೃಷ್ಟಿಯಿಂದ ಆದ್ಯಂತವಾಗಿ ಬೇಸರವಿಲ್ಲದೆ ಓದಲು ಸಾಧ್ಯವಿಲ್ಲವೆಂಬುದು ಅನುಭವೈಕವೇದ್ಯವಾದುದು

ಕವಿಯು ಕಲ್ಪಿಸಿರುವ ಕಥಾವಸ್ತುವು ರಮಣೀಯವಾಗಿಲ್ಲ. ಶಿವಪುರಾಣಗಳಲ್ಲಿ ಸುಪ್ರಸಿದ್ಧನಾದ ಶಿಲಾದಮುನಿಯು ಈ ಕಾವ್ಯದಲ್ಲಿ ಸುಲಭಕೋಪನಾಗಿ ತನ್ನ ಧರ್ಮಪತ್ನಿ ಮತ್ತು ಶಿಷ್ಯ ಇಬ್ಬರನ್ನೂ ಒಟ್ಟಿಗೆ ಶಪಿಸಿ ಹೊಲೆಯರ ಜಾತಿಯಲ್ಲಿ-ಅದರಲ್ಲಿಯೂ ಗಂಡಹೆಂಡಿರಾಗಿ-ಹುಟ್ಟುವಂತೆ ನಿರೂಪಿಸಿದುದು ಅನೌಚಿತ್ಯವೇ ಅಲ್ಲದೆ ಅಧರ್ಮವೂ ಅನೀತಿಯೂ ಆಭಾಸವೂ ಆದುದು. ಮಹಾತ್ಮನಾದ ಶಿಲಾದ ಮುನಿಯನ್ನು ಇಂತಹ ಅವಿವೇಕಿಯಂತೆ ಚಿತ್ರಿಸಿರುವ ದೇಪಕವಿಯು ಲೋಕಾನುಭವಿಯೆಂದಾಗಲಿ, ಶಾಸ್ತ್ರಜ್ಞನೆಂದಾಗಲಿ, ನಾವು ತಿಳಿಯುವುದೆಂತು ?

ಈ ಗ್ರಂಥದಲ್ಲಿ ಮಹಾತ್ಮನಾದ ಮರುಳಸಿದ್ಧನ ಹಲವು ಪವಾಡಗಳನ್ನು ಕೇವಲ ಸುತ್ತಾಟಗಳಂತೆ ಕವಿ ಹೇಳಿರುತ್ತಾನೆ. ಕಾವ್ಯವೆಲ್ಲಾ ಮುಗಿದ ಮೇಲೆ ಉಜ್ಜಯಿನಿಯ ವರ್ಣನೆಯನ್ನು ಇಡೀ ಒಂದು ಸಂಧಿಯಲ್ಲಿ ಮಾಡಿ ಕಾವ್ಯ ಶಾಸ್ತ್ರದಲ್ಲಿ ತನಗಿರುವ ಅವಜ್ಞತೆಯನ್ನು ಸ್ಪಷ್ಟಪಡಿಸಿರುತ್ತಾನೆ. ಇತ್ಯಾದಿ ಕಾರಣಗಳಿಂದ ಈ ಕಾವ್ಯವು ಸಾಹಿತ್ಯ ದೃಷ್ಟಿಯಿಂದ ಅಷ್ಟೊಂದು ಗಣನಾರ್ಹ ವಲ್ಲವೆಂದು ನಾವು ಧೈರ್ಯದಿಂದ ಹೇಳಬಹುದಾಗಿದೆ.

೪. ಧಾರ್ಮಿಕ ದೃಷ್ಟಿ:- ವೀರಶೈವ ಕವಿಗಳು ಶುದ್ಧ ಸಾಹಿತ್ಯ ದೃಷ್ಟಿ ಯಿಂದ ಬರೆದಿರುವ ಗ್ರಂಥಗಳು ಬಹಳ ವಿರಳ. ಗಿರಿಜಾಕಲ್ಯಾಣ, ಹರಿಶ್ಚಂದ್ರ ಕಾವ್ಯ, ತ್ರಿಷಷ್ಠಿ ಪುರಾತನ ವಿಲಾಸ, ಉದ್ಭಟಕಾವ್ಯ, ಭಾವಚಿಂತಾರತ್ನ, ರಾಜ ಶೇಖರ ವಿಳಾಸ, ಶಬರಶಂಕರ ವಿಳಾಸ, ದಮಯಂತೀ ಸ್ವಯಂವರ, ಮೊದ ಲಾದ ಕೆಲವು ಗ್ರಂಥಗಳನ್ನು ಬಿಟ್ಟರೆ ಉಳಿದುವುಗಳೆಲ್ಲವೂ ಧರ್ಮ ಮತ್ತು ಸಾಹಿತ್ಯವನ್ನು ಓತಪ್ರೋತವಾಗಿ ಹೆಣೆದಿರುವ ಧಾರ್ಮಿಕ ಗ್ರಂಥಗಳೇ ಆಗಿವೆ, ಬಸವ ಪುರಾಣ, ಚೆನ್ನಬಸವ ಪುರಾಣ, ವೀರಶೈವ ಮಹಾಪುರಾಣ, ಪ್ರಭು ಲಿಂಗಲೀಲೆ, ಪಾಲ್ಕುರಿಕೆ ಸೋಮನಾಥ ಪುರಾಣ, ತೋಂಟದಸಿದ್ಧೇಶ್ವರ ಪುರಾಣ, ರಾಘವಾಂಕ ಕಾವ್ಯ, ಪದ್ಮರಾಜ ಪುರಾಣ, ರೇವಣಸಿದ್ಧ ಪುರಾಣ, ಮೊದಲಾದವುಗಳು ವೀರಶೈವ ಧಾರ್ಮಿಕ ಕವಿಗಳ ಗ್ರಂಥನಿರೂಪಣ ಪದ್ಧ ತಿಗೆ ನಿದರ್ಶನವಾಗಿವೆ. ಈ ಗ್ರಂಥಗಳಲ್ಲಿ ಅಷ್ಟಾದಶ ವರ್ಣನೆಗಳೂ, ಶಬ್ದಾ ಲಂಕಾರ ಅರ್ಥಾಲಂಕಾರಗಳೂ, ಉಜ್ವಲವಾದ ರಸಭಾವಗಳೂ, ಕಂಗೊಳಿ ಸುವಂತೆಯೇ ವೀರಶೈವ ಧರ್ಮತತ್ವಗಳು ಅಂದರೆ, ಅಷ್ಟಾವರಣ, ಪಂಚಾ ಚಾರ, ಷಟ್ ಸ್ಥಲ, ಶಿವದೀಕ್ಷೆ, ಶರಣರ ಮಹಿಮೆ, ಇತ್ಯಾದಿಗಳೂ ( ಈ ಮೊದಲೆ ಹೇಳಿದ ಮಹಾಪುರಾಣಗಳಲ್ಲಿ ) ಪ್ರಕಾಶಿಸುತ್ತವೆ.

ನೇಮಕವಿಯ ಮರುಳಸಿದ್ಧ ಕಾವ್ಯವು ಒಂದು ರೀತಿಯಿಂದ ವೀರಶೈವ ಪುರಾಣಗಳ ಗುಂಪಿಗೆ ಸೇರತಕ್ಕುದಾದರೂ ಮತಧರ್ಮ ನಿರೂಪಣೆಯಲ್ಲಿ ಮೇಲೆಹೇಳಿದ ಗ್ರಂಥಗಳ ದರ್ಜೆಗೆ ಸೇರತಕ್ಕುದಲ್ಲ. ವೀರಶೈವ ಧರ್ಮದಲ್ಲಿ ಅತ್ಯಂತ ಪ್ರಸಿದ್ಧನಾದ ಆಚಾರ್ಯ ರೇವಣಸಿದ್ಧನ ಪಟ್ಟಶಿಷ್ಯನೇ ಈ ಕಾವ್ಯದ ಕಥಾನಾಯಕನಾದರೂ, ಇಲ್ಲಿ ಬೇಕಾದಷ್ಟು ಮತ ಧರ್ಮಗಳನ್ನು ನಿರೂಪಿ ಸಲು ಅವಕಾಶವಿದ್ದರೂ ಕವಿಯು ದುರ್ಬಲನಾದುದರಿಂದ ಅಂತಹ ಉತ್ತಮ ಸನ್ನಿವೇಶಗಳನ್ನು ಕೂಡ ಅಸಾರ್ಥಕ ಪಡಿಸಿಕೊಂಡಿರುತ್ತಾನೆ.

ಕ್ಷೀರವಾರಿಧಿಯೊಳಿರುತಾಕಳ ಬಯಸುವರೆ ।
[illegible]ರು ಮುಖ್ಯವೊಳಿದ್ದು [illegible]ಗರದ ತೂಗುವರೆ ॥
[illegible] ॥
[illegible]ಗಪಿಡಿವ ಧನಕಂಜುವರೆ ಮತ್ತೆಯುಂ ।
ಚಾರು[illegible] ತಮಕಂಜುವರೆ ಜಗವ ।
[illegible] ಧನಬಂಧನ ॥

(ಸಂಧಿ ೪. ಪದ್ಯ ೧೨).

ಮೇಲೆ ಹೇಳಿರುವ ಪದ್ಯವು ಬಹಳ ಚೆನ್ನಾಗಿದೆ. ಆದರೆ ಈ ಗ್ರಂಥದಲ್ಲಿ ಇಂತಹ ಸ್ವಾರಸ್ಯವಾದ ಪದ್ಯಗಳು ನಾಲ್ಕೈದಕ್ಕಿಂತ ಹೆಚ್ಚಾಗಿಸಿಕ್ಕಲಾರವೆಂಬುದು ಈ ಕಾವ್ಯದ ಬಗ್ಗೆ ನಾವು ನೆನಸಿರುವ ವಿಚಾರ. ಆದುದರಿಂದ ಈ ಕಾವ್ಯವು ಸಾಹಿತ್ಯ ದೃಷ್ಟಿಯಿಂದ ಓದುವವರನ್ನು ನಿರಾಶೆಗೊಳಿಸುವಂತೆಯೇ, ಧಾರ್ಮಿಕ ದೃಷ್ಟಿಯಿಂದಲೂ ಓದುಗರಿಗೆ ಅತೃಪ್ತಿಯನ್ನುಂಟುಮಾಡುತ್ತದೆಂದು ಸ್ಪಷ್ಟವಾಗಿ ಹೇಳಬಹುದು.

೫ ಐತಿಹಾಸಿಕ ದೃಷ್ಟಿ:— ಇನ್ನು ಚಾರಿತ್ರಿಕ ದೃಷ್ಟಿಯಿಂದ ಈ ಗ್ರಂಥವನ್ನು ಪರಿಶೀಲಿಸಿದರೆ, ಇದು ಬಹು ಉಪಯುಕ್ತವಾದ ಕಾವ್ಯವೆಂದು ಹೇಳಬೇಕಾಗುತ್ತದೆ. ದೇಪಕವಿಯು ಗದ್ದುಗೆಯ ರಾಮಿ ತಂದೆಯು ಹೇಳಿದ ಗ್ರಂಥಾಧಾರದಿಂದಲೂ, ತನ್ನ ಅನುಭವದಿಂದಲೂ, ಶ್ರೀ ಗುರು ಮುರುಳಸಿದ್ಧನಿಗೆ ಸಂಬಂಧಪಟ್ಟ ಬಹಳ ವಿಷಯಗಳನ್ನು ಸಂಗ್ರಹಿಸಿ ಈ ಕಾವ್ಯವನ್ನು ಬರೆದಿರುತ್ತಾನೆ. ಈ ದೃಷ್ಟಿಯಿಂದ ಈ ಕವಿಯು ವೀರಶೈವ ಸಮಾಜಕ್ಕೂ ತನ್ಮೂಲಕ ಕನ್ನಡಿಗರಿಗೂ, ಮಹೋಪಕಾರ ಮಾಡಿರುವನೆಂದು ಹೇಳಬಹುದು. ಕವಿಯು ತನ್ನ ಕಾವ್ಯದಲ್ಲಿ ( ಸಂಧಿ ೧. ಪದ್ಯ ೧೩ ) ಗುರು ಹರಿಯಣ್ಣ ( ಹಂಪೆಯ ಹರೀಶ್ವರ ) ಮಲುಹಣ, ಬಾಣ, ಉದ್ಭಟ, ಕೆರೆಯ ಪದ್ಮರಸ, ಕೇಶಿ ( ಕೊಂಡಗುಳಿ ಕೇಶಿರಾಜ ) ಇತ್ಯಾದಿ ಪ್ರಾಚೀನ ವೀರಶೈವ ಮತ್ತು ಶೈವಗ್ರಂಥಕಾರರನ್ನು ಸ್ಮರಿಸಿರುವುದರಿಂದ ಈತನಿಗೆ ಕೆಲವು ಪ್ರಾಚೀನ ಗ್ರಂಥಗಳ ಪರಿಚಯವಿದ್ದು ಹಲವು ಶಿವಶರಣರ ಚರಿತ್ರೆಗಳು ತಿಳಿದಿರಬೇಕೆಂದು ನಾವು ತರ್ಕಿಸಬಹುದು

ಈ ಗ್ರಂಥದಲ್ಲಿ ಮುರುಳಸಿದ್ಧನು ಆಚಾರ್ಯ ರೇವಣಸಿದ್ಧನ ಶಿಷ್ಯನೆಂಬುದೂ, ಕೊಲಾಪೂರದ ಮಾಯಿಯು ಗರ್ವಭಂಗಮಾಡಿದನೆಂಬುದೂ

ಸ್ಪಷ್ಟಗೊಂಡಿದೆ; ಅಲ್ಲಾಳಸಿದ್ಧ ಒಲ್ಲಾಳಸಿದ್ಧ, ನಂಜನಸಿದ್ಧ ಗೋರಕಸಿದ್ಧ ಮೊದಲಾದ ನವನಾಥ ಸಿದ್ಧರನ್ನು ಹೇಳುವಾಗ 'ರೇವಣಸಿದ್ಧ, ಎಂಬ ವ್ಯಕ್ತಿಯೊಬ್ಬನುಂಟೆಂದೂ, ಇವನು ವೀರಶೈವ ಪುರಾಣಗಳಲ್ಲಿ ಪ್ರಸಿದ್ಧನಾದ ಆಚಾರ್ಯ ರೇವಣಸಿದ್ಧನಿಗೆ ಭಿನ್ನನೆಂದೂ ದೇಪಕವಿಯು ಹೇಳಿರುವುದು ಗಮನಾರ್ಹವಾಗಿದೆ. (ಸಂಧಿ ೨, ಪದ್ಯ ೩೯) ನವನಾಥರ ಚರಿತ್ರೆಯಲ್ಲಿ ದತ್ತಾತ್ರೇಯನ ಭಕ್ತನಾದ ಓರ್ವ ರೇವಣಸಿದ್ಧನ ಕಥೆಯಿದೆ. (ಕನ್ನಡ ನವನಾಥರ ಚರಿತ್ರೆ ಪುಟ ೧೬೩)

ಶ್ರೀ ಮರುಳಸಿದ್ಧನ ಚರಿತ್ರೆಯನ್ನು ಚತುರಾಚಾರ್ಯ ಪುರಾಣಕರ್ತೃವೂ ಮರುಳಸಿದ್ಧ ಸಾಂಗತ್ಯಕಾರನೂ ಬರೆದಿರುತ್ತಾರೆ. ಸಾಂಗತ್ಯಕ್ಕೂ ಕಾವ್ಯಕ್ಕೂ ಹಲವೆಡೆ ವ್ಯತ್ಯಾಸವಿದೆ. ಗುರುರಾಜ ಚರಿತ್ರೆ ಮೊದಲಾದ ಗ್ರಂಥಗಳಲ್ಲಿಯೂ ಮರುಳಸಿದ್ಧನ ಚರಿತ್ರೆಯು ಬಂದಿರುತ್ತದೆ. ಸಾಂಗತ್ಯದಲ್ಲಿ ಮರುಳಸಿದ್ಧನ ತಂದೆ ತಾಯಿಗಳು ಕಲ್ಯಾಣದ ಮಾದಯ್ಯ ಮತ್ತು ಸೊನ್ನಲದೇವಿ. ಇವನನ್ನು ಕಾಪಾಡುವಳು ಮುಕ್ತಾಯಕ್ಕ ಎಂದು ತಿಳಿದುಬಂದಿದೆ.

ಚತುರಾಚಾರ್ಯ ಪುರಾಣ, ಮರುಳಸಿದ್ಧನ ಸಾಂಗತ್ಯ ಗ್ರಂಥಗಳನ್ನು ಬರೆದ ಕವಿಗಳು ದೇಪಕವಿಗಿಂತ ಈಚಿನವರೆಂದೂ, ಕಾರಣ ಅವರು ಹೇಳುವ ಕಥಾವಸ್ತುವು ನಂಬಲರ್ಹವಲ್ಲವೆಂದೂ ಕೆಲವು ವಿಮರ್ಶಕರ ವಾದವಿದೆ. ಆದರೆ ಮರುಳಸಿದ್ಧ ಕಾವ್ಯಕ್ಕೆ ಭಿನ್ನವಾದ ಕಥಾವಸ್ತುವನ್ನು ಇತರ ಗ್ರಂಥಕಾರರು ತಿಳಿಯಲು ಯಾವ ಪ್ರಾಚೀನ ಗ್ರಂಥಗಳ ಆಧಾರವೇ ಇರಲಿಲ್ಲವೆಂದು ಹೇಳುವಂತಿಲ್ಲ. ಈ ಬಗೆಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ.

## ೬. ನಾಲ್ವರು ಮರುಳಸಿದ್ಧರು.

ವೀರಶೈವ ಮತಚರಿತ್ರೆಯಲ್ಲಿ ಮರುಳಸಿದ್ಧ ಎಂಬ ಹೆಸರಿನ ವಿಭೂತಿಗಳು ಹಲಕೆಲವರು ಆಗಿಹೋಗಿದ್ದಾರೆ. ಪಂಚಾಚಾರ್ಯರಲ್ಲಿ ಪರಿಗಣಿತರಾದ ಆಚಾರ್ಯ ಮರುಳಸಿದ್ಧನೇ ಅಥವಾ ಮರುಳಾರಾಧ್ಯನೇ ಈ ಉಜ್ಜಯಿನಿಯ ಮರುಳಸಿದ್ಧನೆಂದು ಕೆಲವರ ನಂಬಿಕೆ ಎಂದು ತಿಳಿಯುತ್ತದೆ. ಆದರೆ ಪಂಚಾಚಾರ್ಯರ ಮರುಳಸಿದ್ಧನು ದಾರುಕನ ಅವತಾರವೆಂಬುದು ತತ್ಸಂಪ್ರದಾಯದ ಗ್ರಂಥಗಳಲ್ಲಿ ಸ್ಪಷ್ಟಗೊಂಡಿದೆ. ದೇಪಕವಿಯ ಮರುಳಸಿದ್ಧನಿಗೆ ದಾರುಕನ ಸಂಬಂಧವೇ ಇಲ್ಲವೆಂಬುದು ಈ ಕಾವ್ಯದಲ್ಲಿ ಎದ್ದು ಕಾಣುತ್ತದೆ. ಪಂಚಾಚಾರ್ಯ ಪಂಚವರ್ಣೋತ್ಪತ್ತಿ ಎಂಬ ಸಂಸ್ಕೃತ ಗ್ರಂಥದಲ್ಲಿ ಮರುಳಾ

ರಾಧ್ಯನು ದಾರುಕನ ಅವತಾರವೆಂದೂ ನಂದಿಗೋತ್ರ ಸಮುದ್ಭವನೆಂದೂ ಸ್ಪಷ್ಟವಾಗಿ ಹೇಳಿದೆ.

ಧಾರ್ವಾಡ ಜಿಲ್ಲಾ ಲಕ್ಷ್ಮೇಶ್ವರದಲ್ಲಿರುವ ಗೊಡಚಿ ವೀರಭದ್ರ ದೇವಾಲಯದಲ್ಲಿ ಪೂರ್ವಾಭಿಮುಖವಾಗಿ ಗೋಡೆಯಲ್ಲಿ ಇಂದಿಗೂ ಕಂಗೊಳಿಸುತ್ತಿರುವ ಶಿಲಾಶಾಸನದಲ್ಲಿ ಹೂಲಿಯ ಮರುಳಸಿದ್ಧೇಶ್ವರನ ವಿಚಾರವು ನಿರೂಪಿತವಾಗಿದೆ. ಈ ಹೂಲಿಯ (ಬೆಳಗಾವಿ ಜಿಲ್ಲಾ) ಮರುಳಸಿದ್ಧನು ರೇಣುಕಾಚಾರ್ಯನ ಅವತಾರವೆಂದೂ, ಪುಲಿಗೆರೆಯಲ್ಲಿ ಸಮಾಧಿಸ್ಥನಾದನೆಂದೂ ಆ ಮರುಳಸಿದ್ಧನ ಶಿಷ್ಯ ಪರ್ವತಶೆಟ್ಟಿಯು ತನ್ನ ಗುರುವಿನ ಹೆಸರಿನಲ್ಲಿ ಹೂದೋಟ, ಬಾವಿ, ಶಿವಾಲಯವನ್ನು ವಿರಚಿಸಿದನೆಂದೂ ಆ ಶಾಸನದಲ್ಲಿ ಹೇಳುತ್ತದೆ. ಈ ಶಾಸನವು ಕ್ರಿಸ್ತ ಶಕ ೧೫೧೨ರಲ್ಲಿ ಆದುದು. ಇದೂ ಅಲ್ಲದೆ ತುಮಕೂರು ಜಿಲ್ಲಾ ಕುಪ್ಪೂರು ಗ್ರಾಮದಲ್ಲಿ ಒಬ್ಬ ಮರುಳಸಿದ್ಧನೆಂಬ ಮಹಾತ್ಮನ ಸಮಾಧಿ ಇದೆ. ಈತನು ಸುಮಾರು ಎರಡು ಶತಮಾನಗಳಷ್ಟು ಹಿಂದಿನವನೆಂದು ತತ್ಸಂಬಂಧವಾದ ಕಥೆಗಳಿಂದ ತಿಳಿದುಬರುತ್ತದೆ. ವೀರಶೈವ ರತ್ನ ಗ್ರಂಥಕಾರರು (ಪುಟ ೨೫) "ಶ್ರೀ ದಾರುಕಾಚಾರ್ಯರು ದಧೀಚಿ ಮಹರ್ಷಿಗೆ ಶಿವಸಿದ್ಧಾಂತವನ್ನು ಉಪದೇಶಿಸಿ ಕೊಲ್ಲಾಪುರದ ಮಹಾಮಾಯೆಯ ಗರ್ವವನ್ನು ಭಂಗಮಾಡಿ ದೇವನಂದ ಮಹಾರಾಜನನ್ನು ಅನುಗ್ರಹಿಸಿ ಮಲ್ಲಿಕಾರ್ಜುನ ಶಿವಯೋಗಿ ಎಂಬುವನಿಗೆ ತಮ್ಮ ಉತ್ತರಾಧಿಕಾರವನ್ನು ಕೊಟ್ಟು ತಾವು ಅವತರಿಸಿದ ವಟವೃಕ್ಷ ಸಿದ್ಧೇಶ್ವರ ಲಿಂಗದಲ್ಲಿ ಅಡಗಿದರು" ಎಂದು ಹೇಳುತ್ತಾರೆ. ಈ ಮೇಲೆ ಕಂಡ ಎಲ್ಲ ವಿಷಯಗಳಿಂದ ದೇಪಕವಿಯ ಮರುಳಸಿದ್ಧನು ಪಂಚಾಚಾರ್ಯರಲ್ಲಿ ಪರಿಗಣಿತನಾದ ಆಚಾರ್ಯ ಮರುಳಸಿದ್ಧ ಅಥವಾ ಮರುಳಾರಾಧ್ಯನೆಂದು ಸ್ಪಷ್ಟವಾಗಿ ಹೇಳಲು ಅವಕಾಶವಿಲ್ಲೆಂದೂ ವೀರಶೈವ ಧಾರ್ಮಿಕ ಚರಿತ್ರೆಯಲ್ಲಿ ಪುಲಿಗೆರೆಯ ಮರುಳಸಿದ್ಧ, ಗದ್ದುಗೆಯ ಮರುಳಸಿದ್ಧ ಮೊದಲಾದ ಇನ್ನೂ ಹಲವು ಮಂದಿ ವಿಭೂತಿಗಳು ದೇಪಕವಿಯ ಮರುಳಸಿದ್ಧನಂತೆಯೇ ಹೆಚ್ಚು ಪ್ರಸಿದ್ಧರಾಗಿರುವರೆಂದೂ ಹೇಳಬೇಕಾಗಿದೆ.

ಮರುಳಸಿದ್ಧ ಕಾವ್ಯದ ಪೀಠಿಕೆಯಲ್ಲಿ ಶ್ರೀಮಾನ್ ಜೀರಗೆ ಕಟ್ಟೆಬಸಪ್ಪನವರು ಸಂಗ್ರಹಿಸಿರುವ ಮರುಳಸಿದ್ಧನ ಕ್ಷೇತ್ರಗಳ ಪರಿಚಯವನ್ನು ಕೊಡಲಾಗಿದೆ. ಆದರೆ, ಇನ್ನೂ ಹಲವು ಕಡೆ ಮರುಳಸಿದ್ಧನ ಕ್ಷೇತ್ರಗಳುಂಟೆಂದೂ ಈ ಗ್ರಂಥ ವಾಚಕರು ನೆನಪಿಡುವುದು ಆವಶ್ಯವಾಗಿದೆ. ಬೆಂಗಳೂರು ಜಿಲಾ

ಶಿವಗಂಗೆ, ದೇವನಹಳ್ಳಿ ಮತ್ತು ರೇವಣ ಸಿದ್ಧೇಶ್ವರ ಬೆಟ್ಟಗಳಲ್ಲಿ ಶ್ರೀ ಮರುಳ ಸಿದ್ಧನ ಸ್ಮಾರಕಗಳಿವೆ. ನಿಜಾಂನಾಡಿನ ಕೊಲ್ಲಿಪಾಕಿ ಕ್ಷೇತ್ರ, ಓರುಂಗಲ್ಲು ಮತ್ತು ಕೊಲ್ಲಾಪುರದ ಸಿದ್ಧಗಿರಿ ಕ್ಷೇತ್ರ, ಮೊದಲಾದ ಕಡೆಗಳಲ್ಲಿಯೂ ಶ್ರೀ ಮರುಳಸಿದ್ಧೇಶ್ವರನ ಸ್ಮಾರಕಗಳಿವೆ. ಈ ಸ್ಥಳಗಳಲ್ಲಿರುವ ಮರುಳ ಸಿದ್ಧರ ಕ್ಷೇತ್ರಗಳಿಗೂ, ದೀಪಕವಿಯು ಮರುಳಸಿದ್ಧನಿಗೂ ಏನಾದರೂ ಸಂಬಂಧವುಂಟೇ ಎಂಬುದು ಸಂಶೋಧನಾರ್ಹವಾಗಿದೆ. ಹೂಲಿಯ ಮರುಳ ಸಿದ್ಧನೆಂದೂ ರೇಣುಕಾಚಾರ್ಯರ ಅವತಾರವೆಂದೂ ಪ್ರಸಿದ್ಧನಾಗಿ ಈ ಹಿಂದೆ ಹೇಳಿದ ಲಕ್ಷ್ಮೇಶ್ವರದ ಶಾಸನೋಕ್ತ ಮರುಳಸಿದ್ಧನ ವಿಷಯವು ಐತಿಹಾಸಿಕ ದೃಷ್ಟಿಯಿಂದ ಗಣನಾರ್ಹವಾಗಿದೆ. ಹೂಲಿಯಲ್ಲಿ ಈತನ ಸಂಬಂಧವಾದ ಸ್ಮಾರಕ ವುಂಟೆಂದು ತಿಳಿದು ಬರುತ್ತದೆ. ಆದುದರಿಂದ ಉಜ್ಜನಿಯ ಮರುಳ ಸಿದ್ಧನಿಗೆ ಸಂಬಂಧಪಟ್ಟ ಈ ಗ್ರಂಥದಲ್ಲಿ ನಾವು ಇದುವರೆಗೆ ಹೇಳಿದ ಇತರ ಮರುಳಸಿದ್ಧರ ವಿಚಾರವನ್ನು ಕುರಿತು ಚರ್ಚಿಸುವುದು ಅವಶ್ಯವೂ ಅನಿ ವಾರ್ಯವೂ ಆಗಿದೆ.

ಸಂಪಾದಕರು ಮರುಳಸಿದ್ಧನ ಕಾವ್ಯದ ಪೀಠಿಕೆಯಲ್ಲಿ ಹಲವು ವಿಷಯ ಗಳನ್ನು ಸಂಗ್ರಹಿಸಿ ಹೇಳಿದ್ದಾರೆ. ಮರುಳಸಿದ್ಧನ ಕಾಲ ರೇವಣಸಿದ್ಧನ ಸಮಕಾಲ ವೆಂಬುದು ನಿರ್ವಿವಾದವಾಗಿದೆ. ಅವನು ಬರೆದ ವಚನ ಗ್ರಂಥ ವನ್ನು ಸಂಗ್ರಹಿಸಿ ಪ್ರಕಟಿಸುವುದು ಅವಶ್ಯವಾಗಿದೆ. ಉಜ್ಜನಿಯ ಮರುಳ ಸಿದ್ಧನು ಜನ್ಮತಃ ಹೊಲೆಯನೆಂದು ದೀಪಕವಿಯು ಹೇಳುವ ವಿಷಯ ಇತರ ಗ್ರಂಥಗಳಿಂದ ದೃಢಪಡದ ವರೆಗೆ ಈ ಹೇಳಿಕೆಗೆ ಬಿಡ ಭದ್ರಪಿಲ್ಲವಾಗಿದೆ.

---

# ದೇಪಕವಿಯ ಮರುಳ-ಸಿದ್ಧ-ಕಾವ್ಯ.

## ( ಸಾಹಿತ್ಯ ಸಮೀಕ್ಷಣ )

ಬರೆದವರು:— ಪಂಡಿತರತ್ನ ಚೆನ್ನಬಸವ ಕವಿಗಳು (ಶ್ರೀ ಶೈಲ ಸಂಸ್ಥಾನದಿಂದ)

" ಅಂತಿಗೆ ಅಂತು ಕೂಡಿದರೆ ಸಂತೆ " " ಅಗ್ಗಸೆಟ್ಟಿ ಮುಗ್ಗುಜೋಳ" ಈ ಮೊದಲಾಗಿ ಕನ್ನಡದಲ್ಲಿ ಗಾದೆಯ ಮಾತುಗಳಿವೆ. ಅವುಗಳ ಅರ್ಥವಿಷ್ಟೇ: ಕಾರ್ಯ-ಕಾರಣಗಳಲ್ಲಿ ಅಥವಾ ಕರ್ತೃ-ಕ್ರಿಯೆಗಳಲ್ಲಿ ಸಾಪೇಕ್ಷತೆಯಿರುವುದು. ಹಣಗಾರನಾದವನು ಹೊಚ್ಚ ಹೊಸ ಸರಕನ್ನೇ ಸಂತೆಯಲ್ಲಿ ತರುವ. ಅವನು ಮುಗ್ಗುಜೋಳದ ಮಾರಾಟಕ್ಕೆ ಮನಸ್ಸು ಮಾಡುವುದಿಲ್ಲ. ಮುಗ್ಗುಜೋಳ ವನ್ನು ಮಾರುವ ಸೆಟ್ಟಿಯಲ್ಲಿ ಭಂಡವಲು ಬಡವಾಗಿದೆಯೆಂದಾಗಲಿ ಬರಿದಾಗಿ ದೆಯೆಂದಾಗಲಿ ಯಾರೂ ತಿಳಿದುಕೊಳ್ಳಬಹುದು.

ಇತ್ತೀಚೆಗೆ 'ಮರುಳಸಿದ್ಧಕಾವ್ಯ' ಎಂಬುದೊಂದು ಹೊತ್ತಗೆ ಶ್ರೀ, ಅ. ನ. ಕೃಷ್ಣರಾಯರಿಂದ ಸಂಪಾದಿತವಾಗಿ ಬಯಲಿಗೆ ಬಂದಿದೆ. ಈ ಮರುಳ ಸಿದ್ಧ ಕಾವ್ಯ ಶುದ್ಧ ಮರುಳನ ಕಾವ್ಯ ಎಂದು ತೋರಿಸುವುದೇ ಈ ಬರೆಹದ ತಿರುಳು. ಇದಕ್ಕಾಗಿ ನಮ್ಮ ಅಭಿಪ್ರಾಯವನ್ನು ಮುಂದೆ ಕೊಡುವೆವು. ಸದ್ಯ: ದೇಪಕವಿ ಮತ್ತು ಅವನ ಕಾವ್ಯದ ಬಗೆಗೆ ಅದರ ಸಂಪಾದಕರೇ ಕೊಟ್ಟ ಮೆಚ್ಚುಗಾಗದವನ್ನು ಉದ್ಧರಿಸುವಾ ' ದೇಪ ಪಂಡಿತ ಕವಿಯೆಂದು ಒಪ್ಪುವುದು ಕಷ್ಟ. ವ್ಯಾಕರಣ ಛಂದಸ್ಸುಗಳಲ್ಲಿ ಅವನ ಪ್ರಾವೀಣ್ಯ ಮೊಟಕೆ. ಶಿವಸ್ತುತಿರೂಪವಾದ ಹಲವು ಪದ್ಯಗಳಲ್ಲಿ ಯಾವುದೂ ಮನಸ್ಸು ಮುಟ್ಟುವು ದಿಲ್ಲ. ಹರಿಹರನ ಉತ್ಕಟಭಕ್ತಿಯನ್ನು ಕಂಡು ಅವನ ರಗಳೆಯ ರಸಗಂಗೆ ಯಲ್ಲಿ ಮಿಂದವರಿಗೆ ದೇವನ ಶುಷ್ಕ ವರ್ಣನೆಗಳು ನೀರಸವಾಗಿ ಕಾಣುವುದ ರಲ್ಲಿ ಸಂದೇಹವಿಲ್ಲ. " ( ಪೀಠಿಕಾ ಪುಟ ೫೪ )

"... ...ಆದರೆ ಮರುಳಸಿದ್ಧನಂತಹ ಮಹಾವ್ಯಕ್ತಿಯ ಜೀವನ ಚರಿತ್ರೆ ಯನ್ನು ಬರೆಯುವ ಪಾಂಡಿತ್ಯ ಪ್ರತಿಭೆ ದೇವನಲ್ಲಿಲ್ಲವೆಂಬುದು ನಿರ್ವಿವಾದ" (ಪೀ. ಪು. ೫೨)

........ಆದರೆ ಮರುಳನು ಹುಟ್ಟಿದ್ದು, ಅವನು ಊರು ಬಿಟ್ಟದ್ದು, ಅವನ ಪವಾಡ ವರ್ಣಿತವಾಗಿರುವುದೇ ಹೊರತು ಅವನ ನೈತಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಯು ನಿರೂಪಿಸಲ್ಪಟ್ಟಿಲ್ಲ. ಒಟ್ಟಿನಲ್ಲಿ ಇದು ಉತ್ತಮ ಕಾವ್ಯವಲ್ಲವೆಂದು ಹೇಳಬಹುದು. (ಪೀಠಿಕಾ ಪುಟ ೫೩ ಶ್ರೀ. ದೇವೀರಪ್ಪನವರ ಅಭಿಪ್ರಾಯ. ಇವನ್ನು ಸಂಪಾದಕರು ಪೂರ್ಣವಾಗಿ ಅನುಮೋದಿಸಿದ್ದಾರೆ.)

ಈ ವರೆಗಿನ ಪ್ರಶಸ್ತಿ ಪತ್ರಿಕೆಗಳಿಂದ, ನಾವು ಪ್ರಾರಂಭದಲ್ಲಿ ಬರೆದ ಕನ್ನಡ ನಾಣ್ಣುಡಿಯಂತೆ, ದೇಪಕವಿ ಅಗ್ಗಸೆಟ್ಟಿಯೆಂದೂ ಮರುಳಸಿದ್ಧ ಕಾವ್ಯ ಮುಗ್ಗುಜೋಳವೆಂದೂ ವಾಚಕರಿಗೆ ಮನವರಿಕೆಯಾಗಿರಲು ಸಾಕು.

ಆದರೆ ಈ ಆಪ್ತವಾಕ್ಯಗಳನ್ನು ಕೆಲಹೊತ್ತು ಬದಿಗಿಡೋಣ, ನಿಷ್ಪಕ್ಷಪಾತತೆಯ ಬರೆಗಲ್ಲಿಗೆ ಈ ಕಾವ್ಯವನ್ನು ತಿಕ್ಕಿನೋಡೋಣ.

ಯಾವುದೊಂದು ಹೊತ್ತಗೆಯನ್ನು ವಿಮರ್ಶಿಸಬೇಕಾದರೆ (೧) ಕಥಾವಸ್ತು (೨) ಕಾವ್ಯರಚನೆಯ ಉದ್ದೇಶ (೩) ವಿಷಯ ನಿರೂಪಣಶಕ್ತಿ (೪) ಶೈಲಿ (೫) ಕರ್ತೃವಿನ ಬೌದ್ಧಿಕ ವೈಶಿಷ್ಟ್ಯ ಈ ಎಲ್ಲ ಅಂಶಗಳನ್ನು ನೋಡಬೇಕಾಗುವುದು.

(೧) ಕಥಾವಸ್ತು—ಉಜ್ಜಯಿನೀ ಪೀಠಗಳ ಗುರುಪರಂಪರೆಯಲ್ಲಿ ಒಬ್ಬರಾದ—ಅದರಲ್ಲಿಯೂ ಈಗಿರುವ ಕೊಟ್ಟೂರ ಬಳಿ ಉಜ್ಜಯಿನೀ ಪೀಠಸ್ಥಾಪಕರಾದ—ಮರುಳಸಿದ್ಧರ ಚರಿತ್ರೆ ಈ ಮರುಳಸಿದ್ಧಕಾವ್ಯದ ಕಥಾವಸ್ತುವಾಗಿದೆ. ಇಂತಹ ಮಹಾಮಹಿಮರು ಧೀರೋದಾತ್ತನಾಯಕರಲ್ಲಿ ಅಗ್ರಣಿಗಳು; ಅಥವಾ ಭಾವಿಕರ ತಿಳಿವಳಿಕೆಯಂತೆ ಅವತಾರ ಪುರುಷರು; ಇಲ್ಲವೆ ಶಿವಭಕ್ತರ ಅಭಿಪ್ರಾಯದಂತೆ ಶಿವನ ಅಥವಾ ಶಿವಗಣಂಗಳ ಅಂಶಾವತಾರಿಗಳು ಎಂದ ಮೇಲೆ ಕಥಾವಸ್ತು ಆದೇಯವಾದುದೇ ಎಂದು ಬೇರೆ ಹೇಳಬೇಕಾಗಿಲ್ಲ. ಆದರೆ ಕತೆಯನ್ನು ಕಟ್ಟುವಾಗ ಮಾದಿಗ ಮರುಳಪ್ಪನಿಗೂ ಮರುಳಸಿದ್ಧನಿಗೂ ಗಂಟುಹಾಕಹೋಗಿ ಕವಿ ಶಿವಪೂಜೆಯಲ್ಲಿ ಕರಡಿ (ಗೆ)ಯನ್ನು ಬಿಟ್ಟಿದ್ದಾನೆ.

ಕತೆಯನ್ನು ಆರಂಭಿಸುವಾಗ ದೇಪಕವಿ ವೀರಶೈವ ಕವಿಗಳ ಸಾಂಪ್ರದಾಯದಂತೆ ಶಿವಲೋಕ ಭೂಲೋಕಗಳನ್ನು ಹೊಂದಿಸಲು ಪ್ರಯತ್ನಿಸುತ್ತಾನೆ. ಭಕ್ತಜನರಿಗಾಗಿ ಕಾವ್ಯವನ್ನು ಬರೆಯುವಾಗ ಈ ಪದ್ಧತಿ ಕ್ಷಮ್ಯವೆಂದೇ ಒಪ್ಪೋಣ. ಆದರೆ ಸೃಷ್ಟಿಸಿರುವ ಸನ್ನಿವೇಶ ಎಂತಹದು?

ಗಳಿಂದ ದೇವಕವಿ ಬ್ರಾಹ್ಮಣನೂ ಅಲ್ಲ; ವೀರಶೈವನೂ ಅಲ್ಲ; ಅಲ್ಲದೆ ಬುದ್ಧಿಯಲ್ಲಿಯೂ ಮೇಲ್ಮಟ್ಟಕ್ಕಿರದ ಯಾವುದೋ ಪಂಗಡಕ್ಕೆ ಸೇರಿದವನಾಗಿರಬೇಕು. ಉಜ್ಜಯಿನೀ ಪೀಠಾಚಾರ್ಯರ ಪದದಲ್ಲಿ ಮಾದಿಗ ಮರುಳಪ್ಪನನ್ನು ಕುಳ್ಳಿರಿಸಬೇಕೆನುವ ಕವಿ ಯಾವ ಆತ್ಮೀಯತೆಯ ಪ್ರೇಮದಿಂದ ಹೀಗೆ ಮಾಡಿದನೋ. ಅದನ್ನು ವಿದ್ವಜ್ಜನರು ವಿಮರ್ಶಿಸಬೇಕಾಗಿದೆ.

ಮುಂದೆ ಪುರಾಣವನ್ನು ಓದುತ್ತ ಹೋದರೆ ಆ ಕಾವ್ಯ ಸಂಪಾದಕರು ಹೇಳುವಂತೆ ಇಡಿಯ ಕತೆಯೆಲ್ಲ ಪವಾಡಗಳ ಹಳಿಗಳ ಮೇಲೆಯೇ ಸಾಗಿದೆ. ಈ ಪವಾಡಗಳ ಗಲಾಟೆಯಲ್ಲಿ ದೇವಕವಿ ಮುಂದೆ ಮಾದಿಗರನ್ನು ಮರುಳಸಿದ್ಧನ ಪಶ್ಚಾತ್ ಗುರುಪರಂಪರೆಯನ್ನು ರಚಿಸಬೇಕೆಂಬುದನ್ನು ಮರೆತೇ ಬಿಡುತ್ತಾನೆ. ಮರುಳಸಿದ್ಧ ಮಾದಿಗನೇ ಆಗಿದ್ದರೆ ಅವನು ಸ್ವಜನೋದ್ಧಾರಕ್ಕಾಗಿ ಏನಾದರೂ ಹಾದಿಯನ್ನು ಹಾಕಿಕೊಡುವುದು ಅವಶ್ಯವಾಗಿದ್ದಿಲ್ಲವೇ ? ಅದೆಲ್ಲಿಯಾದರೂ ಇದೆಯೇ ಈ ಕಾವ್ಯದಲ್ಲಿ? ಬರಿಯ ಪವಾಡಗಳ ಮರುಳಾಟಕ್ಕೇ ಮರುಳಸಿದ್ಧ ಮಹಾತ್ಮನೆಂದು ಒಪ್ಪಬೇಕೇ ? ಕ್ರಿ. ಶ. ಕ್ಕಿಂತ ಮೊದಲೇ ನಮಗೆ ಈ ಭೂಲೋಕದ ಮಾನವರ ಇತಿಹಾಸ ಸಿಕ್ಕುತ್ತಿದೆ ಎಂದ ಮೇಲೆ ರಾಯರ ಕಾಲ ನಿರ್ಣಯದಂತೆ ೧೨ನೆಯ ಶತಮಾನದಲ್ಲಿ ಈ ಶಿಲಾದ ಮುನಿಯ ಶಾಪಪ್ರಸಂಗವನ್ನು ಹೇಗೆ ಒಪ್ಪಬೇಕು ?

ಈ ಶಿಲಾದ ಮುನಿಯ ವಿಷಯದಲ್ಲಿ ಇನ್ನೊಂದು ಸಂಶಯ ಹೊರಡುವಂತಿದೆ. ಶ್ರೀ ಷಡಕ್ಷರ ದೇವಕವಿ ತನ್ನ ರಾಜಶೇಖರ ವಿಳಾಸದ ನಾಂದೀ ಪದ್ಯದಲ್ಲಿ ' ಶ್ರೀ ಶೈಲಾದಿ ಪ್ರಸಿದ್ಧಂ ... ... .. ನಂದಿಕೇಶಂ ಮಹೇಶಂ" ಎಂದು ವೃಷಭೇಶ್ವರ ಮಹಿಮೆಯನ್ನು ಹೇಳುವಾಗ ಶಿಲಾದ ಮುನಿಯ ಹೆಸರನ್ನೆತ್ತುತ್ತಾನೆ. ಈ ವೃಷಭೇಶನ ಹೆಸರು ದೇವಕವಿಯ ಕಾವ್ಯದಲ್ಲಿಯೂ ಕಾಣುತ್ತಿದೆ. ಎಂದ ಮೇಲೆ ಕ್ರಿ. ಪೂ-ದ ಯಾವುದೋ ಅಜ್ಞಾತಕಾಲದಲ್ಲಿ ವೃಷಭೇಶನ ತಂದೆಯಾಗಿದ್ದ ಶಿಲಾದಮುನಿ ಕ್ರಿ ಶ. ದ ೧೨ನೆಯ ಶತಕದ ಮೇಲೆಯೂ ಬದುಕಿದ್ದನೇ ? ರಾಯರ ಸಂಶೋಧನೆ ಏನೆಂದು ಉತ್ತರ ಕೊಡುತ್ತಿದೆ ಇದಕ್ಕೆ? ವಾಸ್ತವತೆಯ ದೃಷ್ಟಿಯಿಂದ ನೋಡಿದರೆ ದೇವಕವಿಯ ಶಿಲಾದ ಮುನಿ ೧೨ನೆಯ ಶತಮಾನದವನಿರಬೇಕು. ಎಂದ ಮೇಲೆ ಒಂದೇ ಹೆಸರಿನ ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ಕಾಲದಲ್ಲಿರುವುದು ಅಸಂಭವವೇನೂ ಆಗಲಿಲ್ಲವಷ್ಟೇ ! ಇದು ತಿಳಿದರೆ ಉಜ್ಜಯಿನೀ ಪೀಠಾಚಾರ್ಯರಾದ ಮರುಳಾರಾಧ್ಯರು—ಮರುಳಸಿದ್ಧರು—ಮಾದಿಗ ಮರುಳಪ್ಪ ಈ ನಾಮ

ಸಾಮ್ಯದಿಂದ ತರ್ಕದ ತಗ್ಗಿನಲ್ಲಿ ಬಿದ್ದು ತಲೆಯೊಡೆದುಕೊಳ್ಳುವ ಪ್ರಸಂಗವೇ ಬರುವುದಿಲ್ಲ.

ಇನ್ನು, ಈ ದೇಪಕವಿಯ ಕಾವ್ಯದಲ್ಲಿ ಬರುವ ಪವಾಡಗಳನ್ನು ಓದಿದರಂತೂ, ಹನ್ನೆರಡನೆಯ ಶತಮಾನದಲ್ಲಿ ನಡೆಯಬಹುದಾದ ಹುಚ್ಚಾಟಗಳೇ ಇವು ? ಎಂದು ಕೇಳಬೇಕಾಗುತ್ತಿದೆ. ಇಂತಹ ಹುಚ್ಚಾಟಗಳ ರಾಡಿಯಿಂದ ತುಂಬಿದ ಹುಚ್ಚು ಹೊಳೆಯನ್ನು ಕಣ್ಣಾರೆ ಕಂಡರೂ ಈ ನೀರು ಗಂಗಾಜಲದಂತೆ ಪವಿತ್ರವಾಗಿದೆ, ಇದು ಐತಿಹಾಸಿಕ ಕಾವ್ಯದಂತೆ ಆಧಾರ ಗ್ರಂಥವಾಗಿದೆ-ಎಂದು ಸಂಪಾದಕರು ಹೇಳುವುದು ವ್ಯುತ್ಪನ್ನತೆಯ ವಿಮರ್ಶೆಯೋ ?

ಈ ಮುಂದೆ ಬರುವ ಕಥಾಂಶಗಳಲ್ಲಿಯೂ ಅನೇಕ ವಿಸಂಗತಿಗಳು ತೋರುತ್ತಿವೆ. ಕತೆಯನ್ನು ಸಹ ಅನುಸ್ಯೂತವಾಗಿ ಹೆಣೆಯುವ ಚಾತುರ್ಯವಿಲ್ಲ ದೇಪಕವಿಯಲ್ಲಿ. ಈ ಎಲ್ಲ ಅಂಶಗಳನ್ನು ಬೇರೆ ಬೇರೆ ಬರೆಹಗಾರರು ಇದೇ ಸಂಚಿಕೆಯಲ್ಲಿ ಬಗೆಬಗೆಯಿಂದ ವಿಮರ್ಶಿಸಿದ್ದಾರೆ ಆದುದರಿಂದ ಪಿಷ್ಟಪೇಷಣ ಕ್ರಮವನ್ನು ಕೈಕೊಳ್ಳುವ ಅಚಾತುರ್ಯವಾಗಬಾರದೆಂದು ಇಲ್ಲಿಗೇ ಈ ಭಾಗವನ್ನು ಬಿಡುವೆವು

(೨) ಕಾವ್ಯರಚನೆಯ ಉದ್ದೇಶ— ಶಿವನ ಅಥವಾ ಶಿವಶರಣರ ಕತೆಯನ್ನು ವೀರಶೈವ ಕವಿಗಳು ಸಮಾಜಕ್ಕೆ ಆದರ್ಶರೂಪದಲ್ಲಿಟ್ಟಿದ್ದಾರೆ; ಕಾವ್ಯಗಳನ್ನು ಕಟ್ಟಿದ್ದಾರೆ. ಆ ಕಾವ್ಯಗಳ ಪ್ರಭೆ ಪತಿತರನ್ನು ಪಾವನಮಾಡುತ್ತಿದೆ; ಮಂಗಾಣಿಪರನ್ನು ಮಾರ್ಗಕ್ಕೆ ಹಚ್ಚುತ್ತಿದೆ; ಬುದ್ಧಿಯ ಬಾಳಿನಲ್ಲಿ ಬೆಳಕನ್ನು ಕೆಡಹುತ್ತಿದೆ ! ಹೀಗೆ ಈ ದೇಪಕವಿಯೂ ಅದೇ ಉದ್ದೇಶದಿಂದಲೇ ಶರಣರ ಕತೆಯನ್ನು ಸಂಪಾದಿಸಿದ್ದರೆ ಅದೆಷ್ಟು ಆನಂದವಾಗುತ್ತಿತ್ತು ? ಆದರೆ ಸತ್ಯದ ಅಪಲಾಪಮಾಡುವ ದೇಪಕವಿಯ ಉದ್ದೇಶವೇನಿರಬೇಕು ? ಆ ಅಸತ್ಯವನ್ನಾದರೂ ಕೊಯ್ದು ಮೋಟು ಸಿಕ್ಕದಂತೆ ಸಾಧಿಸಿದ್ದಾನೆನ್ನಬೇಕೆ ? ಅದೂ ಇಲ್ಲ. ಹೆಜ್ಜೆ ಹೆಜ್ಜೆಗೆ ಎಡಹಿ ಬಿದ್ದಿದ್ದಾನೆ; ಶಾಸ್ತ್ರಾರ್ಥಗಳ ಸಂಸ್ಕೃತಿ ಹಾಗಿರಲಿ; ಲೋಕವ್ಯವಹಾರವೂ ತನ್ನಲ್ಲಿ ಇಲ್ಲ ಎನ್ನುವ ತುಂಭತನವನ್ನು ತೋರಿಸಿದ್ದಾನೆ. ಎಂದಮೇಲೆ ಈ ಕಾವ್ಯವನ್ನು ಬರೆಯುವದರಲ್ಲಿ ಆತನ ಉದ್ದೇಶವೇನಿರಬೇಕು, ಎಂದು ಮತ್ತೆ ಮತ್ತೆ ಕೇಳಬೇಕಾಗುತ್ತಿದೆ. ಆಗಿನ ಕಾಲದಲ್ಲಿ ಯಜ್ಞಯಾಗಾದಿ ಕರ್ಮ ಪ್ರಧಾನವಾದ ಬ್ರಾಹ್ಮಣಧರ್ಮವನ್ನು ಹಳಿದಿರುವುದಂತೂ ಸರಿಯೇ. ವೀರಶೈವ ಸಂಪ್ರದಾಯ ಶಾಸ್ತ್ರಗಳ ಪರಿಚಯ ಇಲ್ಲದಿರುವುದರಿಂದ

ವೀರಶೈವ ಧರ್ಮವನ್ನೂ ತೆಗಳಿದಂತಾಗಿದೆ. ಹೋಗಲಿ, ಅನಾದಿಕಾಲದಿಂದ ಪೂಜ್ಯವೆನಿಸಿದ ಉಜ್ಜಯಿನೀ ಪೀಠಕ್ಕೆ ಹೊಲೆ ದೀಕ್ಷೆಯನ್ನು ಕೊಟ್ಟಿರುವುದು ಅವನೊಬ್ಬ ಅಹಂಮನ್ಯನೆಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಅಹಂಮನ್ಯತೆಯು ಅಂಧಕಾರದಲ್ಲಿ ಗುರಿಗಮ್ಯಗಳಿಲ್ಲದೆ ತೊಳಲಾಡಿದ್ದಾನೆ. ಕಾವ್ಯದ ತುಂಬ ಎಲ್ಲಿಯೂ ದಡವನ್ನು ಮುಟ್ಟಿಲ್ಲ. ಒಟ್ಟಾರೆ, ದೇಪಕನಿಂದ ಗ್ರಂಥ ಇಂತಹುದೇ ಎಂದು ಹೇಳಲು ಒಪ್ಪವೆನಿಸಬಹುದಾದರೂ ಇದು ಸದುದ್ದೇಶ ಪ್ರೇರಿತವಾಗಿಲ್ಲ ಎಂದು ನಿಚ್ಚಳವಾಗಿ ನುಡಿಯಬಹುದು. ಏಕೆಂದರೆ ಇದೇ ಮುರುಳಸಿದ್ಧರ ಚರಿತ್ರವನ್ನು ಬೇರೆ ಕವಿಗಳು ಬರೆದಿದ್ದಾರೆ, ಅವರು ಈ ಮಾ[illegible]ಗನ ಮುರುಳಪ್ಪನಿಗೂ ಮುರುಳಸಿದ್ಧರಿಗೂ ಏಕೆ ಗಂಟುಹಾಕಿಲ್ಲ? ಇದನ್ನು ಸಹೃದಯರೇ ಸಮೀಕ್ಷಿಸಲಿ!

೩. ವಿಷಯ ನಿರೂಪಣಶಕ್ತಿ-- ಈ ವಿಚಾರದಲ್ಲಿ ಸಂಪಾದಕರ ಮುತ್ತಿತರರ ಹೇಳಿಕೆ ಈ ಮೊದಲೇ ಕೊಟ್ಟಿದೆ. ಯಾವ ವಿಷಯವನ್ನೂ ಕೂಲಂಕಷವಾಗಿ ಬಣ್ಣಿಸುವ ಬಿಗುವಿಲ್ಲ ಈ ದೇಪಕವಿಯಲ್ಲಿ. ಆದರಿಂದಲೇ ಆತನ ದುರುದ್ದೇಶ ಸರಿಯಾಗಿ ಸಾಧಿಸಿಲ್ಲ ಈ ಕಾವ್ಯದಲ್ಲಿ. ಕಥಾನಾಯಕನ ಪಾತ್ರ ಪರಿಪೋಷಣೆಯಲ್ಲಿ ಸಹ ನಾಯಕನ ಮರುಳಾಟವೇ ಎದ್ದು ಕಾಣುತ್ತಿದೆ; ಹೊರತಾಗಿ ಉದಾತ್ತತೆ ಒಡೆದು ತೋರುವುದಿಲ್ಲ. ರಸಾಲಂಕರಿಸಿದ ಶೃಂಗಾರ ಕೇವಲ ಅಶ್ಲೀಲರೂಪವನ್ನು ಹೊಂದಿದೆ. ಎಷ್ಟು ಕಾ[illegible]ವ ಒಂದೇ ಒಂದು ರಸವೆಂದರೆ ಭೀಭತ್ಸ! ಎಂದ ಮೇಲಿದೆಂತಹ ಅದೆಂಥ [illegible]ವಾಗಬಹುದೋ!

(೪) ಶೈಲಿ—ಸಾಹಿತ್ಯದ ಲಕ್ಷಣಗಳ ಒರೆಗಲ್ಲ[illegible] ಈ ಕಾವ್ಯವನ್ನು ಒರೆಯಬೇಕೆನ್ನುವುದೂ ಹೀನಾಯವೆನಿಸುವಂತಿದೆ. ಕಾವ್ಯ ಲಕ್ಷಣದಲ್ಲಿ ಅತಿ ಸಾಮಾನ್ಯವೆನಿಸುವ ಛಂದೋಬದ್ಧತೆ ಕೂಡ ಎಷ್ಟು ಪದ್ಯಗಳಲ್ಲಿ ಸಿಕ್ಕಬಹುದೋ! ವ್ಯಾಕರಣ ದೋಷಗಳೋ! ಅವುಗಳನ್ನೆಲ್ಲ ಎಂಟು ಎತ್ತು ಕಟ್ಟಿ ಎಳೆಸಬೇಕು. ಶಬ್ದಗಳ ಅಪಭ್ರಂಶರೂಪ ಅರಿಸಮಾಸ--ಅಸಂಗತಾರ್ಥಗಳು ಅದೆಷ್ಟೋ! ಈ ಮಾತಿನ ನಿಜತ್ವವನು ನೋಡಬೇಕಾದರೆ ವಾಚಕರು ದೇಪಕವಿಯ ಮುರುಳಸಿದ್ಧ ಕಾವ್ಯದಲ್ಲಿಯ ಎರಡನೆ ಪದ್ಯವನ್ನು ನೋಡಬಹುದು. ಅಲ್ಲಿ ಒಂದಿಲ್ಲೊಂದು ಬಗೆಯ ದೋಷ ತೋರಿಯೇ ತೋರುವುದು. ಆದರೂ ಪ್ರಾಸ[illegible] ಒಂದು ಅಬದ್ಧ ಕಂತೆಯನ್ನಾದರೂ ಕಾವ್ಯರೂಪದಲ್ಲಿ ತಂದಿದ್ದಾನಲ್ಲ! ಈ ಸಾಹಸಕ್ಕಾಗಿ ನಾವು ಆತನಿಗೆ ಧನ್ಯವಾದಗಳನ್ನು ಕೊಡಬೇಕು

(೫) ಕೃತಿ ಕರ್ತೃವಿನ ಬೌದ್ಧಿಕ ವೈಶಿಷ್ಟ್ಯ—ಹಿಂದಿನ ಎಲ್ಲ ವಿಚಾರಗಳಲ್ಲಿ ದೇಪಕವಿಯ ಬೌದ್ಧಿಕದ ಆಳ ಎಷ್ಟು ಎಂಬ ಅಂಶ ಸ್ಪಷ್ಟವಾಗಿದೆ. ಅದನ್ನೇ ಆ ಕಾವ್ಯ ಸಂಪಾದಕರೂ ಸಹಾಯ್ಯಕರೂ ಅನುಮೋದಿಸಿಯೇ ಇದ್ದಾರೆ. ಇಲ್ಲಿ ಮತ್ತೆ ಮತ್ತೆ ಆ ವಿಷಯವನ್ನು ಬರೆಯುವುದು ತೌಡು ಕುಟ್ಟಿದಂತಾಗಬಹುದು.

ಈ ವರೆಗಿನ ವಿವೇಚನೆಯಿಂದ ದೇಪಕವಿಯ ಮುರುಳಿಸಿದ್ಧ ಕಾವ್ಯ ತುಪ್ಪಮುರುಳಿ ಕಾವ್ಯ ಅರ್ಥಾತ್ ಮುಗ್ಗುಜೋಳ ಎಂಬುದು ಸಹೃದಯರಿಗೆಲ್ಲ ಸ್ಪಷ್ಟವಾಗಿರಬೇಕು. ಇಂತಹ ಮುಗ್ಗು ಜೋಳವನ್ನು ಸಮಾಜದ ಸಂತೆಯಲ್ಲಿ ತರಲು ಶ್ರೀ ಅ. ನ. ಕೃಷ್ಣರಾಯರಿಗೆ ಅವಸರವೇನಿತ್ತು ? ಅವಶ್ಯಕತೆಯೇನಿತ್ತು ? ಅಧಿಕಾರವೇನಿತ್ತು ? ಇದೀಗ ವಿಚಾರಮಾಡತಕ್ಕ ವಿಷಯ.

ವಸ್ತುತಃ, ವಿಮರ್ಶೆಯಲ್ಲಿ ಕರ್ತೃವಿನ ವ್ಯಕ್ತಿತ್ವದ ವಿಮರ್ಶೆಯಿರಕೂಡದು ಈ ಬಗೆಯ ವಿಮರ್ಶೆ ಕೆಲವು ಸಹೃದಯರಿಗೆ ಒಪ್ಪುವುದಿಲ್ಲ ಇದು ಮಾನ್ಯ ವಿಚಾರವೂ ಅಹುದು. ಆದರೆ ಕೃತಿಯ ವಿಮರ್ಶೆಮಾಡುವಾಗ ಕರ್ತೃವಿಗೂ ಅದರ ಜಳ ತಾಕದೆ ಹೋಗುವುದಿಲ್ಲ. ಈ ಮಾತಿಗೆ, ಶ್ರೀ. ಅ. ನ. ಅವರು ದೇಪಕವಿಯ ವಿಚಾರದಲ್ಲಿ ಕೊಟ್ಟ ಸರ್ಟಿಫಿಕೇಟೇ ಸಾಕ್ಷಿ; ಎಂದ ಮೇಲೆ, ನಾವೂ ಅದೇ ಜಾಡನ್ನು ಹಿಡಿದು ಹೋದರೆ ತಪ್ಪೇನು ? ವ್ಯವಹಾರ ಶಾಸ್ತ್ರವಾದರೂ ಇದನ್ನು ಒಪ್ಪಿಯೇ ಒಪ್ಪುತ್ತದೆ ಸಂಗೀತವನ್ನು ಕೇಳಬೇಕಾದುದು ಕಿವಿಯಿಂದ; ಆದರೆ ಗದ್ದಲದಲ್ಲಿ ಸುಗ್ಗಿಯಾದರೂ ಸಂಗೀತಗಾರನ ಮುಖವನ್ನು ನೋಡದೆ ಯಾರೂ ಬಿಡುವುದಿಲ್ಲ. ಕರ್ಮವನ್ನು ವಿಮರ್ಶಿಸುವಾಗ ಕರ್ತೃವಿನ ಸಂಬಂಧವೂ ಬರಬೇಕಾದುದು ಅನಿವಾರ್ಯ.

ಈ ಕಾರಣಗಳಿಂದ, ಶ್ರೀ. ಅ. ನ. ಕೃ. ಅವರ ‘ ಮುರುಳಿಸಿದ್ಧ ಕಾವ್ಯದ ’ ಸಂಪಾದನೆಯ ಸೌಜನ್ಯವನ್ನು ಸಮೀಕ್ಷಿಸೋಣ.

ಕಾವ್ಯ ಸಂಪಾದನೆಯನ್ನು ಸಮಾಲೋಚಿಸುವಾಗ,

(೧) ಸಂಪಾದಕರ ವೈಯಕ್ತಿಕ ಯೋಗ್ಯತೆ. (೨) ಸಂಪಾದಕಿಯ ಉದ್ದೇಶ (೩) ಸಾಧನ ಸಲಕರಣೆಗಳು. (೪) ಸಂಪಾದಿಸಿದ ರೀತಿ (೫) ಸಮ್ಯಕ್‌ಫಲ ಈ ವಿಚಾರಗಳನ್ನು ಇದಿರಿಗಿಟ್ಟುಕೊಳ್ಳಬೇಕಾಗುವುದು.

(೧) ಸಂಪಾದಕರ ವೈಯಕ್ತಿಕ ಯೋಗ್ಯತೆ–ಶ್ರೀ. ಅ. ನ. ಕೃ. ಅವರು ಉದಯೋನ್ಮುಖ ಸಾಹಿತಿಗಳು. ಅವರ ಸಾಹಿತ್ಯವಾಹಿನಿ ಆಳದಲ್ಲಿ ಕಡಮೆಯಾದರೂ ಅಗಲದಲ್ಲಿ ಮಾತ್ರ ಬೇಕಾದಷ್ಟು ವಿಶಾಲವಾಗಿದೆ. ಅವರು 'ಬ್ರಿಲಿಯಂಟ್ ರಾಯ್ಟರ್' ಎಂದು ನಮ್ಮ ಗೆಳೆಯರೊಬ್ಬರು ಹೇಳಿದ ಮಾತು ರಾಯರ ಪ್ರತಿಯೊಂದು ಕೃತಿಯಲ್ಲಿಯೂ ಕಂಗೊಳಿಸುತಿದೆ. ಲಲಿತ ಕತೆ ಕಾದಂಬರಿಗಳಲ್ಲಂತೂ ಅವರದು ಎತ್ತಿದಕೈ. ಬಹುತಃ ಸಾಹಿತ್ಯದ ಎಲ್ಲ ಶಾಖೆಗಳನ್ನೂ ಕೊರಿಸಿದ್ದಾರೆ ರಾಯರು, ಎನಬಹುದು ಆದರೆ ಅದರಲ್ಲಿ ಕೆಲವು ಗುರಿಮುಟ್ಟದಿದ್ದರೆ ಕರ್ತೃವಿಗೆ ಕುಂದಕವೇನೂ ಇಲ್ಲ. ಏಕೆಂದರೆ ಯಾವಯೋದ್ಧನೂ ಎಲ್ಲಾ ಆಯುಧಗಳಲ್ಲಿ ಸಮವಾದ ರಣಕೌಶಲ್ಯವನ್ನು ತೋರಿಸಲಾರ. ಅರ್ಜುನನಿಗೆ ಗಾಂಡೀವ ವಿದ್ಯೆಯಲ್ಲಿದ್ದ ಬಲ ಗದಾಯುದ್ಧದಲ್ಲಿಲ್ಲವಾದರೆ ಅವನು ಶೂರನಲ್ಲವೆಂದು ತೆಗಳಬೇಕೇ? ರಾಯರ ಲೆಕ್ಕಣಿಕೆಯು ಕೈಹರಿತವಾಗಿದ್ದಂತೆ ನಾಲಗೆಯೂ ಬಲು ಚಪಲವಾಗಿದೆ. ಹೇಳುವ ಶೈಲಿಯಲ್ಲಾಗಲಿ ವಿಷಯದಲ್ಲಾಗಲಿ ಅನುಭವದ ಆಳಕಡಮೆಯಾಗಿದ್ದರೂ ವ್ಯಾಸಂಗದ ವಿಸ್ತಾರ ಹೆಚ್ಚಾಗಿಯೇ ಇರುತ್ತಿದೆ. ಈ ವ್ಯಾಸಂಗದ ಜೊತೆಗೆ ಪ್ರಾಮಾಣಿಕ ಅನುಭವವೂ ಆಳವಟ್ಟದಾದರೆ ಅವರೊಬ್ಬ ಉದಿತೋದಿತ ಶಕ್ತಿಶಾಲಿ ಸಾಹಿತಿಗಳಾಗಬಹುದೆಂದುದನ್ನು ಧಾರಾಳವಾಗಿ ಹೇಳಬಹುದು. ಆದರೆ ದೇಶಕವಿಯ ಮರುಳಸಿದ್ಧ ಕಾವ್ಯ ಸಂಪಾದನೆಯಲ್ಲಿ ರಾಯರು ತಮ್ಮ ವಿಸ್ತೃತಪ್ರಸಂಗಕ್ಕೆ ಆಳವಾದ ಅನುಭವವನ್ನು ಅಳವಡಿಸಿಕೊಳ್ಳಲಿಲ್ಲ; ಅತಿವಿಶ್ವಾಸ ( over confidence )ವನ್ನು ಆಧಾರಮಾಡಿಕೊಂಡರು: ಅಪಹಾಸ್ಯಕ್ಕೆ ಹಾದಿಯನ್ನು ಹಾಕಿಕೊಂಡರು. ಈ ಅತಿವಿಶ್ವಾಸದ ಬಗೆಗೆ ಅವರ ಶಬ್ದಗಳನ್ನೇ ನೋಡಿರಿ.— ವೀರಶೈವ ಸಾಹಿತ್ಯ ಪ್ರಪಂಚದಲ್ಲಿ ಸರಿಯಾದ ಕೆಲಸ ಮಾಡಲು ವೀರಶೈವ ವಿದ್ವಾಂಸರಿಗೇ ಹಲವು ಪ್ರಮೇಯಗಳು ಒದಗುವಾಗ 'ವೀರಶೈವೇತರ ವಿದ್ವಾಂಸರ" ಕಷ್ಟನಷ್ಟಗಳೆಷ್ಟೆಂಬುದನ್ನು ವರ್ಣಿಸಬೇಕಾಗಿಲ್ಲ. ( ಮುನ್ನುಡಿ ಪು. ೧. ) " ಕನ್ನಡದಲ್ಲಿ ......ಕಾವ್ಯ ಪುರಾಣಗಳು ..ಅಚ್ಚಾಗಿ ಹೊರಬೀಳಬೇಕೆಂದು 'ವಿದ್ಯಾವಕ್ಷಪಾತಿಗಳ ಇಚ್ಛೆ." (ಮು. ಪು. ೧) " ಜಾತಿ ಮತಗಳ ಗೊಂದಲಕ್ಕೆ ಬೇಸತ್ತವರೂ ಅಸ್ಪೃಶ್ಯತೆಯ ರಾಕ್ಷಸೀ ವರ್ತನಕ್ಕೆ ಸಿಡಿಮಿಡಿಗೊಳ್ಳುವವರೂ ಆದ ನಮಗೆ ......." (ಮು. ಪು ೨) ಮುಂತಾಗಿ ಹೀಗೆ 'ನನ್ನನ್ನು ನಾನೇ ಕಂಡೆ" ಎಂಬ ರಾಯರಿಗೆ 'ನನಗೆ ನಾನೇ ಪದವಿಗಳನ್ನು ಕೊಟ್ಟುಕೊಂಡೆ" ಎಂಬ ಅತಿ ವಿಶ್ವಾಸದ ಹಾದಿಯಲ್ಲಿರುವ ಕಲ್ಲು ಮುಳ್ಳುಗಳು ಕಾಣದಿದ್ದರೆ ಆಶ್ಚರ್ಯವೇನು ? ಅವು ಅವರಿಗೆ ನಟ್ಟುದಾದರೆ ತಪ್ಪು ಯಾರದು ?

ಆದರೆ ಅವೇಕಲ್ಲು ಮುಳ್ಳುಗಳನ್ನು ಮುಂದಿಯ ಹಾದಿಯಲ್ಲಿಯೂ ಹರಡಬೇಕೆನುವುದು ಮಾತ್ರ ಸಾಹಿತಿಗಳಿಗೆ ಸಲ್ಲದ ಸಂಗತಿ. ಇದು ರಾಯರಿಗೆ ತಿಳಿಯ್ತೆಂದಲ್ಲ ಅದಕ್ಕಾಗಿ ಮೊದಲೇ ಗದ್ದರಿಕೆ ಹಾಕಿದ್ದಾರೆ—ವಿದ್ಯೆಯ ಜಗತ್ತಿನಲ್ಲಿ ವಾದ ಗಂಧ ತೇಯಂತಿರಬೇಕಲ್ಲದೆ ಬಿದಿರನ್ನು ತಿಕ್ಕಿ ಬೆಂಕಿಯನ್ನು ಹುಟ್ಟಿಸಿದಂತಿರಬಾರದು. ಇದು ಮುಂದಿಯ ಮುಟ್ಟಿಗೇ ವಿ ಸೋ. ಸ್ವತಃಕ್ಕೆ ಮಾತ್ರ ಅನ್ವಯಿಸಲಿಲ್ಲ. ರಾಯರು ಈ ಮರುಳಸಿದ್ಧಕಾವ್ಯ ಸಂಪಾದನೆಮಾಡಿದುದರಿಂದ ಯಾವ ಸುಗಂಧ ಸೂರೆಯಾಯಿತೋ ನಮಗೆ ತಿಳಿಯದು; ಮಾತ್ರ ಆ ಸಮಾಜದಲ್ಲಿ ಬೆಂಕಿಯ ಬೆಳಕು ಚೆನ್ನಾಗಿ ಬಿದ್ದಿತು. ಅದು ಕೂಡ ಕೇವಲ ಬಿದಿರನ್ನು ತಿಕ್ಕಿದ ಬೆಂಕಿಯಲ್ಲ; ಗುರುವಿರಕ್ತಕಲಹದಿಂದ ಮೊದಲೇ ಹೊಗೆಯಾಡುತ್ತಿದ್ದ ಬಣವೆಯಲ್ಲಿ ಭುಗ್ ಎಂದು ಉರಿದೆದ್ದ ಬೆಂಕಿ! ಈ ಬೆಂಕಿಯ ಬೆಳಕು ಯಾರಿಗೆ ತಾರಕವಾಗಬಲ್ಲುದು?

(೨) ಉದ್ದೇಶ-ವಸ್ತುತಃ ವಿಚಾರಮಾಡಿದರೆ ಈ ಮರುಳಸಿದ್ಧ ಕಾವ್ಯ ಸಂಪಾದನೆ ಮಾಡಲು ಶ್ರೀ. ಅ. ನ. ಕೃ —ಅವರಿಗೆ ಯಾವ ಅಧಿಕಾರವಿದೆ? ಇದು ವೀರಶೈವ ಸಂಪ್ರದಾಯದ ಕಾವ್ಯ ವಷ್ಟೇ! ಇವರಲ್ಲಿ ಅಸ್ಪೃಶ್ಯತೆಯ ವಿಷಯ ವಿರಬಹುದು. ಈ ಅಸ್ಪೃಶ್ಯತೆಯ ಕಲಂಕವನ್ನು ತೊಡೆದು ಹಾಕಲು ಮನಸ್ಸುಮಾಡಿದವರೆಂದರೆ ಎಂದಿನಿಂದಲೂ ವೀರಶೈವ ಸಮಾಜದವರೇ ಎಂಬುದನ್ನು ಯಾರೂ ಮರೆಯದಿರಲಿ! ಸ್ಪೃಶ್ಯಾಸ್ಪೃಶ್ಯತೆ— ಮುಟ್ಟಬೇಡತನ ಯಾವ ಸಮಾಜಕ್ಕೇ ಬುದ್ಧಿ ಹೇಳಹೋಗುವುದು ಅತಿಪ್ರಸಂಗವೆನಿಸುವುದಿಲ್ಲವೇ? ಆ ಸಮಾಜಕ್ಕೆ ಬೇಕಾದರೆ ರಾಯರು ಬುದ್ಧಿಯನ್ನು ಕೇಳಬೇಕಾಗಿದ್ದಿತು. ಅದನ್ನು ಬಿಟ್ಟು, ಎಂದೆಂದಿಗೂ ಅಸ್ಪೃಶ್ಯತೆಯನ್ನು ಕಳೆಯುವುದಕ್ಕೆ ಕಂಕಣಬದ್ಧರಾದ ವೀರಶೈವ ಸಮಾಜಕ್ಕೇ ಬುದ್ಧಿ ಹೇಳಹೋಗುವುದು. ಅತಿಪ್ರಸಂಗವೆನಿಸುವುದಿಲ್ಲವೇ? ಇದೂ ಇರಲಿ. ಮರುಳಸಿದ್ಧ ಕಾವ್ಯ ವೀರಶೈವ ಸಮಾಜಕ್ಕೆ ಸಂಬಂಧಿಸಿದುದಷ್ಟೇ. ಯಾವ ಮತಸ್ಥಾಪಕರೂ ತನ್ನ ಮತಕ್ಕೆ ಅಸನ್ಯ ಸಾಧಾರಣವಾದ ಮತಪ್ರಕ್ರಿಯೆಗಳನ್ನು ಇಟ್ಟೇಇರುತ್ತಾರೆ. ಆ ಆ ಸಂಪ್ರದಾಯ ನಿಷ್ಠರಿಗೇ ಅವು ಸರಿಯಾಗಿ ತಿಳಿಯಬೇಕಾದರೆ ನಾಕು ಬೇಕಾಗುತ್ತಿದೆ. ಹೀಗಿರುವಾಗ ಆಗಂತುಕನೊಬ್ಬ ಹೊರಗಿನ ಕಟ್ಟಡವನ್ನು ಕಂಡು ಅಂತರಂಗವನ್ನು ಅರಿತಿರುವೆನೆಂದು ಹೆಮ್ಮೆಯಿಂದ ಹೇಳಹೋಗುವುದು ಹುಚ್ಚಾಟವಾಗಲಿಕ್ಕಿಲ್ಲವೇ? ಹೀಗೆಯೂ ಕೆಲವರು ಹೇಳಿದ್ದಾದರೆ ಅವಕ್ಕೆ ಕಾರಣ ಬೇರೆಯಾಗಿಯೇ ಇರಬೇಕು; ಅಥವಾ ಅವರು ಅತಿಮಾನುಷ ವ್ಯಕ್ತಿಯಾಗಿರಬೇಕು. ಶ್ರೀ. ಅ. ನ. ಕೃ. ಅವರು ಇನ್ನು ಅಂತಹ ಅತಿಮಾನುಷತೆ

ಯನ್ನು ಪಡೆದಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಎಂದಮೇಲೆ ಈ ವೀರಶೈವ ಕಾವ್ಯ ಸಂಪಾದನೆಗೆ ಇವರಿಗೆ ಅಧಿಕಾರವೆಲ್ಲಿದೆ ? ಅವರೂ ಸಂಪಾದನೆ ಮಾಡಿರುವರಲ್ಲ; ಅವರ ಉದ್ದೇಶವೇನು? ಈ ಸಂಪಾದನೆಗೆ ಆ ಸಂಪಾದನೆಯೇ ಉದ್ದೇಶವೇ ? ಅಥವಾ ಹೀಗಿರಬಹುದೇ ?

ರಾಯರು ಸಾಹಿತ್ಯದ ಎಲ್ಲ ರಾಶಿಗಳನ್ನು ಏರಿದ್ದಾರೆ, ಕವಿತಾರಾಶಿಯೊಂದು ಇವರಿಗೆ ಅಳವಡದೆ ಉಳಿದಿದ್ದಿತು. ಅದನ್ನೂ ಕೈವಶಮಾಡಿಕೊಳ್ಳಬೇಕೆಂದು ಕೈನೀಡಿರಬಹುದೇ ? ಇದೇ ನಿಜವಾಗಿದ್ದರೆ ಕನ್ನಡದಲ್ಲಿ ಬೆಳಕಿಗೆ ಬಾರದೆ ಇದ್ದ ಅದೆಷ್ಟೋ ಕಾವ್ಯಗಳು ಇನ್ನೂ ಮೂಲೆ ಮೂಲೆಗಳಲ್ಲಿ ಹೇರಳವಾಗಿ ಬಿದ್ದಿವೆ. ಅವುಗಳಲ್ಲಿ ಉತ್ತಮವೆನಿಸಿದ—ಸಮಾಜಕ್ಕೆ ತಾರಕವೆನಿಸಿದ-ಕಾವ್ಯವೊಂದನ್ನು ಸಂಪಾದಿಸಬಹುದಿತ್ತಲ್ಲ ! ಅದನ್ನು ಬಿಟ್ಟು, ಈ ವಿಧಿಯನ್ನು ಬೆನ್ನಿಗೆ ಕಟ್ಟಿಕೊಂಡುದನ್ನು ನೋಡಿದರೆ ಈ ಕಾರಣವನ್ನೂ ನಂಬುವಂತಿಲ್ಲ. ಎಂದಮೇಲೆ ಮತ್ತೆ ಯಾವ ಉದ್ದೇಶವಿರಬೇಕು ? ಬಾವಿಯನ್ನು ತೆಗೆಯ ಹೋದಂತೆ ಬೇತಾಳವೇ ಹೊರಡುತ್ತಿದೆ.

ಈ ಗ್ರಂಥವನ್ನು ಸಂಪಾದಿಸಲಿಕ್ಕೆ ನಾಕಷ್ಟು ಆಧಾರಗಳು ಸಿಕ್ಕಲಿಲ್ಲವೆಂದೂ, ಈಗ ಸಿಕ್ಕಷ್ಟೇ ಸಾಮಗ್ರಿಗಳಿಂದ ಈ ನಿರ್ಣಯಕೊಡಬೇಕಾಯಿತೆಂದೂ, ಮುಂದೆ ಹೆಚ್ಚಿಗೆ ಆಧಾರಗಳು ದೊರೆತಾಗ ಮತ್ತೆ ವಿಚಾರಮಾಡಲು ಬರುವುದೆಂದೂ ಸಂಪಾದಕರೇ ಸಾಮಾನ್ಯವಾಗಿ ಒಪ್ಪುತ್ತಾರೆ. ಇಂತಹ ಗಡಬಡಿಯ–ಗುರುವಿರಕ್ತಕಲಹದ ಬೇಗೆಯನ್ನು ಹಬ್ಬಿಸುವ—ನಿರ್ಣಯವನ್ನು ಕೊಡಲು ಇವರನ್ನು ಯಾರು ಒತ್ತಾಯ ಪಡಿಸಿದ್ದರು ? ಇವರಿಗೆ ಆಧಾರವಾಗಿ ಕೊಟ್ಟ ಗ್ರಂಥಗಳಲ್ಲಿ ಮುಕ್ಕಾಲು ಪಾಲು ವೀರಶೈವರಿಂದಲೇ ದೊರೆತುವಲ್ಲವೋ? ಇಷ್ಟೆಲ್ಲ ಸೌಕರ್ಯಗಳನ್ನೊದಗಿಸಿದ ವೀರಶೈವರಲ್ಲಿ ಈ ಕಾವ್ಯ ಸಂಪಾದನೆ ಮಾಡಲು ಶಕ್ತರಾದ ವಿದ್ವಾಂಸರಾರೂ ಇರಲೇ ಇಲ್ಲವೇ? ಈ ಸಂಗ್ರಾಹಕ ವೀರಶೈವರಿಗಿಂತ ತಾವೇ ಧೀಶಕ್ತಿಸಂಪನ್ನರೆಂದು ರಾಯರು ಸಿದ್ಧಮಾಡಿ ತೋರಿಸುವರೋ ?

ಇದೂ ಹೋಗಲಿ. ಈಗ ಜಾತೀಯತೆಯ ಭೂತ ತಾಳತಪ್ಪಿ ತೂಕ ತಪ್ಪಿ ಥೈ ಥೈ ಕುಣಿಯುತ್ತಿದೆಯಷ್ಟೇ! ಇಂತಹ ಪ್ರಸಂಗದಲ್ಲಿ, ಒಂದು ಸಮಾಜದವರು ಮತ್ತೊಂದು ಸಮಾಜದ ಮತಸ್ಥಾಪನಾಚಾರ್ಯರ ಪೀಠದ ಮೇಲೆ ಮಾದಿಗನನ್ನು ತಂದು ಕುಳ್ಳಿರಿಸುವುದು ಸಾಮಾನ್ಯ ಎದೆಗಾರಿಕೆಯೋ ? ಈ

ಎದೆಗಾರಿಕೆಗೆ ಸತ್ಯದ ನಿಷ್ಠೆಯು—ಬೆಂಬಲಬೇಕಲ್ಲವೇ ? ಹಾಗಿದ್ದರೆ ಅಸ್ಪೃಶ್ಯತೆಗೆ ಸಿಡಿಮಿಡಿಗೊಳ್ಳುವ ರಾಯರು ಈ ವರೆಗೆ ಎಷ್ಟು ಜನ ಅಸ್ಪೃಶ್ಯರನ್ನು ಸವರ್ಣೀಯರ ಪಂಕ್ತಿಯಲ್ಲಿ ಕುಳ್ಳಿರಿಸಿದ್ದಾರೆ ? ಆಚಾರದ ಆಧಾರವಿಲ್ಲದ ತತ್ವನಿಷ್ಠೆ ಬರಿಯ ಬುರುಡೆಯಾಗಲಾರದೇ ? ಅಲ್ಲದೆ, ಈ ಸಾಹಸದ ಸಂಪಾದನೆಯನ್ನು ಮಾಡುವಾಗ ರಾಯರು ಸಾಕಷ್ಟು ಸಂಶೋಧನೆಯನ್ನು ಮಾಡಿದ್ದಾರೆಯೇ ? ಸ್ವತಃ ಉಜ್ಜಯಿನೀ ದರ್ಶನಕ್ಕೆ ಹೋಗಿದ್ದರೇ ? ಅಲ್ಲಿ ಎಲ್ಲವನ್ನೂ ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿದ್ದಾರೆಯೇ ? ಪ್ರೊ. ಜೀರಿಗೆ ಕ. ಬಸವಪ್ಪನವರ ಟಿಪ್ಪಣಿಗಳೇ ಇವರಿಗೆ ಪರಮಾರ್ಥವಾದುವೇ ? ಇದು ಇಂತಹ ವಿಷಯ ವಿಷಯದಲ್ಲಿ ಕೈಹಾಕುವ ರೀತಿಯೇ ? ಒಂದು ವೇಳೆ ರಾಯರಿಗೆ ಈ ವಿಷಯು ಸತ್ಯವೇ ಎನಿಸಿದ್ದರೆ ಔಪಚಾರಿಕವಾಗಿಯಾದರೂ ಉಜ್ಜಯಿನಿಯ ಈಗಿನ ಮಹಾಸ್ವಾಮಿಗಳೊಡನೆ ಈ ವಿಷಯವನ್ನು ಚರ್ಚಿಸಬಹುದಾಗಿತ್ತಲ್ಲ ! ಹಾಗೇನಾದರೂ ಮಾಡಿದರೇ? ಹೀಗೆಯೇ ಇನ್ನೂ ಪ್ರಶ್ನೆಗಳನ್ನು ಕೇಳುತ್ತ ಹೋದರೆ ಎಲ್ಲ ಪ್ರಶ್ನ ಚಿಹ್ನಗಳೂ ಕೂಡಿ Gate way of India ಕ್ಕಿಂತಲೂ ದೊಡ್ಡದಾಗಬಹುದು ! ಅವಕ್ಕೆ ಉತ್ತರವೇನು ! ಏನಾದರೂ ಇದ್ದರೆ ಸರಿಹೋಯಿತು; ಇಲ್ಲವಾದರೆ ಈ ಕಾವ್ಯ ಸಂಪಾದನೆಯ ಉದ್ದೇಶವೇನು ? ಅಂದರಕೀ ಬಾತ ಅಲ್ಲಾ ಜಾನೇ ! ಅಲ್ಲವೇ ?

(೨) ಸಾಧನ ಸಲಕರಣೆಗಳು ದೇಶಕವಿಯ ಮರುಳಸಿದ್ಧ ಕಾವ್ಯ ವೀರಶೈವ ಮತಕ್ಕೆ ಸಂಬಂಧಪಟ್ಟದ್ದು; ಅದರಲ್ಲಿಯೂ ಪೀಠಾಚಾರ್ಯರ ಪಟ್ಟವನ್ನು ಬುಡಮೇಲು ಮಾಡುವ ಚರ್ಚಾತ್ಮಕ ವಿಷಯವನ್ನುಳ್ಳದು. ಎಂದಮೇಲೆ ಈ ತೊಡಕಿನಲ್ಲಿ ವೀರಶೈವ ವಿದ್ವಾಂಸರೇ ಮುಂದಡಿಯಿಡುವುದು ಉಚಿತ. ಕೈಗೆಕೈ ಹತ್ತುವ ಪ್ರಸಂಗ ಬಂದರೆ ಅವರು ಹೇಗಾದರೂ ದಕ್ಕಿಸಿಗೊಂಡಾರು. ಆದರೆ ಪರಮತೀಯರಾದ—ಅದರಲ್ಲಿಯೂ ಬ್ರಾಹ್ಮಣರಾದ-ಅ. ನ. ಕೃ. ಅವರು ಅನಾವಶ್ಯಕವಾಗಿ ಈ--ಬ್ರಾಹ್ಮಣೇತರ—ವೀರಶೈವ ಸಮಾಜದಲ್ಲಿ ಗೊಂದಲವನ್ನೇಕೆ ಎಬ್ಬಿಸಿದರು ? ಇದು ರೋಷಕೋಪಗಳಿಗೆ ಕಾರಣವಾಗಬಹುದೆಂಬುದು ಅವರಿಗೂ ಅರಿವಾಗದೆ ? ಆದರೂ ಈ ಕತ್ತರಿಯಲ್ಲಿ ಕೊರಳುಕೊಟ್ಟದು ಸ್ವಬುದ್ಧಿಯೋ ಪರಪ್ರತ್ಯಯನೇಯಬುದ್ಧಿಯೋ?

ಈ ಪ್ರಶ್ನೆಗೆ ಉತ್ತರ ಕೊಡುವ ಮೊದಲು ವಾಚಕರು ಮುಂದಿನ ವಿಚಾರ ಸರಣಿಯನ್ನು ಸಹೃದಯತೆಯಿಂದ ಓದಬೇಕೆಂದು ಬಿನ್ನವಿಸುವೆವು.

ಈ ಮರುಳಸಿದ್ಧ ಕಾವ್ಯವನ್ನು ಸಂಪಾದಿಸುವಾಗ ರಾಯರಿಗೆ ದೊರೆತ ಹಸ್ತಪ್ರತಿಯಂತ ಪ್ರತಿಗಳೆಷ್ಟು? ಐತಿಹಾಸಿಕ ಆಧಾರಗಳೆಷ್ಟು? ಅವುಗಳಲ್ಲಿ ಸುಸಂಬದ್ಧತೆಯೆಷ್ಟಿದೆ?

ಈ ಕಾವ್ಯ ಸಂಪಾದನೆಗೆ ಮೂರು ಪ್ರತಿಗಳ ಆಧಾರ. 'ಕಪ್ರತಿ' ತಾಳೆ ಗರಿಯ ಮೇಲಿದೆ. ಎಲ್ಲಿಯದೆಂಬುದರ ಉಲ್ಲೇಖವಿಲ್ಲ. ಇದೊಂದರ ಆಧಾರದ ಮೇಲೆಂದೇ ಕಾವ್ಯರಚನೆಯಾಗಿದೆ. ಅದೂ ಎಷ್ಟು ಸುಸಂಬದ್ಧವಾಗಿದೆ, ಅಷ್ಟೇ ಅಪೂರ್ಣವಾಗಿದೆಯೆಂಬುದನ್ನು ವಾಚಕರೇ ನೋಡಿಕೊಳ್ಳಲಿ. 'ಖ' ಪ್ರತಿ ಅಸಮಗ್ರವಾಗಿದೆ; ಅಬದ್ಧಗಳಿಂದಾಗಿದೆ. 'ಗ" ಪ್ರತಿ ಪ್ರೊ. ಚೆನ್ನಮಲ್ಲಿಕಾರ್ಜುನರಿಂದ ದೊರೆತ ಪ್ರತಿ. ಸಮುದ್ರದಿಂದ ಬೇರೆಯಾದ ನೀರು ಮೋಡವಾಗಿ ಮಳೆಯೊಡನೆ ಬಂದಂತೆ 'ಕಗ" ಪ್ರತಿಗಳಲ್ಲಿ ಜನಕ ಜನ್ಯ ಭಾವವಿದೆ. ಒಟ್ಟಾರೆ, 'ಕ' ಪ್ರತಿ ಒಂದರಿಂದಲೇ ಇಂತಹ ಚಮತ್ಕಾರಿಕ ಕಾವ್ಯವನ್ನು ಪರಮ ಶ್ರೀಯುತರೊಬ್ಬರು ಸಂಪಾದನೆ ಮಾಡುವುದು ಸಂಶೋಧನೆಯ ಪದ್ಧತಿಯೋ? ಸಹೃದಯತೆಯ ಲಕ್ಷಣವೋ?

ಇನ್ನು, ಕಾವ್ಯ ಸಂಪಾದನೆಯಲ್ಲಿ ಸಾಕಷ್ಟು ಸಲಕರಣೆ ಸಿಕ್ಕದಿದ್ದರೆ ಹೋಗಲಿ. ಮಾದಿಗನೊಬ್ಬನನ್ನು ಮಹಾ ಪೀಠದ ಮೇಲೆ ಕುಳ್ಳಿರಿಸಬೇಕಾದರೆ ಐತಿಹಾಸಿಕ ಆಧಾರಗಳಾದರೂ ಸಾಕಷ್ಟು ಬೇಕಲ್ಲವೇ! ಮರುಳಸಿದ್ಧರ ಮೇಲೆ ಹಲವಾರು ಜನರು ಚರಿತ್ರಗಳನ್ನು ಬರೆದಂತೆ ರಾಯರೇ ತಿಳಿಸುತ್ತಾರೆ. ಅವೆಲ್ಲವುಗಳನ್ನು ಇವರು ಕಣ್ತೆರೆದು ನೋಡಿದ್ದಾರೆಯೇ? ಮೊನ್ನೆ ಮೊನ್ನೆ ಪ್ರಸಿದ್ಧವಾಗಿರುವ ನಾಗಭೂಷಣನ ಮರುಳಸಿದ್ಧ ಸಾಂಗತ್ಯದಲ್ಲಿ ಈ ದುರಾಗ್ರಹಕ್ಕೆ ಅಸ್ಪದವಿದೆಯೇ! ಸಹೃದಯತೆಯಿಂದ ಕಾವ್ಯ ಸಂಪಾದನೆ ಮಾಡುವುದಿದ್ದರೆ ಈ ಗ್ರಂಥಗಳನ್ನು ತೆರೆದು ನೋಡಬಹುದಿತ್ತು.

ರಾಯರು ತಮ್ಮ ಸಂಪಾದನೆಗೆ ಅನೇಕ ವಿದ್ವಾಂಸರ ಆಧಾರಗಳನ್ನು ತೆಗೆದುಕೊಂಡಿದ್ದಾರೆ. ಅವರಲ್ಲಿ ಎಷ್ಟು ಜನರು ಈ ಮಾದಿಗ ಮರುಳಪ್ಪನಿಗೂ ಮಹಾಚಾರ್ಯರಿಗೂ ಗಂಟುಹಾಕಿದ್ದಾರೆ! ಕಾಲನಿರ್ಣಯಕ್ಕೆ ಅವರ ಲೇಖನಗಳ ಆಧಾರವನ್ನು ಕೊಟ್ಟಿದೆ. ಎಂದಮೇಲೆ ಇಂತಹ ಚಮತ್ಕಾರಿಕ ವಿಷಯದಲ್ಲಿಯೂ ಅವರವರ ಅವತರಣಿಕೆಗಳನ್ನು ಏಕೆ ಕೊಡಲಿಲ್ಲ? ಸ್ವಬುದ್ಧಿ ಪ್ರೇರಿತರಾಗಿದ್ದರೆ ರಾಯರು ಇಷ್ಟೆಲ್ಲ ಮಾಡಲು ಆತಂಕವೇನಿದ್ದಿತು?

ಈ ವಿಷಯವನ್ನು ಇನ್ನಿಷ್ಟು ಆಳವಾಗಿ ನೋಡೋಣ.

(೪) ಕಾವ್ಯ ಸಂಪಾದನೆಯ ರೀತಿ-ಕಾವ್ಯ ಸಂಪಾದನೆ ಮಾಡುವಾಗ ಸ್ವಯಂಸಿದ್ಧ ಸ್ಫೂರ್ತಿ ಸ್ವತಃದ ಯೋಗ್ಯತೆಯಿದ್ದರೆ ಬರೆಯುವದನ್ನೆಲ್ಲ ಗಂಡು ಗಾಡಿಯಿಂದ ಗಂಭೀರವಾಗಿ ಬರೆಯುವ ಪಾಡಿಕೆಯಿದೆ ಎಲ್ಲಿಯಾದರೂ ಮರುಳಸಿದ್ಧ ಕಾವ್ಯ ಸಂಪಾದನೆಯಲ್ಲಿ ಗಂಡುಗಾಡಿ-ಗಾಂಭೀರ್ಯಗಳು ಬಗೆದು ಕಾಣುತ್ತಿವೆಯೋ ? "ಮರುಳಸಿದ್ಧ: ಪಂಚಾಚಾರ್ಯರಲ್ಲಿ ಒಬ್ಬರೂ ಪ್ರಧಾನ ಶಾಲಿಯೂ ಆದ ಮರುಳಸಿದ್ಧ ಐತಿಹಾಸಿಕ ವ್ಯಕ್ತಿ" (ಪೀಠಿಕಾ ಅಂಕ-೧೯) "ಈ ಮರುಳಸಿದ್ಧನೇ ಆಚಾರ್ಯರಲ್ಲಿ ಒಬ್ಬರಾದ ಮರುಳಾರಾಧ್ಯರೋ ಅಲ್ಲವೋ ಎಂಬ ವಿಷಯ ತೊಡಕಿನದು. ಇದರ ಚರ್ಚೆ ಅನವಶ್ಯಕ ಟೀಕೋಪಟೀಕೆಗಳಿಗೆ ಮೂಲವಾಗುವುದರಿಂದ ನಾವು ಅದಕ್ಕೆ ಕೈಹಾಕುವುದಿಲ್ಲ." (ಪೀಠಿಕಾ ಪುಟ ೫೩) Marularadhya or Marula Siddha is one of the five who found the peetha of Ujjaini" (ಹೊದಕೆಯ ಒಳಗೆ) ಹೀಗೆ ಪೂರ್ವಾಪರ ವಿರೋಧಗಳು ಸ್ವಬುದ್ಧಿ ಪ್ರೇರಿತ ಸರಣಿಯಲ್ಲಿ ಬರಬೇಕೇ ? ಬರಬಹುದೇ ? ಇದು ಗಂಡುಗಾಡಿಯೆನಿಸ ಬಹುದೋ ? ಇದಲ್ಲದೆ 'ಮರುಳಾರಾಧ್ಯರು' ಎಂದು ಬಹುವಚನವನ್ನೂ 'ಮರುಳಸಿದ್ಧ' ಎಂದು ಏಕವಚನವನ್ನೂ ಪ್ರಯೋಗಿಸಲು ಕಾರಣವೇನು ? ಈ ಏಕವಚನ ಪ್ರಯೋಗಕ್ಕೆ 'ಮರುಳಸಿದ್ಧ ಮಾದಿಗ" ಎಂಬ ತಿರಸ್ಕಾರ ಭಾವನೆ ರಾಯರಲ್ಲಿರಬೇಕು; ಇಲ್ಲವೆ ಹಾಗೆಯೇ ಬರೆಯಲು ಬೇರವರ ಇವರಿಗೆ ಹೇಳಬೇಕು!

ಇಲ್ಲಿ ಇನ್ನು ಒಂದು ವಿನೋದ ಪ್ರಸಂಗವನ್ನು ಮರೆತು ನಡೆಯುವಂತಿಲ್ಲ ಈಗಿನ ಕಾಲದಲ್ಲಿ ಹೊಸ ಸಾಹಿತಿಯೊಬ್ಬ ಒಂದು ಪುಸ್ತಕವನ್ನು ಬರೆದರೂ ಅದಕ್ಕೆ ನುರಿತಸಾಹಿತಿಗಳಿಂದ ಮುನ್ನುಡಿಯನ್ನು ಬರೆಸುವುದು ಬಳಕೆಯಲ್ಲಿದೆ ರಾಯರೇನೋ ಹಳೆಯ ಸಾಹಿತಿಗಳಿರಬಹುದು. ಆದರೆ ಪ್ರಸಂಗವನ್ನನುಸರಿಸಿ ಯಾರೊಬ್ಬ ವೀರಶೈವ ಸ್ವಾಮಿಗಳಿಂದ ಇಲ್ಲವೆ ವಿದ್ವಾಂಸರಿಂದ ಮುನ್ನುಡಿಯನ್ನು ಕೊನೆಗೆ ಅಭಿಪ್ರಾಯವನ್ನಾದರೂ— ಬರೆಸಬೇಕಾಗಿತ್ತು ಈ ಕಾವ್ಯಕ್ಕೆ. ಆದರೆ ಇವರ ಈ ವಿಚಿತ್ರ ಸಂಪಾದನಕ್ಕೆ ಯಾರೂ ಪ್ರಸ್ತಾವನೆ ಬರೆಯಲು ಮುಂದಾಗಲಿಲ್ಲವೋ ಏನೋ! ಹಾಗೂ ಹೇಳುವಂತಿಲ್ಲ. ಏಕೆಂದರೆ ಅನಾಮಧೇಯರಿಂದ ಇಂಗ್ರೇಜಿ ಮುನ್ನುಡಿಯೊಂದಿದೆ. "....Mr. A N. Krisnarao has care-fully Edited the work and contributes a leangthy preface ..." ಈ ಒಕ್ಕಣಿಕೆಯನ್ನು ನೋಡಿದರೆ

ಈ ಅಭಿಪ್ರಾಯವನ್ನು ಸಂಪಾದಕರ ಹೊರತಾಗಿ ಬೇರೆ ಯಾರೋ ಬರೆದಿರಬೇಕೆಂದು ಗೊತ್ತಾಗುವುದಿಲ್ಲವೇ ? ಹಾಗಿದ್ದರೆ ಕೊನೆಯಲ್ಲಿ ಅವರ ಹೆಸರೇಕೆ ಇಲ್ಲ ? ಒಂದು ವೇಳೆ ಅವರು ಮರೆತು ಬಿಟ್ಟಿದ್ದರೂ ರಾಯರು ತಮ್ಮ ಮುನ್ನುಡಿಯಲ್ಲಾದರೂ ಅವರ ಹೆಸರನ್ನು ಕಾಣಿಸಿ ಅವರಿಗೆ ಧನ್ಯವಾದಗಳನ್ನು ಕೊಡಬಹುದಿತ್ತಲ್ಲ. ರಾಘವಾಂಕರ ನುಡಿಗಳನ್ನು ಶೈಲಿಯನ್ನು ಬಳಸಿಕೊಂಡ ದೀಪಕವಿ ಅವನನ್ನೇಕೆ ಸ್ಮರಿಸುತ್ತಿಲ್ಲವೋ ಎಂದು ಕವಿಯ ಮೇಲೆ ಕೃತಘ್ನತೆಯ ಆರೋಪಮಾಡುವ ರಾಯರು, ಪಾಪ ! ಆ ಮುನ್ನುಡಿಕಾರನ ಹೆಸರನ್ನೇಕೆ ಎತ್ತಲಿಲ್ಲ! ಅಥವಾ 'ನನ್ನನ್ನು ನಾನೇ ಕಂಡೆ" ಎನುವ ರಾಯರು ನನಗೆ ನಾನೇ ಮುನ್ನುಡಿಯನ್ನು ಬರೆದುಕೊಂಡೆ' ಎಂದು ಹೇಳುವರೋ !

ಇಷ್ಟಾದರೂ ಎದೆಗುದಿ ತಪ್ಪಿಲ್ಲ ಸಂಪಾದಕರಿಗೆ. ಅದಕ್ಕಾಗಿ ಕೊನೆಗೆ ದಿವ್ಯಾಸ್ತ್ರವನ್ನು ಪ್ರಯೋಗಿಸಿದ್ದಾರೆ; ಮಹಾತ್ಮರ ಮೊರೆ ಹೊಕ್ಕಿದ್ದಾರೆ; ಬಾಪೂಜಿಯವರಿಗೆ ಪುಸ್ತಕವನ್ನು ಅರ್ಪಿಸಿದ್ದಾರೆ. ಆ ಅರ್ಪಿಸುವ ರೀತಿಯಾದರೂ ಎಂತಹ ವಿಚಿತ್ರ ! "ಹರಿಜನ ಪ್ರಾಣರಾದ ಪೂಜ್ಯ ಬಾಪೂಜಿಯವರ ಚರಣಗಳಲ್ಲಿ ಹರಿಜನೋದ್ಧಾರಕನಾದ ಮರುಳಸಿದ್ಧನ ಚರಿತ್ರೆಯನ್ನು ಅರ್ಪಿಸಿದೆ" ರಾಯರ ಕಲ್ಪನೆಯಂತೆ ಒಬ್ಬ ಮಹಾಮಹಿಮನ-ಸ್ವಯೋಗ್ಯತೆಯ ಬಲದಿಂದ ಉಜ್ಜಯಿನೀ ಪೀಠಾಚಾರ್ಯನೆನಿಸಿದ ಮಹಾಪುರುಷನ-ಚರಿತ್ರವನ್ನು 'ಚರಣತಲದ'ಲ್ಲಿ ಅರ್ಪಿಸುವುದೇ ? " ಮುಡಿಪು, ಕಾಣಿಕೆ, ಎಂದಿದ್ದರೇ ಸರಿ ಹೋಗುತಿರಲಿಲ್ಲವೇ?ಇರಲಿ. ಪೂಜ್ಯ ಬಾಪೂಜಿಯವರಿಗೆ ಅರ್ಪಿಸಿದ ಮಾತ್ರಕ್ಕೇ ಯಾರೂ ಆ ಕಾವ್ಯವನ್ನು ವಿಮರ್ಶಿಸಲೇ ಬಾರದೆಂದಾಯಿತೋ! ಪಾಪ! ರಾಯರಿಗೆ ಪುಸ್ತಕ ಬರೆಯಹತ್ತಿದ ಮೇಲೆ ದಿಗ್ಭ್ರಮೆಯಾದಂತಿದೆ. ಅದಕ್ಕಾಗಿ ವಿಚಾರ-ವಿಕಾರಗಳ ತೂಗುಯ್ಯಾಲೆಯಲ್ಲಿ ಹೊಯ್ದಾಡುತ್ತಿದ್ದಾರೆ ರಾಯರು. ಈ ಹೊಯ್ದಾಟದ ಮನೋವೃತ್ತಿ ಹುಟ್ಟುವುದು ' ಪರಪ್ರತ್ಯಯನೇಯ ಬುದ್ಧಿಯಿಂದಲೇ ಅಲ್ಲವೇ ?

ನಿಜವಾಗಿ ವಿಚಾರಮಾಡಿದರೆ ರಾಯರು ಈ ಕಾವ್ಯ ಸಂಪಾದನೆಗೆ ಕೈ ಹಾಕಿದುದೇ ತಪ್ಪೆನಿಸುವಂತಿದೆ. ಏಕೆಂದರೆ ಕಾವ್ಯ ಸಂಪಾದನೆಗೆ ಸಾಹಿತ್ಯ ಲಕ್ಷಣ ಗ್ರಂಥಗಳ ಆಳವಾದ ಅಭ್ಯಾಸಬೇಕು; ಪ್ರಾಚೀನ ಕಾವ್ಯಗಳ ವಿಸ್ತೃತ ವ್ಯಾಸಂಗಬೇಕು; ಸಹೃದಯ ವಿಮರ್ಶೆಯ ಸಾವಧಾನತೆ ಬೇಕು. ಇವಾವ ಗುಣಗಳೂ ಈ ಕಾವ್ಯ ಸಂಪಾದನೆಯಲ್ಲಿ ಕಾಣಬರುವದಿಲ್ಲ. ಈ ಕಾವ್ಯ ಸಂಪಾದನೆಯ ರೀತಿಯನ್ನು ನೋಡಿದರೆ, ದೇಪಕವಿಯ ಪಾಂಡಿತ್ಯದ ಬಗೆಗೆ ಸಂಪಾದ

ಕರು ಕೊಟ್ಟ ಸರ್ಟಿಫಿಕೇಟಿನೊಳಗಿನ ಒಕ್ಕಣಿಕೆಗಳೆಲ್ಲ ನಮ್ಮ ನೆನಪಿಗೆ ಬರುತ್ತಿವೆ. ಅದೇಕೆಂಬುದನ್ನು ನೋಡೋಣ.

ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಪ್ರೊ ಬಸವನಾಳರು ಮುಂತಾದ ವಿದ್ವಾಂಸರು ಈ ಮೊದಲು ಅನೇಕ ಕನ್ನಡ ಕಾವ್ಯಗಳನ್ನು ಸಂಪಾದನೆ ಮಾಡಿದ್ದಾರೆ. ಅವರ ಪರಿಷ್ಕರಣದಲ್ಲಿ ವ್ಯಾಕರಣ ಛಂದೋದೋಷಗಳು ಉಳಿಯುವಂತೆ ತಿದ್ದಿದ್ದಾರೆ. ಅನಿವಾರ್ಯವಾದೆಡೆಗಳಲ್ಲಿ ಪ್ರಶ್ನೆ ಚಿಹ್ನವನ್ನು ಹಾಕಿದ್ದಾರೆ, ಇಲ್ಲವೆ [] ಈ ಆವರಣದಲ್ಲಿ ಲಕ್ಷಣಬದ್ಧವಾದ ಶಬ್ದಗಳನ್ನು ತುಂಬಿದ್ದಾರೆ ಆದರೆ ಶ್ರೀ. ಅ. ನ. ಕೃ. ಅವರು ಈ ಹಾದಿಯನ್ನು ಏಕೆ ಹಿಡಿಯಲಿಲ್ಲ? ಅದು ಸಾಧ್ಯವಿಲ್ಲವೆಂದೋ ಅಥವಾ ಅದು ತಕ್ಕುದಲ್ಲವೆಂದೋ? ಮಾತ್ರ ಮುನ್ನುಡಿಯಲ್ಲಿ- ಅನೇಕ ಸಲ ಪ್ರತಿಕಾರರ ದೋಷಗಳನ್ನು ಕವಿಯ ದೋಷಗಳೆಂದು ಭಾವಿಸಿ ಸಂಶೋಧಕರು ತಿದ್ದುತ್ತಾರೆ. ಇದು ನ್ಯಾಯವಾದುದಲ್ಲ ..... ಕೆಲವು ಕಡೆ ಮಾತ್ರ ವ್ಯಾಕರಣ ಛಂದಸ್ಸುಗಳ ಸ್ವತಃಸಿದ್ಧ ದೋಷಗಳನ್ನು ತಿದ್ದಿದ್ದೇವೆ" ಮುನ್ನುಡಿ (ಪು ) ಎಂದು ಗಾಂಭೀರ್ಯದ ಗಮನಿಕೆ ಹಾಕಿಕೊಂಡಿದ್ದಾರೆ.

ಇದು ವಾದ ಸರಣಿಯಲ್ಲಿ ನಿಜವೆಂದೇ ಕೆಲಹೊತ್ತು ಒಪ್ಪಿಕೊಳ್ಳೋಣ. ಆದರೆ ಕಾವ್ಯದಲ್ಲಿ ಅಲ್ಲೊಂದು ಇಲ್ಲೊಂದು ಪದ್ಯ ಅಸಂಬದ್ಧವಾಗಿದ್ದರೆ ಈ ವಿಚಾರವನ್ನು ಕ್ಷಮ್ಯವೆನ್ನಬಹುದಿತ್ತು ಮೊದಲಿನಿಂದ ಕೊನೆಯವರೆಗೂ ಅಬದ್ಧಕಂತೆಯ ಅವತಾರವನ್ನು ಅಲಂಕಾರಗೊಳಿಸಿದ್ದರೆ ಅದನ್ನು ಮಂದಿಯ ಮುಂದೆ ತರುವ ಆವಶ್ಯಕತೆಯೇನಿತ್ತು? ಇದೂ ಹೇಗೆಯೇ ಇದ್ದುಕೊಳ್ಳಲಿ. ರಾಯರು ತಿದ್ದಿರುವ ಎಡೆಗಳಲ್ಲಾದರೂ ತಮ್ಮ ಸಾಹಿತ್ಯಜ್ಞಾನದ ಆಳವನ್ನು ಹೇಗೆ ತೋರಿಸಿದ್ದಾರೋ ನೋಡೋಣ. ಸ್ಥಾಲೀಪುಲಾಕನ್ಯಾಯದಂತೆ, ಕೆಲವೇ ಅಗುಳುಗಳನ್ನು ಹಿಚಿಕಿ ನೋಡಿದರೂ ಸಾಕಲ್ಲವೇ ?

ರಾಯರು ತಮ್ಮ ಕಾವ್ಯಕ್ಕೆ ಆಧಾರವಾಗಿ ಬೊಮ್ಮರಸನ ಪದ್ಯವನ್ನು ಆಯ್ದುಕೊಂಡಿದ್ದಾರಷ್ಟೇ. ಆ ಪದ್ಯವಾದರೂ ಲಕ್ಷಣ ಬದ್ಧವಾಗಿದೆಯೋ? ಸರಳವಾಗಿ ಅರ್ಥವಾಗುವಂತಿದೆಯೋ? ಇಂತಹ ಅಬದ್ಧವನ್ನೇ ಅವಲಂಬಿಸಿ ಮುಂದೆ ಸಾಗಿದುದೇಕೋ? ಇದೂ ಹೋಗಲಿ. ಇನ್ನು, ರಾಯರು ಸ್ವತಃ ಸಿದ್ಧದೋಷಗಳನ್ನು ತಿದ್ದಿರುವ ರೀತಿಯನ್ನು ಪ್ರದರ್ಶನಕ್ಕಿರಿಸೋಣ.

ಪದ್ಯ ಪಾಠದಲ್ಲಿ ಎಲ್ಲಿ ತಿದ್ದಿರುವರೆಂಬುದು ತಿಳಿಯುವಂತೆಯೇ ಇಲ್ಲ. ಅದನ್ನು ಬಿಟ್ಟರೂ ಹೊತ್ತಗೆಯ ಕೊನೆಗಿರುವ ಶುದ್ಧಾ ಶುದ್ಧ ತಾಳಿಕೆಯಲ್ಲಿ

ಸಂಪಾದಕರ ಸಾಹಿತ್ಯಜ್ಞಾನದ ಆಳ ತಿಳಿಯುವಂತಿದೆ. ಅಶುದ್ಧ—ಪಕ್ಕಿ ಮೃಗ; ಶುದ್ಧ— ಪಕ್ಷಿಮೃಗ. ೧—೧೮( ಶುದ್ಧಾಶುದ್ಧ. ಪುಟ ೧೨೩ ) ಮೂಲದಲ್ಲಿಯ ' ಪಕ್ಕೆ ಮೃಗವಾಸ ' ಎಂಬುದನ್ನು 'ಪಕ್ಷಿಮೃಗವಾಸ' ಎಂದು ತಿದ್ದಲಾಗಿದೆ. ಆ ಪದ್ಯದಲ್ಲಿ ಕವಿ 'ಆ ಮಹಾಗಿರಿ ಚಿನ್ನರನ್ನಗಳ ಕಣಿ' ಖಗಮೃಗಗಳ ಆವಾಸ' ಮುಂತಾಗಿ ಹೇಳಬೇಕಾಗಿದೆ. ಅದಕ್ಕಾಗಿ ನಿಲಯ—ಅಡವಿ—ಪಕ್ಕೆ—ನೆರಹು---ಹರಹು ಮುಂತಾಗಿ ಏಕಾರ್ಥಕ ಭಿನ್ನಭಿನ್ನ ಪದಗಳನ್ನು ಪಯೋಗಿಸಿದ್ದಾನೆ. ಪಕ್ಕೆ ಎಂದರೆ ಹಕ್ಕೆ, ಇರುವಸ್ಥಳ. ಇದನ್ನರಿಯದೆ ಸಂಪಾದಕರು 'ಪಕ್ಷಿಮೃಗ ಎಂದು ತಿದ್ದಿದ್ದಾರೆ. ಮುಂದೆ ಇರುವ 'ಖಗಕುಲ' ಎಂಬ ಶಬ್ದವನ್ನು ನೋಡುವಷ್ಟು ತಾಳ್ಮೆ ತಕ್ಕೊಂಡಿದ್ದರೆ? ಮಾದವಿ( ೧-೨೬ ) ಎಂಬುದನ್ನು 'ಮಾಧವಿ' ಎಂದು ತಿದ್ದಲಾಗಿದೆ. ಆ ಪದ್ಯದಲ್ಲಿ ಬಂದಿರುವುವೆಲ್ಲ ವೃಕ್ಷಗಳ ಹೆಸರು; 'ಮಾಧವಿ' ಎಂಬುದು ಬಳ್ಳಿ! ಆ ಮರಗಳಿಗೆ ಈ ಬಳ್ಳಿಯನ್ನು ಅಂಟಿಸಿದುದು ನಿಸರ್ಗ ನಿಯಮಾನುಸಾರವೋ ? ಅಲ್ಲಿ ಛಂದೋದೋಷವನ್ನಾದರೂ ನೋಡಿದ್ದಾರೆಯೇ? ಪ್ರೈಯೋಳ್ಳಿಂದು (೨-೯) ಪ್ರೈಯ್ಯೊಳ್ಳಿಂದು ಎಂದು ತಿದ್ದಲಾಗಿದೆ. ಈ 'ತಿದ್ದು' ಶುದ್ಧರೂಪವೋ ? ವೈಯಾಕರಣಿಗಳು ಇದನ್ನು ಒಪ್ಪುವರೇ ? ವೀದಿ ವೀದಿ (೨—೩೫) ಎಂಬುದನ್ನು ' ವೀಥಿ ವೀಥಿ ' ಎಂದು ತಿದ್ದಿದುದರ ಔಚಿತ್ಯವೇನು ? ತರಣಗಂ (೩-೩) ಎಂಬುದನ್ನು 'ತರುಣಗಂ' ಎಂದು ತಿದ್ದುವಾಗ ಅಲ್ಲಿ ಬಂದಿರುವ ಪ್ರಸಂಗವನ್ನು ಸಂಪಾದಕರು ಕಣ್ಣೆತ್ತಿ ನೋಡಿದ್ದಾರೆಯೇ ? ಬೇಕಾದರೆ 'ತರಳಗಂ' ಎಂದರೆ ನಾಕಾಗುತ್ತಿರಲಿಲ್ಲವೇ ? ಶೆಸೆ (೩-೩) ಎಂಬುದನ್ನು 'ಸೆಸೆ' ಎಂದು ತಿದ್ದಿದೆ. ' ಸೆಸೆ ' ಎಂಬುದರ ಅರ್ಥವೇನು ? ಅಲ್ಲಿ 'ಶಿಶಿ' ಬೇಕಾಗಿರಲಿಲ್ಲವೇ ? ಮಧ್ಯಕವರೆಯ್ತಂದು ( ೩-೨೯ ) ಮಧ್ಯಕವರ್ಮೆಯ್ತಂದು ಎಂದು ತಿದ್ದುವುದು ಇದಾವ ಪಾಂಡಿತ್ಯ ಪ್ರದರ್ಶನ! ನಾಣ್ಣುಡಿ ( ೩-೧೦೯ ) ಎಂಬುದನ್ನು ನಾಣ್ನುಡಿ ಎಂದು ತಿದ್ದಿದುದರಲ್ಲಿ ವ್ಯಾಕರಣ ಸಂಸ್ಕಾರವೇನಾದರೂ ತೋರುತ್ತಿದೆಯೋ ? ೧೨೪ ನೆಯ ಪುಟದಲ್ಲಿ ಶುದ್ಧಾ ಶುದ್ಧಗಳ ಸ್ಥಾನಪಲ್ಲಟವಾಗಿರುವುದೂ ನೆನಪಿಡತಕ್ಕಂತಿದೆ. ವಿಸ್ತರ ಭಯದಿಂದ ಇಲ್ಲಿಗೇ ನಿಲ್ಲಿಸುವೆವು.

ರಾಯರು ತಮಗೆ ಸಾಧ್ಯವಿದ್ದ ತಪ್ಪುಗಳನ್ನು ತಿದ್ದಿದುದೂ ಈ ರೀತಿಯಲ್ಲಿ. ಪೂರಾ ತಿದ್ದಹೋಗಿದ್ದರೆ ಮಾದಿಗ ಮರುಳಪ್ಪ ಮತ್ತೆ ಹೊಲೆಗೇರಿಯನ್ನೇ ಹೊಗಬೇಕಾಗುತ್ತಿದ್ದಿತೋ ಏನೋ! ಈ ಅಸಮರ್ಥತೆಯನ್ನು ಮುಚ್ಚಿಕೊಳ್ಳುವುದಕ್ಕಾಗಿಯೇ ಸಂಪಾದಕರು—ಕಾವ್ಯವನ್ನು ತಿದ್ದಹೋಗುವುದು

ಸರಿಯುಲ್ಲ — ಎಂದು ಹೇಳಿಕೊಂಡು, ಮಾರ್ಪಾಡುಗಳನ್ನು ಮಾಡಿದ ಮತಿ ವಂತರನ್ನು ಮೂರ್ಖರ ಮಾಲಿಕೆಯಲ್ಲಿ ಪೋಣಿಸಿಬಿಟ್ಟಿದ್ದಾರೆ.

ಇನ್ನು ಶಬ್ದಕೋಶವನ್ನು ನೋಡೋಣ

ದಾವಾನಲ - - (೧-೬) ಸಮುದ್ರದಲ್ಲಿನ ಬೆಂಕಿ, ಸರಿಯೇ ?

ದಾವಾನಲವೆಂದರೆ 'ಕಾಳ್ಗಿಚ್ಚು' ಅಲ್ಲವೇ ?

ಸಿಂಗಿ (೪-೯೦) ಸಿಂಹ-ಸರಿಯೇ ?

'ಸಿಂಗಿ' ಘನಸಿಂಗಿ ವಾಸುಕಿ-ಎಂದುದರಲ್ಲಿ ಸರ್ಪವಿಶೇಷವೆಂಬ ಕಲ್ಪನೆಯುಲ್ಲವೇ?

ಸಾಕಲ್ಲವೇ ಸಂಪಾದಕರ ಶಬ್ದಾರ್ಥಜ್ಞಾನಗಳ ಮಾದರಿ ?

ಇನ್ನು ಸಂಪಾದನೆಯಲ್ಲಿ ಸಹೃದಯತೆ, ಸ್ವಪ್ರಯತ್ನಗಳು ಎಷ್ಟಿವೆ ಯೆಂಬುದನ್ನು ನೋಡೋಣ.

ಮುರುಳಸಿದ್ಧ ಐತಿಹಾಸಿಕ ವ್ಯಕ್ತಿ. ಅವನೇ ಉಜ್ಜಯಿನೀ ಪೀಠಸ್ಥಾಪನಾ ಚಾರ್ಯ ಎಂಬ ವಿಷಯಗಳನ್ನು ನಿರ್ಣಯಕವಾಗಿಟ್ಟುಕೊಂಡೇ ಸಂಪಾದಕರು ಸಾಗಿದ್ದಾರೆ ಮುರುಳಸಿದ್ಧ ಮಾಮಿಗರಲ್ಲಿ ಹುಟ್ಟಿದುದೂ ಮಹಾಪೀಠಾಚಾರ್ಯ ನಾದುದೂ ರಾಯರ ಮನಸ್ಸಿಗೆ ಹಿಡಿದ ವಿಷಯ. ಇದಕ್ಕೆ ಸತ್ಯದ ಬೆಂಬಲ ವಿದ್ದರೆ ಸಂತೋಷವೇ ಸರಿ. ಆದರೆ ಹಾಗೆಲ್ಲಿದೆ ? ಇಂತಹ ಮಹಾಮಹಿಮ ನನ್ನು ಸಮ ಕಾಲೀನರೆಲ್ಲ ಮನವಾರೆ ಹೊಗಳಬೇಕಾಗಿದ್ದಿತು. ಆ ಮಹಾಮಹಿ ಮನ ಅನುಭವಾಮೃತವೂ ಮಹಾಸಾಗರದಂತೆ ಮೇರೆವರಿಯ ಬೇಕಾಗಿದ್ದಿತು! ಆದರೆ ಸಂಪಾದಕರ ದುರ್ದೈವದಿಂದ ಹಾಗಾಗಲಿಲ್ಲ. ಮಹಾತ್ಮ ಮುರುಳ ಸಿದ್ಧರ ಕಾಲವನ್ನು ಗೊತ್ತು ಪಡಿಸಬೇಕಾದರೆ ರೇವಣಸಿದ್ಧರನ್ನು ತೆಕ್ಕೆ ಹಾಕ ಬೇಕಾಯಿತು. ಅದರಿಂದ ಬಾವಿ ತೆಗೆಯಹೋಗಿ ಬೇತಾಳ ಹೊರಟಂತಾಗಿದೆ. ರಂಭಾಪುರೀ ಪೀಠವೂ ಉಜ್ಜಯಿನಿಯ ಸಮಕಾಲೀನವಾಗಿಯೋ ತುಸು ಹಿಂದೆಯೋ ಇರಬೇಕು. ಎಂದು ತಿಳಿಯುವಂತಿದೆ. ಇದೇ ಜಾಡನ್ನು ಹಿಡಿ ದರೆ ಪಂಚಾಚಾರ್ಯ ಪೀಠಗಳೆಲ್ಲವೂ ೧೨ನೆಯ ಶತಮಾನದು ವೆಂದೇ ನಿರ್ಣಯಕ್ಕೆ ಬರಬಹುಹು. ಇದಕ್ಕೆ ವಿರುದ್ಧವಾಗಿ ' ಮಠಸ್ಥಲ ನಿರ್ಣಯ ' ಆಚಾರ್ಯರನ್ನು ಯುಗಪುರುಷರನ್ನಾಗಿ ಮಾಡಿದ್ದರೂ ಸಂಪಾದಕರ ಸಮ್ಮತಿಯಿಲ್ಲನೆಂತೆ ! ಆದರೆ

ಮರುಳಸಿದ್ಧ ಅನೇಕ Miracles ಮಾಡಿದರೂ ಅವನು ಐತಿಹಾಸಿಕ ವ್ಯಕ್ತಿಯೆಂದು ನಾವು ಒಪ್ಪಲೇಬೇಕು ? ಏಕೆಂದರೆ ರಾಯರ ಸಹೃದಯವ ಸಂತೋಷನೆಯದು ! ಇಂತಹ ಅನಂತ ಪವಾಡಗಳನ್ನು ಮೆರೆದ ಮಹಾಮಹಿಮನಾದ ಮರುಳಸಿದ್ಧನ ಹೆಸರಿನಿಂದ ಒಂದೇ ಒಂದು ವಚನ ಸಿಕ್ಕುತ್ತಿದೆಯೆಂದು ಶ್ರೀ. ಡಿ ಎಲ್. ನರಸಿಂಹಾಚಾರ್ಯರು ಹೇಳುತ್ತಾರೆ. ಕನ್ನಡ ನಾಡಿನ ದುರ್ದೈವವಲ್ಲವೇ ಇದು ? ಶ್ರೀ ಬಸವೇಶ್ವರರ ಕಾಲದಲ್ಲಿ ಸಾಮಾನ್ಯ ಭಕ್ತರು ಕೂಡ ಬೇಕಾದಷ್ಟು ವಚನಗಳನ್ನು ಬರೆದಿದ್ದಾರೆ. ಹೀಗಿರುವಲ್ಲಿ ವೀರಾಚಾರ್ಯನೂ ಮಹಾಮಹಿಮನೂ ಪರಶಿವನ ಅಪರಾವತಾರವೂ ಆದ ಮರುಳಸಿದ್ಧ ಒಂದೇ ಒಂದು ವಚನವನ್ನು ಬರೆದನೆಂದರೆ ಎಂತಹ ಪ್ರಮಾದ ! ಮತ್ತು ವಿಶ್ವಪ್ರೇಮಿಗಳಾದ ಬಸವಣ್ಣನವರೂ ಚೆನ್ನಬಸವಣ್ಣನವರೂ ಈ ಮಹಾಮಹಿಮನ—ಅಸ್ಪೃಶ್ಯೋದ್ಧಾರಕನ-ಹೆಸರನ್ನು ಕೂಡ ಎತ್ತದಿದ್ದುದು ಆಶ್ಚರ್ಯವಲ್ಲವೇ? ದೇವಕವಿಯ ಅಭಿಪ್ರಾಯದಂತೆ ಅಥವಾ ಆ ಕಾವ್ಯ ಸಂಪಾದಕರಿಗೆ ಸಾಹಾಯ್ಯ ನೀಡಿದ ಸಜ್ಜನರ ಅಭಿಪ್ರಾಯದಂತೆ ಶ್ರೀ ಬಸವೇಶ್ವರರೂ ಮರುಳಸಿದ್ಧರೂ ಸಮಕಾಲೀನರೇ ಆಗುತ್ತಾರೆ. ಬಸವಣ್ಣನವರಿಗಿಂತ ಮುಂಚೆಯೇ ಮರುಳಸಿದ್ಧ ಮಾದಿಗರ ಉದ್ಧಾರಮಾಡಿದ್ದಾದರೆ, ಕುಲಹದಿನೆಂಟು ಜಾತಿಗಳ ಕೂಡುಂಡುಮಾಡಿದ್ದರೆ, ನವಯುಗ ಪ್ರವರ್ತಕರೆಂದು ಬಸವಣ್ಣನವರಿಗೆ ಭವ್ಯತೆ ಬರಲು ಕಾರಣವೇ ಇರುತ್ತಿರಲಿಲ್ಲವಲ್ಲ! ಅಥವಾ ಮಾದಿಗರನ್ನು ಸವರ್ಣೀಯರೊಡನೆ ಸಂಬಂಧ ಮಾಡಿದುದಕ್ಕಾಗಿ ಶ್ರೀ. ಬಸವಣ್ಣನವರು ಲಿಂಗೈಕ್ಯರಾಗುವ ಪ್ರಸಂಗವೇ ಬರುತ್ತಿರಲಿಲ್ಲವಲ್ಲ ! ಇದೆಲ್ಲವನ್ನು ನೋಡಿ, ದೇವಕವಿ ಮರುಳಸಿದ್ಧರ ಹೆಸರಿನಿಂದ ಬರಿಬುರುಡೆಯನ್ನು ಬಿಟ್ಟಿದ್ದಾನೆಂದು ಹೇಳಬಹುದಲ್ಲವೇ! ಸಂಪಾದಕರು ಇದಕ್ಕೂ ಒಂದು ಹೆಜ್ಜೆ ಮುಂದೆ ಪ್ರತಿಪಾದಿಸಿದ್ದಾರೆ—" ( ಪೀಠಿಕಾ ಪುಟ ೫೬ ) ಮರುಳಸಿದ್ಧ ಹೊಲೆಯರ ಪ್ರಶ್ನೆಯನ್ನು ಬಿಡಿಸಲೆತ್ನಿಸಿದ. ಸಮಾಜದಲ್ಲಿ ಇತರ ವರ್ಗಗಳಿಗಿರುವ ಸ್ಥಾನಮಾನಗಳು ಅವರಿಗೂ ಇರಬೇಕೆಂಬುದು ಅವನ ಆಸೆಯಾಗಿತ್ತು....." ಈ ವಿಚಾರ ಕಾವ್ಯದಲ್ಲಿ ಎಲ್ಲಾದರೂ ಕಾಣುತ್ತಿದೆಯೇ ! " ಇವನ ಸಮಾನದೃಷ್ಟಿಗೆ ಸೇವಕರಾದ ಜಟ್ಟಿಗ—ಬೈರ—ಹನುಮ ಇವರಿಗೂ ತನ್ನ ಪಂಕ್ತಿಯಲ್ಲಿಯೇ ಎಡೆಮಾಡಿ ಕೊಟ್ಟಿದ್ದೇ ಸಾಕ್ಷಿಯಾಗಿದೆ ". ಈ ಸೇವಕರು ಮಾದಿಗರೋ !

ಈ ಮರುಳಸಿದ್ಧರ ಕಾಲಸನ್ನಿರ್ಣಯದ ಬಗೆಗೂ ರಾಯರು ಬಹಳ ಪರಿಶ್ರಮ ಪಟ್ಟು ವೀರಶೈವ ಸಮಾಜದ ಮೇಲೆ ದೊಡ್ಡದೊಂದು ಉಪಕಾರವನ್ನೇ ಮಾಡಿದ್ದಾರೆ. ಕುಳಿತಲ್ಲಿಂದ ಒಂದು ಹೆಜ್ಜೆಯನ್ನೂ ಕಿತ್ತಿಲ್ಲ. ಬರಿಯಹೆರವರ ಟೀಕೆ

ಟಿಪ್ಪಣಿಗಳನ್ನೇ ತರಿಸಿಕೊಂಡು ಅದರ ಮೇಲೆ ಭವ್ಯಮಂದಿರವನ್ನು ಕಟ್ಟ ಹೋದುದು ಸಾಮಾನ್ಯ ಎದೆಗಾರಿಕೆಯೇ? ಈ ಪರಪ್ರತ್ಯಯನೇಯತೆ ಸಂಪಾದಕರಿಗೆ ಸಹಜವಾದುದೇ ?

ಇನ್ನು, ಸಂಪಾದಕರ ಸರಣಿಯಂತೆಯೇ ಅವರ ಪೀಠಿಕೆಯ ವಿಮರ್ಶೆಮಾಡೋಣ. ಯಾವನೊಬ್ಬ ಮಹಾಪುರುಷನ ಜೀವನದ ಐತಿಹಾಸಿಕಅಂಶಗಳನ್ನು ಕಟ್ಟಲು ನಾಲ್ಕು ಹಾದಿಗಳಿಂತೆ: (೧) ಕಾವ್ಯ ಪುರಾಣಗಳಲ್ಲಿ ಬರುವ ಉಲ್ಲೇಖ (೨) ಅವರ ಕೃತಿಗಳಲ್ಲಿ ದೊರೆಯಬಹುದಾದ ಇತಿಹಾಸ. (೩) ಶಾಸನಾಧಾರ (೪) ಪ್ರತೀತಿ, ಸ್ಥಳಪುರಾಣ.

(೧) ಈ ಮಾರ್ಗದ ಸಿದ್ಧತೆಗಾಗಿ ರಾಯರು ಕೆಲವು ಗ್ರಂಥಗಳ ಹೆಸರುಗಳನ್ನು—ಅವುಗಳಲ್ಲಿ ಉಪಲಬ್ಧವಿಲ್ಲದುವುಗಳನ್ನು ಕೂಡ—ಕೊಟ್ಟಿದ್ದಾರೆ. ಅವೆಲ್ಲವುಗಳಲ್ಲಿಯೂ—ನಮಗೆ ತಿಳಿದ ಮಟ್ಟಿಗೆ—ಮರುಳಸಿದ್ಧನ ಮಾಹಾತ್ಮ್ಯವೇ ಇದೆ; ಹೊರತಾಗಿ, ಆತನು ವಾದಿಗನಿದ್ದು ಮಹಾಪೀಠಾಚಾರ್ಯನಾದನೆಂದು ಹೇಳಿಲ್ಲ. ಇಲ್ಲಿ ಇನ್ನೂ ಒಂದು ಸಂಗತಿಯನ್ನು ಗಮನಿಸತಕ್ಕದ್ದು. ಕಾವ್ಯಪುರಾಣಗಳಲ್ಲಿ ಮಹಾಕಾವ್ಯತೆಯನ್ನು ಮುಂಡಿಸಬೇಕೆಂದಾಗಲಿ, ಪರಮತದ್ವೇಷದಿಂದಾಗಲಿ, ಬೇರೆ ಬಗೆಯ ದ್ವೇಷಾಸೂಯೆಗಳಿಂದಾಗಲಿ ಅಸಂಬದ್ಧ—ಅನೈತಿಹಾಸಿಕಸಂಗತಿಗಳು ಕೂಡಿಕೊಂಡಿರುವುದನ್ನು ಸಾಹಿತಿಗಳು ಬಲ್ಲರು. ಎಂದ ಮೇಲೆ ಅವುಗಳನ್ನೇ ಆಧಾರವಾಗಿಟ್ಟುಕೊಳ್ಳುವುದು ಹೇಗೆ ? ದೇಪಕವಿಯ ಜಾತಿ—ಕುಲ—ಶೀಲ—ಸ್ಥಾನಮಾನಗಳು ತಿಳಿಯುವವರೆಗೆ ಆತನು ಯಾವ ಉದ್ದೇಶದಿಂದ ಈ ಕಾವ್ಯವನ್ನು ಕಟ್ಟಿದ್ದಾನೆಂದು ನಿರ್ಣಯಿಸಹೋಗುವುದು ಡಾನ್ ಕಿಗ್ಝೋಟಿಕ್ ಪ್ರಯತ್ನವಾಗಲಾರದೇ ?

(೨) ಮರುಳಸಿದ್ಧರ ವಚನ ಅರುವತ್ತೆಂಟು ಸಾಸಿರ (ಪೀಠಿಕಾ ಪುಟ. ೨) ಆದರೆ ಕೈಗೆ ಸಿಕ್ಕಿರುವುದು ಒಂದೇ ಒಂದು ! ಉಳಿದ ೬೭೯೯೯ ವಚನಗಳು ಎಲ್ಲಿ ಹೋದುವು ? ಮರುಳಸಿದ್ಧರೇ ಬರೆದ ದಾರುಕ ಭಾಷ್ಯವಂತೂ ಸಿಕ್ಕಿಲ್ಲ. ಎಂದ ಮೇಲೆ ಈ ಆಧಾರವಂತೂ ನಿರಾಧಾರವಾಯಿತಷ್ಟೇ !

(೩) ಇವರು ಕೊಟ್ಟ ಯಾವ ಶಾಸನಗಳಲ್ಲಿಯೂ ಮರುಳಸಿದ್ಧರ ಹೆಸರೇ ಇಲ್ಲ ಉಜ್ಜಯಿನೀಮಠ.ಆಧುನಿಕವೆಂದು ತೋರಿಸುವುದಕ್ಕೆ ಆ ಶಾಸನಾಧಾರಗಳು ಕೊಟ್ಟಿವೆ. ಈಗಿರುವ ಮಠ ಆಧುನಿಕವಾಗಿದ್ದರೆ ಇದ್ದುಕೊಳ್ಳಲಿ;

ಅವರೆ ಉಜ್ಜಯಿನೀ ಪೀಠಾಚಾರ್ಯರಾದ ಮೂಲಮರುಳಾರಾಧ್ಯರ ಪೀಠ ಇದೇ ಎಂದು ಯಾರು ಹೇಳಬಲ್ಲರು ? ಇದಕ್ಕೆ ಯಾವ ಶಾಸನವಾದರೂ ಆಧಾರ ವಾಗಿದೆಯೋ?

(೪) ಇನ್ನು ಸ್ಥಳ ಪ್ರತೀತಿ ಪುರಾಣಗಳು. ಇವಂತೂ ಎಲ್ಲ ಸಾಧು ಸಂತರ ಚರಿತ್ರೆಗಳಿಗೆ common factorsಇದ್ದಹಾಗೆ.ತಮ್ಮ ತಮ್ಮ ಉದ್ದಿಷ್ಟ ಮಹಾಪುರುಷನ ಬಗೆಗೆ ಎಲ್ಲರೂ ಒಂದೇ ಬಗೆಯ ಕತೆಯನ್ನು ಹೇಳುತ್ತಾರೆ. ಇದು ಅನುಭವಸ್ಥರಿಗೆ ಅರಿಯದ ವಿಷಯವಲ್ಲ. ಆದುದರಿಂದ ಸಂಶೋಧ ಕರು ಇವುಗಳನ್ನು ನಂಬತಕ್ಕುದೇ ಅಲ್ಲ.

ಹೀಗೆ, ರಾಯರು ಕೊಟ್ಟಿರುವ ಯಾವ ಆಧಾರಗಳೂ ಐತಿಹಾಸಿಕವೆಂದು ಒಪ್ಪುವಂತಿಲ್ಲ; ಎಂದ ಮೇಲೆ ಮಾಯಿಗ ಮರುಳಸಿದ್ಧನೇ ಉಜ್ಜಯಿನೀ ಪೀಠಾ ಚಾರ್ಯ ಮರುಳಸಿದ್ಧರೆಂದು ಒಪ್ಪುವುದಂತೂ ಸಾಧ್ಯವೇ ಇಲ್ಲ. ಅವರೂ ಈ ವಿಚಾರದಲ್ಲಿ ಸಂಪಾದಕರು ಅನೇಷ್ಟೋ ವಿದ್ವಜ್ಜನರ ಅಭಿಪ್ರಾಯಗಳನ್ನು ಆಧರಿ ಸಿದ್ದಾರೆ. ಅವು ಸಟೆಯೋ ಇರಲಿ ದಿಟವೇ ಇರಲಿ; ಅವುಗಳಲ್ಲಿ ಏಕತಾನತೆ ಯಾವುದೂ ಇದೆಯೋ ? ಕಾಲಮಾನ ನಿರ್ಣಯದಲ್ಲಿ ಎಲ್ಲರೂ ತೂಗುಯ್ಯಾಲೆ ಯಲ್ಲಿ ಜೋಲಿ ಹೊಡೆಯುತ್ತಿದ್ದಾರೆ. ಸಂಪಾದಕರ ಸ್ವತಃ ಪ್ರಯತ್ನ ಈ ವಿಷಯದಲ್ಲಿ ಏನೂ ಇಲ್ಲವೇ ಇಲ್ಲ. ಅದಕ್ಕಾಗಿ ಅವರು ಮುಂಡುಸುತ್ತಿ ಶತ ಮಾನದ ಸಂಖ್ಯೆಯಲ್ಲಿ ಕಾಲನಿರ್ಣಯ ಕೊಟ್ಟಿದ್ದಾರೆ! ಇದಲ್ಲವೇ ಸಂಶೋಧನ ದಕ್ಷಿಯ ಸತ್ವದಾಯಿತೆ ! ಇರಲಿ. ಶ್ರೀ. ಮಲ್ಲೂರ ಶ್ರೀನಿವಾಸ ಜೋಯಿಸರ ಲೇಖದಲ್ಲಿ, ರೇವಣಸಿದ್ಧರು " ಅಗಸ್ತ್ಯರೊಡನೆ ಗೋಷ್ಠಿನಡೆಸಿ " (ಪೀಠಿಕಾ ಪುಟ ೭) ಎಂದಿದೆ. ಈ ಅಗಸ್ತ್ಯರು ಯಾರು ? ಒಕ್ಕುಡಿತೆಯಿಂದ ಕಡ ಲನ್ನು ಕುಡಿದ ಅಗಸ್ತ್ಯರೋ ಅಥವಾ ಅದೇ ಹೆಸರಿನ ಬೇರೊಬ್ಬರೋ ? ಅವರೇ ಇವರು ಎಂದು ೧೨ನೆಯ ಶತಮಾನಕ್ಕೆ ತಂದರೆ, ತಮಿಳು ಭಾಷೆ ಅಗಸ್ತ್ಯರಿಂದಲೇ ಹುಟ್ಟಿತು ಎಂಬ ಮಾತಿಗೆ ಗತಿಯೇನು? ತಮಿಳು ಭಾಷೆ ಕನ್ನಡಕ್ಕಿಂತಲೂ ಪ್ರಾಚೀನವೆಂದು ಭಾಷಾ ವಿಶಾರದರು ಬರೆಯುತ್ತಾರೆ. ಕನ್ನ ಡದ ಹುಟ್ಟು ಕ್ರಿ ಪೂ. ದಲ್ಲಿ ಎಂದು ಗೊತ್ತಾಗುತ್ತಿದೆ. ಎಂದ ಮೇಲೆ ತಮಿಳು ಭಾಷಾಸ್ರಷ್ಟಾರರಾದ ಅಗಸ್ತ್ಯರ ಕಾಲವಾವುದಿರಬೇಕು ? ಈ ಅಗಸ್ತ್ಯ ಬೇರೆ ಯೆಂದಾದರೆ ಉಜ್ಜಯಿನೀ ಪೀಠಸ್ಥಾಪನಾಚಾರ್ಯರಾದ ಮರುಳಸಿದ್ಧರಿಂದ ಭಿನ್ನ ವಾಗಿ ಮತ್ತೊಬ್ಬ ಮರುಳಸಿದ್ಧರಿರಬಾರದೇಕೆ ?

ಶ್ರೀ. ಜೀರಿಗೆ ಕ. ಬಸವಪ್ಪನವರಿಂದ ರಾಯರು ಅನಂತ ಉಪಕಾರ ಹೊಂದಿದ್ದಾರೆ. ಅದಕ್ಕಾಗಿ ಅವರ ಟಿಪ್ಪಣಿಗಳನ್ನು ಉದ್ಧರಿಸಿಕೊಳ್ಳುವಾಗ ಈ ಉಪಕಾರಕ್ಕೆ ತಕ್ಕ ಮೆಚ್ಚನ್ನು ಕೊಟ್ಟಿದ್ದಾರೆ ಸಂಪಾದಕರು ! ?ಬೇಕಾದರೆ ನೋಡಬಹುದು.

'ಮುರುಳಸಿದ್ಧನ ದೇವಸ್ಥಾನ: "...... ...... ಈ ದೇವಸ್ಥಾನವನ್ನು ಮುರುಳ ಸಿದ್ಧನೇ ಜಕ್ಕಣಾಚಾರ್ಯನ ಕೈಯಿಂದ ಕಟ್ಟಿಸಿ........." ( ಪೀ. ಪು. ೧೨ ) ಇದು ಶ್ರೀ ಜೀರಗೆಯವರ ಅವತರಣ. ಅದಕ್ಕೆ ಕೆಳಗೆ "ಜಕ್ಕಣಾಚಾರ್ಯ ಐತಿಹಾಸಿಕ ವ್ಯಕ್ತಿಯಲ್ಲ. ಸಂ" ( ಪೀಠಿಕಾ ಪುಟ ೧೨-ಟಿಪ್ಪಣಿ ) ರಾಯರ ದಯಾ? ಶ್ರೀ ಜೀರಿಗೆಯವರ ಸಂಶೋಧನೆಯಲ್ಲಿ ಆಳವಾದ ಅಭ್ಯಾಸವಿಲ್ಲವೆಂದು ಸಂಪಾದಕರೇ ಸರ್ಟಿಫಿಕೇಟು ಕೊಟ್ಟು ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾರೆ! ಇದರ ಮೇಲೆ ನಮ್ಮ ವಿಮರ್ಶೆ ಅನಾವಶ್ಯಕವಷ್ಟೇ !

ಸಂಪಾದಕರ ಯಾವ ವಿಮರ್ಶೆಯಲ್ಲಾದರೂ ಮರುಳಾರಾಧ್ಯ ಮತ್ತು ಮರುಳಸಿದ್ಧ ಈ ಹೆಸರುಗಳೆರಡೂ ಒಂದೇ ವ್ಯಕ್ತಿಯವು ಎಂದು ಎಲ್ಲಿಯೂ ಬಂದಿಲ್ಲ. ಉಜ್ಜಯಿನೀ ಗುರುಪರಂಪರೆ ೧೨ನೆಯ ಶತಮಾನಕ್ಕೆ ಹಿಂದೆ ಇರಲೇಇಲ್ಲವೆಂಬ ವಿಚಾರವಂತೂ ಇಲ್ಲವೇ ಇಲ್ಲ. ಇಂತಹ ಅಳ್ಳೆದೆಯಿಂದ— ಅವಸರದಿಂದ ಈ ಕಾವ್ಯ ಸಂಪಾದನೆಯನ್ನು ಏಕೆ ಮಾಡಬೇಕಾಯಿತು ? ಅದಕ್ಕೆ ಸ್ವಬುದ್ಧಿ ಪ್ರೇರಕವಾಗಿದೆಯೋ ಪರಪ್ರತ್ಯಯನೇಯನೇಯತೆ ಕಾರಣವಾಗಿದೆಯೋ ? ಈಗ ಉತ್ತರವನ್ನು ಯಾರು ಬೇಕಾದರೂ ಹೇಳಬಲ್ಲರು. ಇಂತಹ ಕಾವ್ಯ ಸಂಪಾದನೆಯಿಂದ ಸಂಪಾದಕರಿಗೆ ಯಾವ ಸಂಪಾದನೆಯಾಗಿದೆಯೋ ನಮಗೆ ತಿಳಿಯದು; ಆದರೆ ಅದರ 'ಸದ್ಯಃಫಲ'ವಾಗಿ ವೀರಶೈವ ಸಮಾಜದಲ್ಲಿ ಗುರುವಿರಕ್ತರ ಕಲಹಾಗ್ನಿಯಲ್ಲಿ ಸಿವೆ ಚೆಲ್ಲಿದಂತಾಯಿತು, ಎಣ್ಣೆ ಸುರಿದಂತಾಯಿತು!

ವಸ್ತುತಃ ವಿಚಾರಮಾಡಿದರೆ ಶ್ರೀ. ಅ. ನ. ಕೃ. ಅವರು ಈ ಕಾವ್ಯ ಸಂಪಾದನೆಗೆ ಕೈಹಾಕಿದುದೇ ತಪ್ಪೆಂದು ತೋರುತ್ತಿದೆ. ಏಕೆಂದರೆ ಒಂದು ಮತದ ಧಾರ್ಮಿಕ ಆಂದೋಲನದಲ್ಲಿ ಪರಮತೀಯರು ಕೈಹಾಕುವುದು ಯಾವ ಕಾರಣದಿಂದಲೂ ಕಲ್ಯಾಣಕಾರಕವಲ್ಲ. ತಮಗೆ ಸಾಹಿತ್ಯ ಪ್ರೇಮವೇ ಇದ್ದರೆ ಇದೇ ಕಾವ್ಯವನ್ನು ವೀರಶೈವ ವಿದ್ವಾಂಸರಿಗೆ ತೋರಿಸಿ, ಉಜ್ಜಯಿನೀ ಮಹಾಸ್ವಾಮಿಗಳೊಡನೆ ಚರ್ಚಿಸಿ ನೋಡಲು ಒಂದು ನಿರ್ಣಯಕ್ಕೆ ಬರಬೇಕಾಗಿತ್ತು.

ಅಲ್ಲದೆ ರಾಯರು ಆಧಾರವಾಗಿಟ್ಟುಕೊಂಡಿರುವ ಗ್ರಂಥವಾದರೂ ಎಂತಹ ಅಬದ್ಧಕಂತೆ! ವಾಣಿಯಲ್ಲಿ ವಿಶುದ್ಧತೆಯಿಲ್ಲ; ಬಂಧದಲ್ಲಿ ಬಿಗುವಿಲ್ಲ; ಭಾವಗಳಲ್ಲಿ ಬೆಡಗಿಲ್ಲ; ರಸದಲ್ಲಿ ಪರಿಪಾಕವಿಲ್ಲ; ವರ್ಣನೆಯಲ್ಲಿ ವೈವಿಧ್ಯವಿಲ್ಲ; ಕಥೆಯಲ್ಲಿ ಕಟ್ಟುನಿಟ್ಟುಗಳಿಲ್ಲ; ಛಂದಸ್ಸಿನಲ್ಲಿ ಚೊಕ್ಕತನವಿಲ್ಲ; ಚರ್ಚೆಗಳಿಗೆ ಚರಿತ್ರೆಯ ಆಧಾರವಿಲ್ಲ; ಕವಿಯ ಕುಲ ಗೊತ್ತಿಲ್ಲ; ಶೀಲಗೊತ್ತಿಲ್ಲ; ತಂದೆತಾಯಿಗಳ ತಿಳಿವಳಿಕೆಯಿಲ್ಲ; ವಿದ್ಯೆಯ ಮಟ್ಟದ ವಿಚಾರವಿಲ್ಲ! ಇಂತಹ ಇಲ್ಲ, ಇಲ್ಲ ಎಂಬ ಇಲ್ಲಾಣವನ್ನು ಮೊದಲು ಮುಟ್ಟಿದುದೇ ತಪ್ಪು. ಮುಂದಿಯ ಮುಖಕ್ಕೆ ಬಳಿಯಹೋದುದಂತೂ ಪೂರಾ ತಪ್ಪು! ಉದಯೋನ್ಮುಖ ಸಾಹಿತಿಗಳಾದ-ಕೆಲವು ಕಡೆ ಉದಿತೋದಿತ ಸಾಹಿತಿಗಳೆಂದೂ ಹೆಸರಾದ-ರಾಯರು ಪ್ರಾಚೀನ ಸಾಹಿತ್ಯದ ಆಳವಾದ ಅಭ್ಯಾಸಮಾಡಿದರೆ ಎಂತಹ ಉತ್ಕೃಷ್ಟ ಕಾವ್ಯವನ್ನು ಸಂಪಾದಿಸಲೂ ಶಕ್ಯವಿದೆ. ಕಾಲನಕರಾಲಗರ್ಭದ ಕಗ್ಗತ್ತಲೆಯಲ್ಲಿ ಕಣ್ಮರೆಯಾಗಿರುವ ಕನ್ನಡ ಕೃತಿರತ್ನಗಳು ಇನ್ನು ಎಷ್ಟೋ ಬೈಲಿಗೆ ಬರಲಿವೆ. ಅದನ್ನು ಬಿಟ್ಟು ಈ ದೇಪಕವಿಯ ಮರುಳಸಿದ್ಧಕಾವ್ಯದ ಮುಗ್ಗುಜೋಳವನ್ನು ಮುಂದಿಯಲ್ಲಿ ಮಾರಾಟಕ್ಕಿಟ್ಟು ಅಗ್ಗಸೆಟ್ಟಿಯ ಪದವಿಗೆ ಪಕ್ಕಾದುದು ನಿಜವಾಗಿಯೂ ವಿಷಾದಕರ ಸಂಗತಿ! ಸಾಹಿತಿಯ ಕೆಲಸ ಮುಂದಿಗೆ ತಾರಕವಾಗಬೇಕಲ್ಲದೆ ಮಾರಕವಾಗಕೂಡದು! ಇದೇ ದೃಷ್ಟಿಯಿಂದಲೇ ಈ ಕಾವ್ಯದ ಸಾಹಿತ್ಯ ಸಮೀಕ್ಷಣ ಮಾಡಿದೆ. ಕಾವ್ಯದ ವಸ್ತು—ವಿಷಯನಿರೂಪಣೆಯಲ್ಲಿ ಬರುವ ವೀರಶೈವ ಸಂಪ್ರದಾಯ-ಸುಸಂಬದ್ಧತೆಗಳನ್ನು ವಿವರಿಸುವುದು ವೀರಶೈವ ವಿದ್ವಾಂಸರಿಗೇ ಮೀಸಲು. ಅವರ ವಿಚಾರಸಾಗರಮಂಥನದಲ್ಲಿ ಹೊರಟ ಅಮೃತದ ಸೇಚನೆಯಿಂದ ಈಗ ವೀರಶೈವರಲ್ಲಿ ಹೊತ್ತಿರುವ ಕಲಹಾಗ್ನಿ ಶಾಂತವಾಗಲಿ !!

———

# ಮುರುಳಸಿದ್ಧರೆಷ್ಟು ಜನ?

ಲೇ॥ ಶ್ರೀ ಶಿವ, ಶ್ರೀಶೈಲ.

ಶ್ರೀ ಶ್ರೀ ಶ್ರೀ ಎಂದು ಅನಂತ ಶ್ರೀಕಾರಗಳನ್ನು ಹೊಂದಿರುವ ಪೂಜ್ಯರ ನೇಕರು ಆಂಧ್ರ—ಕರ್ನಾಟಕ ಪ್ರಾಂತಗಳಲ್ಲಿ ಒಂದೇ ಹೆಸರಿನವರು ಸ್ಥಲ ಹಿಂದು ಮುಂದು ಪ್ರಖ್ಯಾತರಾಗಿರುವುದು ಸರಿಯಷ್ಟೆ! ಅವರವರ ಸ್ಥಾನಮಾನ್ಯ ಗಳನ್ನೂ ಉಚಿತವಾದ ಕಾಲಮಾನವನ್ನೂ ಅರಿಯದವರು ಸ್ವಾಭಾವಿಕವಾಗಿ ತಮ್ಮ ಲೇಖನಗಳಲ್ಲಿ ಲೋಪದೋಷಗಳಿಗೆ ಗುರಿಯಾಗುತ್ತಾರೆ.

ಸದ್ಯಃ ಅಂತಹ ತೊಡಕಿನ ಹೆಸರುಗಳಲ್ಲಿ "ಮುರುಳಸಿದ್ಧ" ಎಂಬು ದೊಂದು ಪ್ರಸಿದ್ಧವಾದುದು. ಈ ಹೆಸರಿನವರು ಬಹಳ ಜನರಾಗಿರುವದರಿಂದ "ಮೂಲಮುರುಳಸಿದ್ಧ" ರಾರೆಂಬುದು ಸಂದೇಹಕ್ಕೆಡೆಯಾಗಿದೆ. ಆದುದರಿಂದ ನಮಗೆ ಇಲ್ಲಿಯವರೆಗೆ ಸಿಕ್ಕಿರುವ ಆಧಾರಗಳಿಂದ "ಮುರುಳಸಿದ್ಧರೆಷ್ಟು ಜನ" ಎಂಬ ಲೇಖನವನ್ನು ಬರೆಯಲು ಪ್ರಯತ್ನಿಸುವೆವಲ್ಲದೆ "ಮೂಲ ಮುರುಳ ಸಿದ್ಧ" ನಾರೆಂಬುದನ್ನೂ ಇಲ್ಲಿ ನಿರ್ಣಯಿಸಲು ಹೋರಾಡಿರುವೆವು. ವಾಚಕರು ನಿಷ್ಪಕ್ಷಪಾತಿಗಳಾಗಿ ವಿಷಯಗಳನ್ನು ಗ್ರಹಿಸಬೇಕು.

"ಕರ್ನಾಟಕದ ಉಜ್ಜಯಿನೀ ಸಿಂಹಾಸನ ಸ್ಥಾಪಕನಾದ ಮೂಲಮುರುಳಸಿದ್ಧ"

"ದಿ. ಇಂಡಿಯನ್ ರಿವ್ಯೂ ಮಾಸಪತ್ರಿಕೆ ೧೯೧೫ ಮೇ. ಸಂಚಿಕೆ" ಯಲ್ಲಿ ಮದ್ರಾಸಿನ ಟಿ. ಎಸ್. ನಾರಾಯಣಶಾಸ್ತ್ರಿಗಳೆಂಬವರು ಶ್ರೀಕರ ಭಾಷ್ಯಕಾರರಾದ ಶ್ರೀಪತಿಪಂಡಿತರ ಕಾಲ ಕ್ರಿ. ಶ. ೧೦೭೨ ಎಂದು ನಿರ್ಣಯ ಮಾಡಿರುವರು. ಈ ಶ್ರೀಪತಿಪಂಡಿತರು ತಮ್ಮ ಭಾಷ್ಯದ ಆರಂಭಸ್ತುತಿಯಲ್ಲಿ ಮುರುಳಸಿದ್ಧರನ್ನೂ ಕೊಂಡಾಡಿದ್ದಾರೆ. ಈ ಮುರುಳಸಿದ್ಧನೇ ಎಲ್ಲ ಮುರುಳ ಸಿದ್ಧರಿಗೂ ಪೂರ್ವದವನೆಂದು ತಿಳಿಯುತ್ತದೆ. ಕರ್ನಾಟಕ ಕವಿಚರಿತೆಕಾರರ ಅಭಿಪ್ರಾಯದಂತೆ ಕ್ರಿ. ಶ. ೧೬೫೦ ರಲ್ಲಿ ಪ್ರಸಿದ್ಧವಾದ ಹೂಲಿಯ ಸಿದ್ಧನಂಜೇಶ ಕವಿಯು ತನ್ನ "ಗುರುರಾಜ ಚಾರಿತ್ರ್ಯ"ದಲ್ಲಿಸ್ತುತಿಸಿರುವ ಮುರುಳಸಿದ್ಧನೂ ಈ ಸಿದ್ಧ ನಂಜೇಶಕವಿಯ ಶಿಷ್ಯನಾದ ಹೂಲಿಯ ನಂಜೇಶಕವಿಯು ತನ್ನ

" ಮರುಳಾರಾಧ್ಯ ವಿಜಯ " ದಲ್ಲಿ ಸ್ತುತಿಸಿ ಶಾಲಿವಾಹನ ಶಕ ೮೨೪ ರಲ್ಲಿ ಕಾಲಿಕಾ ಉಜ್ಜಯಿನಿಯಿಂದ ಕರ್ನಾಟಕಕ್ಕೆ ಬಂದವನೆಂದು ಹೇಳಿರುವ ಮರುಳಸಿದ್ಧನೂ ಒಬ್ಬರೆಂತಲೇ ತಿಳಿಯುತ್ತದೆ.

ಬೆಂಗಳೂರಿನ ಶ್ರೀಯುತ ಆ. ನ. ಕೃಷ್ಣರಾಯರು ಅಚ್ಚುಮಾಡಿಸಿರುವ ದೇಪಕವಿಯ " ಮರುಳಸಿದ್ಧಕಾವ್ಯ "ದಲ್ಲಿ ಹೆಣೆಯಲಾಗಿರುವ ಚರಿತೆಯು ಕಾಲಿಕಾ ಉಜ್ಜಯಿನಿಯ ಆದಿಮರುಳಸಿದ್ಧನಿಗೆ ಸಂಬಂಧಪಟ್ಟಿದೆಂದು ತೋರಿದರೂ ಕಥಾನಾಯಕನಾದ ಈ ಮರುಳಸಿದ್ಧನು ಕೂಚಿಮಾರನ ಮಗ ನೆಂದು ಕಾವ್ಯಕಾರನಾದ ದೇಪನ ವಾಣಿಯಿಂದಲೇ ಸ್ಪಷ್ಟ ಪಟ್ಟಿರುವುದರಿಂದ ಕೊಪ್ಪಳದ ಸಮೀಪದಲ್ಲಿರುವ ಸಿಂದೋಗಿ ಗ್ರಾಮದ ಮಾದಿಗ ಕೂಚಿಮಾರನ ಮಗನೇ ಈತನೆಂದು ನಿಶ್ಚಯವಾಗುವುದರಿಂದ ಇವನು ಆದಿಮರುಳಸಿದ್ಧನಲ್ಲ ವೆಂದು ಸ್ಪಷ್ಟವಾಗುತ್ತದೆ ಈ ಮಾದಿಗ ಮರುಳಸಿದ್ಧನು ದೇವಕವಿಯು ಹೇಳುವಂತೆ.

" ಅರಿತರಿಯದಾರು ಸಾವಿರ ವರುಷ ದೀಪರಿಂದು
ಚರಿಸಿ ದೇಶಾಂತರ ದೊಳಗೆ ಪವಾಡವ ಗೆಲಿದು
ಮರುಳತನ ವಿಪರೀತಸಲ್ಲ ದುಂತನಗೆಂದು
ಮರುಳ ಮನದೊಳು ನೆನೆವುತ ॥ ಸಂ. ೪. ಪದ್ಯ ೪ ॥

ದ್ವಾಪರದ ಕಡೆಯಾಗೆಣಿಸುತಿರೆ ಕಲಿಯುಗಾದಿಯ ಪ್ರಥಮ ಗಣಾ ರಂಭವಾಗುತಿರಲು। ಜಕ್ಕಣಾಚಾರ್ಯರನು ಕರೆದು ನೇಮಿಸಿದನಾಗ ಮುಕ್ಕಣ್ಣ ಹರನು ಕಲಿಯುಗದಾದಿಪುಗುತಲಿವೆ " ॥ ಸಂ. ೫. ಪದ್ಯ ೧೫ ॥ (ಮರುಳಸಿದ್ಧ ಕಾವ್ಯ ) ಇಷ್ಟೊಂದು ಪ್ರಾಚೀನಕಾಲದವನಾಗಲಾರನೆಂಬುದು ಸ್ಪಷ್ಟವಾಗಿ ಒಡೆದು ಕಾಣುತ್ತದೆ. ಅಲ್ಲದೆ ಈ ಕವಿಯ ಅಭಿಪ್ರಾಯದಂತೆ ಈ ಮಾದಿಗ ಮರುಳಸಿದ್ಧನು ಓರಂಗಲ್ಲು ಕಾಕತೀಯ ಅರಸುವಂತದ ಗಣಪತಿಯ ಕಾಲ ಕ್ರಿ. ಶ. ೧೦೫೦ ರಷ್ಟು ಪೂರ್ವದವನೂ ಆಗುವುದಿಲ್ಲ. ಅದೂ ಅಲ್ಲದೆ ಈ ಅರಸು ಗಣಪತಿಯನ್ನು ಕಂಡವನು ಮಾದಿಗ ಮರುಳನಲ್ಲವೂ ಅಲ್ಲ. ಎಂಬುದು " ಮರುಳಾರಾಧ್ಯ ವಿಜಯ " ದಿಂದ ನಿರ್ಧಾರವೂ ಆಗಿದೆ.

ಹೂಲಿಯ ನಂದೀಶ ಕವಿಯ " ಮರುಳಾರಾಧ್ಯ ವಿಜಯ " ದಿಂದ, ಕಲಿಯುಗದ ಆರಂಭ ಕಾಲದಲ್ಲಿದ್ದ (೧) ಮರುಳಾರಾಧ್ಯ, ಶಾಲಿವಾಹನ ಶಕ

ಲತ್ತಿಳರಲ್ಲಿದ್ದ (೨) ಆದಿಮರುಳಸಿದ್ಧ ಶಾಲಿವಾಹನ ಶಕ ೧೦೦೩ ರಲ್ಲಿ ಹೂಲಿಯ ಮಹೇಶ್ವರ ವಂಶದಿಂದ ಕರ್ನಾಟಕ ಉಜ್ಜಯಿನಿಗೆ ಪಟ್ಟಕ್ಕೆ ಬಂದ (೩) ಮರುಳಸಿದ್ಧ, ಕ್ರಿ. ಶ. ೧೪೦೬ ರಲ್ಲಿ ಪ್ರಸಿದ್ಧನಾದ ಹಂಪೆಯ ಪ್ರೌಢ ದೇವ ರಾಯನಿಂದ ತುಂಗಭದ್ರಾ ದಂಡೆಯಲ್ಲಿ ಪಾವನಾತ್ರಮವನ್ನು ನಿರ್ಮಿಸಿಕೊಂಡು ತಪಸ್ವಿಯಾಗಿ ಮೆರೆದ ಉಜ್ಜಯಿನೀ ಪೀಠದ ಸಿದ್ಧಮಲ್ಲಾರ್ಯದ ವರದಿಂದ ಹುಟ್ಟಿದ (೪) ಸಿಂಪೋಗಿಯ ಮಾದಿಗ ಮರುಳಸಿದ್ಧ ಹೀಗೆ ನಾಲ್ವರ ಚರಿತ್ರೆ ಯನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ಅನುಕೂಲವಾಗಿದೆ.

" ಮರುಳಾಧ್ಯ ವಿಜಯ "ದಲ್ಲಿ ಬಂದಿರುವ ಕ್ರಿ. ಶ. ೧೫೫೯ ರ ಸಮ ಯದ ಮಾದಿಗ ಮರುಳಸಿದ್ಧನನ್ನೇ—ಕುಲಾಭಿಮಾನದಿಂದ—ಮಾದಿಗನಾದ ಕ್ರಿ. ಶ. ೧೫೬೯ ರಸಮಯದ ದೇಪಕವಿಯು ಉಜ್ಜಯಿನೀ ಪೀಠಸ್ಥಾಪಕ ನೆಂದೂ ಮಹಾಚಾರ್ಯನೆಂದೂ ಹೊಗಳಿ ತನ್ನ ಸಮಗ್ರ ಕಾವ್ಯವನ್ನೇ ಅಸತ್ಯ ಮಯವನ್ನಾಗಿ ಮಾಡಿಕೊಂಡಿದ್ದಾನೆ.

ಹೂಲಿಯ ನಂದೀಶನು ಯಾವ ವಿಷಯವನ್ನೂ ವ್ಯತ್ಯಾಸಮಾಡದೆ ಇದ್ದುದನ್ನು ಇದ್ದಂತೆ ಬಣ್ಣಿಸಿರುವುದರಿಂದ ಇವನ "ಮರುಳಾರಾಧ್ಯ ವಿಜಯ" ವು ಪ್ರಮಾಣಗ್ರಂಥವೆಂದು ಎಲ್ಲರ ನಂಬಿಗೆಗೂ ಪಾತ್ರವಾಗಿದೆ. ಶ್ರೀಯುತ. ಪಂಡಿತ ಚೆನ್ನಬಸವ ಕವಿಗಳು ಕವಲಿ ಮತ್ತು ಶ್ರೀ ಮಾನ್ ಎನ್. ಎಸ್. ಬಸವನಾಳರು ಎಂ. ಎ ಧಾರವಾಡ ಮತ್ತು ಅವರ ಐತಿಹಾಸಿಕ ಮಿತ್ರಮಂಡಳಿ ಯವರು ನಮಗೆ ದೊರೆತಿರುವ ಮರುಳಾರಾಧ್ಯ ವಿಜಯದ ಮೂಲ ಪ್ರತಿ ಯನ್ನು ತಮ್ಮ ಕಡೆಗೆ ತರಿಸಿಕೊಂಡು ನೋಡಿರುವರು. ಆ ಕಾವ್ಯಾಧಾರದ ಮೇಲೆ ಮೂವರು ಮರುಳಸಿದ್ಧರ ಚರಿತ್ರೆಯನ್ನು ಇಲ್ಲಿ ವಿವರಿಸಲು ನಮಗೆ ಅನುಕೂಲವಾಗಿದೆ.

ಹೂಲಿಯ ನಂದೀಶಕವಿಯು ಸಿದ್ಧನಂಜೇಶನು ತನ್ನ ಗುರುವೆಂದು ಕೊಂಡಾಡಿದ್ದಾನೆ. ಈ ಸಿದ್ಧ ನಂಜೇಶನು ತನ್ನ ಹೆಂಡತಿಯಾದ ಚೆನ್ನವೀ ರಾಂಬಿಗೆ ಹೇಳಿದ ವಿಷಯವನ್ನೇ ಸಂಗ್ರಹವಾಗಿ " ಮರುಳಾರಾಧ್ಯ ವಿಜಯ " ವನ್ನು ರಚಿಸಿರುವುದಾಗಿ ನಂದೀಶನು ( ಸಂ. ೧—ಪದ್ಯ ೨೮ ) ಹೇಳಿರುವುದ ರಿಂದ ಈ ಕಾವ್ಯಕ್ಕೆ ಇನ್ನೂ ಪ್ರಾಶಸ್ತ್ಯ ಬಂದಿದೆ. ಕವಿಯ ಹೇಳಿಕೆ

ಯಂತೆ"ಕಲಿಯುಗದ ಮೊದಲನೆಯ ಪಾದದಿ| ಫಲಿತವಪವಟ ವೃಕ್ಷ ಮೂಲ| ಸ್ಥಲದಿ ರಾಜಿಪ ಸಿದ್ಧಲಿಂಗದಿ ಜನನವೆತ್ತಿರುವ"

ನಲಿವ ಮರುಳಾರಾಧ್ಯರನುಪಮ । ಸುಲಲಿತಾಗಿಹ ಚರಿತವನುಚಿ ।
ತ್ತೊಲಿಮೆಯಿಂ ಶ್ರೀ ಮರುಳಸಿದ್ಧನ ಚರಿತ ರಚಿಸುವೆನು ॥ ೩೨ ॥

ಇತ್ತಲಿನ ಸಮಯದೊಳು ಶ್ರೀ ನೃಪ । ಸ್ವಸ್ತಿವರ ಶಕವೆಂಟುನೂರಿ ।
ಪ್ಪತ್ತು ನಾಲ್ಕನೆ ವತ್ಸರದಿ ವೈಶಾಖ ಪಂಚಮಿಯೊಳ್ ॥
ಉತ್ತರೋಜ್ಜಯಿನೀ ವಿಶಾಲ । ಕ್ಷೇತ್ರವಂಬೀಳ್ಕೊಟ್ಟ ಭೂಗುರು ।
ಸತ್ತಮ ಶ್ರೀ ಮರುಳಸಿದ್ಧನ ಚರಿತವರ್ಣಿಪೆನು ॥ ೩೩ ॥

ಶ್ರೀಶಕಾಬ್ದಿಯ ಸಮಯದೊಂದನೆ । ನಾಸಿರದ ಮೂರನೆಯ ಶತಕದಿ ।
ಭಾಸುರ ಶ್ರೀ ಕ್ಷೇತ್ರ ಪೂವಲಿಪುರದಿ ಸಂಜನಿಸಿ ॥
ವಾಸಮಾಡಿದ ಮರುಳಸಿದ್ಧನ । ತೋಷದಾಯಕ ಚರಿತಕವಿತಾ ।
ವೇಶದಿಂವರ್ಣಿಸುವೆ ವಿಬುಧರು ಮೆಚ್ಚು ವಂದದಲಿ ॥ ೩೪ ॥

(ಸಂ. ೧. ಪುಟ ೪ ॥

ಆದಿ ಮರುಳಾರಾಧ್ಯರ ಕಾಲ ಕಲಿಯುಗದ ಆರಂಭ ಸಮಯಕ್ಕೆ ಸೇರಿದು ದೆಂತಲೂ, ಮೂಲಮರುಳಸಿದ್ಧರ ಕಾಲ ಶಾಲಿವಾಹನ ಶಕ ೮೨೪ (ಕ್ರಿ.ಶ. ೯೦೨) ರಸಮಯಕ್ಕೆ ಸೇರಿದುದೆಂತಲೂ, ಹೂಲಿಯ ಮರುಳಸಿದ್ಧರ ಕಾಲ ಶಾಲಿವಾಹನ ಶಕ ೧೦೦೩ (ಕ್ರಿ.ಶ. ೧೦೮೧)ರ ಸಮಯಕ್ಕೆ ಸೇರಿದು ದೆಂತಲೂ ಸ್ಪಷ್ಟವಾಗಿದೆ. ಕವಿಗಳಾದವರು ಕಾಲನಿರ್ಣಯವನ್ನು ಹೀಗೆ ಸ್ಪಷ್ಟಮಾಡುವುದರಿಂದ ಇತಿಹಾಸ ಕಟ್ಟುವವರಿಗೆ ಬಹಳ ಉಪಕಾರವಾಗು ತ್ತದೆ. ಆದುದರಿಂದ ಈ ಕವಿಯ ಉಪಕಾರವನ್ನು ನಾವು ಎಷ್ಟು ತೀರಿಸಿದರೂ ತೀರದಾಗಿದೆ. ನಂದೀಶನ ಮಾತುಗಳಿಂದ ಈ ಮುಂದೆ ಮೇಲ್ಕಂಡ ಮರುಳ ಸಿದ್ಧರ ಇತಿಹಾಸವನ್ನು ವಿವರಿಸುವೆವು.

ಮಾಳವ ದೇಶದಲ್ಲಿ ಕ್ಷಿಪ್ರಾ ಎಂಬುದು ಪವಿತ್ರವಾದ ನದಿ. ಆ ನದಿಯ ದಂಡೆಯ ಮೇಲೆ ಅವಂತಿ ಅಥವಾ ಕಾಲಿಕಾ ಉಜ್ಜಯಿನೀ ಎಂಬ ಪಟ್ಟಣ ವಿದ್ದಿತು. ಅದನ್ನು ಶ್ರೌತಪಾಲನೆಂಬ ಮಹಾರಾಜ ಮೊದಲುಗೊಂಡು ಜೈನ ಸಂತತಿಯವರು ಆಳುತ್ತಿದ್ದರು. (ವೀರ ಕ್ಷಾತ್ರದಿಂದ ವಿಶ್ವವನ್ನು ಜಯಿಸಿದ ವರಾದ ಕಾರಣ ಬುದ್ಧ ಸಾಂಪ್ರದಾಯದ ಈ ಅರಸರಿಗೆ "ಜಯಿನಃ"

ಎಂಬ ಹೆಸರು ಬಂದು ಅದು ಅಪಭ್ರಂಶವಾಗಿ "ಜೈನ" ಬಳಿಕೆಯಲ್ಲಿ ಉಳಿದಂತೆ ಅಥವಾ ಅವರ ದೇವರಾದ ಜಿನನಿಂದಬಂದಂತೆಕಾಣುತ್ತದೆ. ಅಲ್ಲದೆ ಅವಂತಿಗೆ ಉಜ್ಜಯಿನಿ ಅಥವಾ ಉಜ್ಜೈನ್ ಎಂಬ ಹೆಸರೂ ಇದೇ ಕಾರಣದಿಂದ ಬಂದಿರಬಹುದೆಂದೂ ಊಹಿಸಬಹುದಾಗಿದೆ.

ಜೈನ ಧರ್ಮದ ಶ್ರೌತಪಾಲ ಮಹಾರಾಜನು ಆದಿಮರುಳಾರಾಧ್ಯರಿಂದ ಶಿವಲಿಂಗ ದೀಕ್ಷೆಹೊಂದಿ ಶಿಷ್ಯನಾದ ತರುವಾಯ ಅವನ ಸಂತತಿಯ ಅರಸರೆಲ್ಲರೂ ಅವಂತಿಯಲ್ಲಿದ್ದ ಮರುಳಾರಾಧ್ಯರ ಸದ್ಧರ್ಮಸಿಂಹಾಸನ ಮಠದ ಒಡೆಯರಾದ "ಶಂಭು ಮುನಿ"ಗಳೆಂಬ ಸ್ವಾಮಿಗಳಿಗೂ ಆ ಊರ ಅರಸಾದ ವೀರಸೇನನಿಗೂ ಮನಸ್ತಾಪವುಂಟಾಯಿತು. ಗುರುಗಳಿಗೂ ಅರಸರಿಗೂ ತುಮುಲಯುದ್ಧವೇ ಪ್ರಾರಂಭವಾಯಿತು. ಯುದ್ಧದಲ್ಲಿ ಅರಸನ ಸೇವೆ ಹಿಮ್ಮೆಟ್ಟಿತು. ಗುರುಗಳಿಗೆ ವಿಜಯ ದೊರೆಯಿತು. ಆದರೂ ಈ ವಿಜಯ ಕ್ಷತ್ರಿಯರಿಗೇ ಸಲ್ಲತಕ್ಕದ್ದಲ್ಲದೆ ತಮಗೆ ಸಲ್ಲದೆಂದು ಉದಾರಿಗಳಾದ ಶಂಭುಮುನಿಗಳು ಅರಸನಿಗೆ ಬಹುವಿಧವಾದ ಶಾಂತಿಯನ್ನು ಉಪದೇಶಿಸಿದರು. ಅರಸು ಕ್ರೂರಿಯಾದ ಕಾರಣ ತಾನು ಸೋತರೂ ಗುರುಗಳಿಗೆ ಅನ್ಯಾಯ ಬಯಸುವುದನ್ನು ಬಿಡಲಿಲ್ಲ ಆಗ ಶಂಭು ಮುನಿಗಳು ಅತುಲ ಸಂಪತ್ತಿನಿಂದ ಮೆರೆಯುತ್ತಿದ್ದ ತಮ್ಮ ಧರ್ಮ ಪೀಠವನ್ನು ತ್ಯಾಗಮಾಡಿ ವೈರಾಗ್ಯ ಶೀಲರಾಗಿ ತಮ್ಮ ಶಿಷ್ಯರೊಂದಿಗೆ ದಕ್ಷಿಣಕ್ಕೆ ಪಯಣ ಬೆಳೆಸಿ ನಿಬಿಡವಾದ ಒಂದು ಅಡವಿಯಲ್ಲಿ ಪರ್ಣಶಾಲೆಯನ್ನು ಕಟ್ಟಿಕೊಂಡು ಗುರುಕುಲವನ್ನು ಯಥಾವಿಧವಾಗಿ ಕಾಪಾಡಿದರು. ಕೆಲಕಾಲವು ಸುಖವಾಗಿ ನಡೆಸಿತು. ತಮ್ಮ ವಯೋಮಾನವು ಕುಗ್ಗಿದ್ದರಿಂದ ಶಿಷ್ಯರಲ್ಲಿ ಯೋಗ್ಯರಾದ ಮರುಳಸಿದ್ಧ ಎಂಬವರಿಗೆ ಉತ್ತರಾಧಿಕಾರವನ್ನು ಅನುಗ್ರಹಿಸಿದರು. ಅಲ್ಲಿಂದ ಕೆಲದಿನಗಳಲ್ಲಿಯೇ ಅವರು ಲಿಂಗೈಕ್ಯರಾದರು.

ಪರ್ಣ ಕುಟೀರದಲ್ಲಿದ್ದರೂ ಉಜ್ಜಯಿನೀ ಸದ್ಧರ್ಮಸಿಂಹಾಸನಕ್ಕೆ ಕಷ್ಟ ತಪ್ಪಲಿಲ್ಲ ಅರಸು ವೀರಸೇನನ ಸೇನೆ ಅಲ್ಲಿಗೂ ದಾಳಿಯಿಕ್ಕಿತು. ತಪಸ್ವಿಯಾದ ಮರುಳಸಿದ್ಧನು ಧರ್ಮದ್ರೋಹಿಯಾದ ಅರಸನ ನಾಡಿನಲ್ಲಿರುವುದು ಲೇಸಲ್ಲವೆಂದೆಣಿಸಿ ಗುಪ್ತವಾಗಿ ಬೇರೆದಾರಿಯಿಂದ ದಕ್ಷಿಣಕ್ಕೆ ಹೊರಟು ಶಿವಕ್ಷೇತ್ರವಾದ ಪರಳಿಯಲ್ಲಿ ಬಂದು ..ಶಿಸಿದನು ಆಕಾಲವೇ ಕ್ರಿ ಶ. ೯೦೨ ಈತನೇ ಆದಿಮರುಳಸಿದ್ಧ.

ವೀರಶೈವ ಧರ್ಮಗಳ ರಕ್ಷಣೆಗೆ ಪ್ರಧಾನವಾದ ಜಗದ್ಗುರು ಪಂಚಪೀಠಗಳಲ್ಲಿ ಒಂದು ಪೀಠಕ್ಕೆ ಕುಂದುಬಂದು ಧರ್ಮಪ್ರಚಾರಕ್ಕೆ ಅಡ್ಡಿಯಾದುದು

ರಿಸಬೇಕೆಂದು ಸಂಕಲ್ಪಿಸಿ ಜ್ಯೋತಿರ್ಲಿಂಗವಾದ ವೈದ್ಯನಾಥನನ್ನು ಏಕಾಗ್ರ ಚಿತ್ತದಿಂದ ಧ್ಯಾನಿಸಿದನು ಈ ಧ್ಯಾನದ ಫಲವಾಗಿ ರಂಭಾಪುರೀ ವೀರ ಸಿಂಹಾಸನಾಧಿಪತಿಯಾದ ರೇವಣಸಿದ್ಧನು ಕೊಲ್ಹಾಪುರದ ಪ್ರಾಂತದಲ್ಲಿರುವ ಸಿದ್ಧಗಿರಿಯಲ್ಲಿ ತಪಸ್ಸಿಗೆ ಕೂತಿರುವುದು ತಿಳಿದು ಬಂದಿತು. ಮರುಳಸಿದ್ಧನ ಆನಂದವು ಉಕ್ಕೇರಿತು. ಸಂಕಲ್ಪವು ಸಿದ್ಧಿಸುವುದೆಂದು ಮನಸ್ಸು ಹೇಳ ತೊಡಗಿತು. ತಡಮಾಡದೆ ಅಲ್ಪ ಪರಿವಾರದೊಡನೆ ಮರುಳಸಿದ್ಧನು ಅಲ್ಲಿಂದ ಹೊರಟು ಕರವೀರ ಎಂಬ ಪಟ್ಟಣವನ್ನು ಮುಟ್ಟಿ ಸಮೀಪದಲ್ಲಿರುವ ಸಿದ್ಧಗಿರಿ ಯನ್ನು ಸೇರಿದನು.

ತರುಲತೆಗಳಿಂದ ಅಂದವಾಗಿರುವ ಸಿದ್ಧಗಿರಿಯಲ್ಲಿ ಅನೇಕ ತೀರ್ಥಗಳನ್ನು ಕಾಣುತ್ತಲೂ, ವೇದಘೋಷವನ್ನು ಕೇಳುತ್ತಲೂ ಮೆಲ್ಲ ಮೆಲ್ಲನೆ ಅಡಿಯಿ ಡುತ್ತ ಮರುಳಸಿದ್ಧನು ಮುನಿಮಧ್ಯದಲ್ಲಿ ಉನ್ನತವಾದ ಬಿಲ್ವವೃಕ್ಷದ ನೆರಳಿ ನಿಂದ ಆಚ್ಛಾದಿತವಾಗಿ ತಂಪಾಗಿಯೂ ಮನಕ್ಕೆ ಸೊಂಪಾಗಿಯೂ ನಿರ್ಮಲ ವಾಗಿರುವ ಶಿಲಾತಲ್ಪದ ಮೇಲೆ ಒಪ್ಪುತ್ತಿರುವ ರೇವಣಸಿದ್ಧನನ್ನು ಸಂದರ್ಶಿಸಿ ಸಾಷ್ಟಾಂಗವೆರಗಿದನು. ತ್ರಿಕಾಲ ಜ್ಞಾನಿಯಾದ ರೇವಣಸಿದ್ಧನು ತಟ್ಟನೆ ತನ್ನ ಗದ್ದುಗೆಯಿಂದೆದ್ದು ತನಗೆ ಸಮಾನಸ್ಕಂಧನಾದ ಮರುಳಸಿದ್ಧನನ್ನು ಪ್ರತಿಯಾಗಿ ವಂದಿಸಿ ಬಲವಾಗಿ ಅಪ್ಪಿಕೊಂಡನು. ತಾಪಸ ವೃಂದವು ಅಚ್ಚರಿಗೊಂಡು ತಪಿಸುತ್ತಿದ್ದ ಸ್ಥಲದಲ್ಲಿಯೇ ಅಭಿನ್ನಾತ್ಮ ಗುರುಯುಗ್ಮವನ್ನು ವಂದಿಸಿ ಪ್ರಾರ್ಥಿ ಸಿತು. ರೇವಣಸಿದ್ಧನು ಮರುಳಸಿದ್ಧನನ್ನು ಸಮಾನಾಸನದಲ್ಲಿ ಕೂಡ್ರಿಸಿ ಕೊಂಡು ಕುಶಲಪ್ರಶ್ನೆಮಾಡಿದನು. ಮರುಳಸಿದ್ಧನು ಎಲ್ಲಾ ವಾರ್ತೆಯನ್ನು ಅರಿಕೆಮಾಡಿದನು. ಸದ್ಧರ್ಮ ಪೀಠವನ್ನು ಉದ್ಧಾರಮಾಡಬೇಕೆಂದು ಕೇಳಿ ಕೊಂಡನು.

ಮಹಾನುಭವಿಗಳಾದ ರೇವಣಸಿದ್ಧರು ವಿಷಯಗಳನ್ನೆಲ್ಲಾ ಚೆನ್ನಾಗಿ ಪರ್ಯಾಲೋಚಿಸಿ ಕರ್ನಾಟಕದಲ್ಲಿಯೇ ಸದ್ಧರ್ಮ ಪೀಠವನ್ನು ಪುನಃ ಎತ್ತ ಬೇಕೆಂದು ನಿರ್ಧರಿಸಿ ಕಲ್ಯಾಣದ ಅರಸನಾದ ಭುವನೈಕಮಲ್ಲ (ಸೋಮೇಶ್ವರ)ನ ಸಹಾಯದಿಂದ ಉಜ್ಜಯಿನೀ ಪುರವನ್ನೇ ನಿರ್ಮಿಸಬೇಕೆಂತಲೂ, ಅಲ್ಲಿ ಸದ್ಧರ್ಮ ಸಿಂಹಾಸನವನ್ನು ರಚಿಸಬೇಕೆಂತಲೂ ಮರುಳಸಿದ್ಧನಿಗೆ ಉಪದೇಶಿಸಿ ಅರಸ ಮೊದಲಾದ ಜೈನರೆಲ್ಲರನ್ನೂ ಶಿವಭಕ್ತಿ ಬೋಧೆಯಿಂದ ವೀರಶೈವ ಮತಕ್ಕೆ ಪ್ರವೇಶಿಸಿ ಮತವೃದ್ಧಿಯನ್ನು ಮಾಡಬೇಕೆಂತಲೂ ಕಟ್ಟಪ್ಪಣೆಮಾಡಿ ದರು. (ಜೈನರನ್ನು ವೀರಶೈವ ಮತಕ್ಕೆ ಪ್ರವೇಶಮಾಡಿಸಿದವರಲ್ಲಿ ಮೊದಲನೆ ಯವರು ಗೋಕರ್ಣವಾಸಿಗಳಾದ ನೀಲಕಂಠ ಶಿವಾಚಾರ್ಯರು. ಎರಡನೆ ಯವರು ರೇವಣಸಿದ್ಧರು. ಮೂರನೆಯವರು ಮರುಳಸಿದ್ಧರೆಂದು ಈ ಕಾವ್ಯ

ದಿಂದ ಒಡೆದು ಕಾಣುತ್ತದೆ. ಇದೇ ದಾರಿಯನ್ನೇ ೧೨ನೆಯ ಶತಮಾನದಲ್ಲಿ ಬಸವಣ್ಣನವರು ಅನುಸರಿಸಿದ್ದಾರೆ. )

ರೇವಣಸಿದ್ಧರ ಅನುಜ್ಞೆಯಂತೆ ಕಲ್ಯಾಣದರಸನಾದ ಸೋಮೇಶ್ವರನನ್ನು ಮರುಳಸಿದ್ಧರು ಭೆಟ್ಟಿಯಾಗುವುದಕ್ಕೆ ಮುನ್ನ ಕೊಲ್ಲಾಪುರದಲ್ಲಿ ಪ್ರಸಿದ್ಧಳಾದ ಮಾಯಾದೇವಿಯ ಗರ್ವಭಂಗವನ್ನು ಮಾಡಿ ಸತ್ಕೀರ್ತಿಯನ್ನು ಗಳಿಸುವರು ಈ ಸತ್ಕೀರ್ತಿಯ ಮುಖೇನ ಮರುಳಸಿದ್ಧರು ಎಲ್ಲೆಡೆಯೂ ಪ್ರಸಿದ್ಧರಾಗಿದ್ದರು. ಆದುದರಿಂದ ಅರಸು ಸೋಮೇಶ್ವರನು ಮರುಳಸಿದ್ಧರನ್ನು ಸದ್ಭಕ್ತಿಯಿಂದ ಸೇವಿಸಿದನು. ಅಷ್ಟಲ್ಲದೆ ಸದುಪದೇಶದಿಂದ ಶಿವಭಕ್ತನಾಗಿ ವೀರಶೈವನಾದನು. ಅಲ್ಲದೆ ಅಪಾರವಾದ ಧನಸ್ರಾಯದಿಂದ ಈಗ ಕೊಟ್ಟೂರು ಬಳಿ ಇರುವ ಉಜ್ಜಯಿನೀ ಕ್ಷೇತ್ರವನ್ನು ಸದ್ಧರ್ಮಸಿಂಹಾಸನ ಮಠವನ್ನು ಕಟ್ಟಿಸಿ ೧೨೦ ಹಳ್ಳಿಗಳನ್ನು ಮಠಕ್ಕೆ ದಾನವಾಗಿ ಉಂಬಳಿ ಹಾಕಿಕೊಟ್ಟನು. ಇವನ ರಾಜ್ಯಭಾರದ ಕಾಲಮಾನ ಕ್ರಿ. ಶ. ೧೦೪೦ ರಿಂದ ಕೊನೆ ೧೦೬೮ ಎಂದು ಕರ್ನಾಟಕ ಇತಿಹಾಸದಿಂದ ಸ್ಪಷ್ಟವಾಗಿದೆ. ಮರುಳಸಿದ್ಧರು ಯೋಗ ಮಹಿಮೆಯಿಂದ ಬಾಳಿದುದು ೧೬೦ ವರ್ಷ ಒಟ್ಟು. ಈ ವರ್ಷ ಸಂಖ್ಯೆಯನ್ನು ಕ್ರಿ. ಶ. ಕ್ಕೆ ಹೊಂದಿಸಿದರೆ ೧೦೫೨ ರವರೆಗೆ ಮರುಳಸಿದ್ಧರು ಕ್ರಿ. ಶ. ೯೦೨ರಲ್ಲಿ ಕಾಲಿಕಾ ಉಜ್ಜಯಿನಿಯನ್ನು ಬಿಟ್ಟರೂ ಅಷ್ಟರಲ್ಲಿ ಅವರಿಗೆ ೨೦ ವರ್ಷದ ಪ್ರಾಯವಾದರೂ ಇರಬೇಕು. ಆದುದರಿಂದ ಅವರ ಜನನ ಕಾಲ ಕ್ರಿ ಶ. ೮೬೮ ಎಂದು ನಿರ್ಣಯಿಸಬಹುದಾಗಿದೆ. ಮಾಯಾ ವಿಜಯ ಮುಂತಾದ ಮಹಿಮೆಗಳನ್ನು ನಡೆಯಿಸಿ ಕಾಲವು ಗತಿತವಾಗಿ ರಾಜಾಶ್ರಯವು ದೊರೆಯುವುದರೊಳಗಾಗಿ ಮರುಳಸಿದ್ಧರಿಗೆ ವಾರ್ಧಕ್ಯವೇ ಬಂದಿರಬೇಕು. ಆ ಕಾಲವೇ ಕ್ರಿ ಶ. ೧೦೪೦ ಕಲ್ಯಾಣದ ಸೋಮೇಶ್ವರ ಅಥವಾ ಭುವನೈಕಮಲ್ಲನಿಂದ ಉಜ್ಜಯಿನೀ ಪೀಠದ ನಿರ್ಮಾಣವು ಇದೇ ಸಮಯಕ್ಕೆ ಆಗಿರಬೇಕು

ಮರುಳಸಿದ್ಧನ ಆಳುವಿಕೆ ಉಜ್ಜಯಿನೀ ಪೀಠದ ಮೇಲೆ ಕೇವಲ ೧೨ ವರ್ಷ ಮಾತ್ರ ಎಂದು ಊಹಿಸುವಂತಿದೆ. ಇವರ ಸದ್ಧರ್ಮ ಸಿಂಹಾಸನಾರೋಹಣ ಕಾಲದಲ್ಲಿ

“ ವರಮ ರೇವಣಸಿದ್ಧಯತಿವರ | ಗುರುವರನು ಶ್ರೀ ಜ್ಞಾನಶಕ್ತೀ /
ಶ್ವರನು ಶಿಷ್ಯಗ ಜಕ್ಕಣಾಚಾರ್ಯನು ಶ್ರೀಗಿರಿಯ ಪೀಠೇ ||
ಶ್ವರನು ಮಂಡಿತ ರೇತಿಕೋತ್ತಮ | ವರನು ಕಾಂಚಿಯ ಫಾಲಲೋಚನ|
ಗುರುವು ವಾರಾಸಿಯ ಮಹೇಶಾಚಾರ್ಯನುಂ ಮುದದಿ || ೬೬ ||
ಧರೆಯೊಳಗೆ ವಿಖ್ಯಾತಿಯಿಂದಿದ | ಮೆರೆವ ಬೆಳ್ಳೇಗಾಪಿ ದೇಶದ |
ಗುರುಪದದಿ ಶೋಭಿಸುವ ಪಂಚಮಠಾಧಿಕಾರಿಗಳು ||

ಪರಮ ಕ್ಷೇತ್ರಸು ಕೊಲ್ಲಿ ಪಾಕಿಯ । ಗುರುಮುಂದವರ ಸಿದ್ಧಸಾಧನು ।
ವರ ತಪಸ್ವಿಗಳ ಮಲಸಿದ್ಧರು ಯೋಗಿ ಗುರುವರರು ॥ ೪೭ ॥

ಚಕ್ರವರ್ತಿಯು ವೀರಭುಜ ಚಾ । ಲುಕ್ಯ ಶ್ರೀ ಭುವನೈಕಮಲ್ಲನು । ವಿಕ್ರಮ ಕ್ರಮದಿಂದ ಶೋಭಿಸ ರಾಷ್ಟ್ರಕೂಟೇಶೋ ॥ ಪಕ್ರಮಾಗಿಹ ರಟ್ಟರಾಜನು । ವಿಕ್ರಮೋರಂಗಲ್ಲ ಭೂಪನು । ಸಕ್ರಮದಿಶಾಸನವಗೇಯ್ಯುವ ಹರಪುರಿಯನೃಪನು " ॥ ೪೮ ॥ ( ಸಂ. ೧೫ )

ಇವರೆಲ್ಲರೂ ಭಾಗವಹಿಸಿ ಕಾರ್ಯವನ್ನು ಸಾಂಗಗೊಳಿಸಿದಂತೆ ಈ ಕಾವ್ಯದಲ್ಲಿ ಸ್ಪಷ್ಟವಾಗಿದೆ. ಈ ಮೇಲ್ಕಂಡ ಪದ್ಯದಲ್ಲಿ ಬಂದಿರುವ ಶ್ರೀ ಶೈಲ ಪೀಠದ ಜಗದ್ಗುರುವಾದ ಪಂಡಿತ ದೇಶಿಕೋತ್ತಮ ಅಥವಾ ಪಂಡಿತಾರಾಧ್ಯರು ಕ್ರಿ. ಶ. ೧೦೪೦ ರಷ್ಟು ಪ್ರಾಚೀನರೆಂದು ತಿಳಿಯುತ್ತದೆ. ಕ್ರಿ ಶ ೯೪೦ ರಲ್ಲಿ ಪ್ರಸಿದ್ಧನೂ ತೆಲುಗು ಕುಮಾರ ಸಂಭವ ಕಾವ್ಯ ಕರ್ತೃವೂ ವರಯೂರು ಅರಸನೂ ಆದ ನನ್ನೆ ಚೋಡ ಮಹಾರಾಜನು ಕಾವ್ಯಾರಂಭದಲ್ಲಿ ತನ್ನ ಗುರುವೆಂದು ಕೊಂಡಾಡಿರುವ ಶ್ರೀ ಶೈಲ ಜಗದ್ಗುರು ಮಲ್ಲಿಕಾರ್ಜುನ ಜಂಗಮರು ಈ ಪಂಡಿತಾರಾಧ್ಯರಿಗಿಂತಲೂ ಪೂರ್ವದ ಗುರುಗಳೆಂದು ಸ್ಪಷ್ಟವಾಗುತ್ತದೆ. ವ್ಯಾಸಮಹರ್ಷಿಗಳು " ಶ್ರೀ ಶೈಲಖಂಡ "ದಲ್ಲಿ ಪಿಂಗಳನೆಂಬ ಬ್ರಾಹ್ಮಣ ಬಾಲಕನ ಕುಷ್ಠ ರೋಗವನ್ನು ಕೇವಲ ಪಾದೋದಕದಾನದಿಂದ ನಿವಾರಣೆ ಮಾಡಿದವನೆಂದು ಕೊಂಡಾಡಿರುವ ಶ್ರೀ ಶೈಲದ " ಸದಾನಂದ ಜಗದ್ಗುರು " ಗಳು ಪಾಂಡವರಿಗಿಂತಲೂ ಪೂರ್ವಕಾಲದವರು. ಪಾಲ್ಕುರಿಕೆ ಸೋಮನಾಥ ಕವಿಯು ತೆಲುಗು ನುಡಿಯಲ್ಲಿ ರಚಿಸಿರುವ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆಯು ೧೨ನೆಯ ಶತಮಾನದಲ್ಲಿ ಪ್ರಸಿದ್ಧರಾದ ಇನ್ನೊಬ್ಬ ಪಂಡಿತಾರಾಧ್ಯರಿಗೆ ಸಂಬಂಧಪಟ್ಟುದಾದುದರಿಂದ ಇವರು ಮೂಲ ಪಂಡಿತಾರಾಧ್ಯರಲ್ಲ.

ರಂಭಾಪುರಿಯಲ್ಲಿ ರೇವಣಸಿದ್ಧರ ಸಮ್ಮುಖದಲ್ಲಿ ನಡೆದ ರುದ್ರಮುನಿಯ ಮತ್ತು ಕೋಟಿ ಪಲ್ಲಾರಾಧ್ಯರ ಪಟ್ಟಾಧಿಕಾರ ಚರಾಧಿಕಾರಗಳಿಗೆ ಶ್ರೀ ಶೈಲ ಪೀಠದ ಮೇಲ್ಕಂಡ ಪಂಡಿತ ದೇಶಕರು ದಯಮಾಡಿಸದೆ ಶ್ರೀಗಿರಿಯ ಗುರುವರೇಣ್ಯ ಶಂಕರ ಶಿವಾಚಾರ್ಯ ಎಂಬವರು ದಯಮಾಡಿಸಿರುವುದರಿಂದ ಅಷ್ಟರಲ್ಲಿಯೇ ಪಂಡಿತ ದೇಶಿಕ ಅಥವಾ ಪಂಡಿತಾರಾಧ್ಯರು ವೃದ್ಧಾವಸ್ಥೆಯಲ್ಲಿ ( ಕ್ರಿ. ಶ ೧೦೮೦ , ಇದ್ದರೆಂದು ಭಾವಿಸಿದರೂ ಬಸವಣ್ಣನವರ ಜನನ ( ಕ್ರಿ. ಶ. ೧೧೩೩ ) ಕ್ಕೆ ಸು ಮಾರು ೫೩ ವರ್ಷದಷ್ಟು ಈ ಪಂಡಿತಾರಾಧ್ಯರು ಹಳಬರಾಗುತ್ತಾರೆ. ಇದರಿಂದ ಪಾಲ್ಕುರಿಕೆ ಸೋಮನಾಥರ ರಚನೆಯ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಈ ಮೇಲ್ಕಂಡ ಮೂಲಪಂಡಿತಾರಾಧ್ಯರಲ್ಲ. ಅಲ್ಲದೆ ಮೂಲ ಮರುಳಸಿದ್ಧ—ರೇವಣಸಿದ್ಧರೂ ಬಸವಣ್ಣನವರ ಕಾಲದವರಲ್ಲ.



ಉಜ್ಜಯಿನಿ ಮರುಳಸಿದ್ಧ ದೇವಾಲಯ ನಿರ್ಮಿಸಲು
ಸಹಾಯಕರಾದ
**ತ್ರಿಭುವನಮಲ್ಲ (ಭುವನೈಕಮಲ್ಲ)**

ಕ್ರಿ. ಶ. ೧೦೪೦ ರಲ್ಲಿ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಚಕ್ರವರ್ತಿ ವೀರಭುಜ ಚಾಲುಕ್ಯ ಭುವನೈಕಮಲ್ಲನಾದ ಸೋಮೇಶ್ವರನು ಮರುಳಸಿದ್ಧರ ಶಿಷ್ಯನಾಗಿ ವೀರಶೈವನಾದ ಮೇಲೆ ಅಲ್ಲಿಗೆ ರೇವಣಸಿದ್ಧರೂ - ಪಂಡಿತಾರಾಧ್ಯರೂ ಹೋಗಿ ವೀರಶೈವ ಧರ್ಮ ಪ್ರಚಾರವನ್ನು ಮಾಡಿರಬೇಕು. ಈ ಮಹಾಗುರುಗಳ ಶಿಷ್ಯ ಶ್ರೇಣಿಯಲ್ಲಿ ಪ್ರಸಿದ್ಧರಾದವರೇ ಏಕಾಂತರಾಮಯ್ಯ—ದೇವರದಾಸಿಮಯ್ಯ—ಶಂಕರದಾಸಿಮಯ್ಯ ಮೊದಲಾದವರು. ಇವರೆಲ್ಲರ ವೀರಶೈವ ಧರ್ಮ ಪ್ರಸಾರದ ಹಿರಿಮೆಯೇ ಮಾದರಸಕುಮಾರನಾದ ಬಾಲಬಸವೇಶ್ವರನನ್ನು ವೀರಶೈವ ಧರ್ಮ ಸ್ವೀಕಾರದತ್ತ ಸೆಳೆದಿರಬೇಕು.

ಶ್ರೀ ಶೈಲದಲ್ಲಿ ಇಪ್ಪಿ ೧೯೪೫ರ ಶೋಧನೆಯಲ್ಲಿ ಒಂದು ಶಿಲಾ ಲೇಖವು ದೊರೆತಿದೆ. ಅದು ಪಂಚಮಠಗಳ ದಾರಿಯಿಂದ ಶ್ರೀಕಾಮಕ್ಷಾಗಕ್ಕೆ ಹೋಗುವ ನಡುವೆ ಗೋರ್ಗರ್ಭವೆಂಬಲ್ಲಿದೆ. ಅದರಲ್ಲಿ “ ಶಂಕರಶಿವಾಚಾರ್ಯ, ಶಂಕರ ಗುರುಡು ” ಎಂದಿದೆ. ಈ ಶಂಕರಶಿವಾಚಾರ್ಯರೇ ಪಂಡಿತ ವೇತಿಕೋತ್ತಮ ಅಥವಾ ಪಂಡಿತಾರಾಧ್ಯರ ಎರಡನೆಯ ಶಿಷ್ಯರಿರಬೇಕೆಂದು ನಂಬಬಹುದಾಗಿದೆ. ಇವರ ಕಾಲಮಾನ ಕ್ರಿ. ಶ. ೧೦೪೨ ಎಂದರೆ ಸರಿಹೋಗುವುದು. ನಂದ್ಯಾಲದಲ್ಲಿ “ ಪ್ರಥಮನಂದಿ ದೇವಸ್ಥಾನದ ಒಂದು ಕಂಭದಲ್ಲಿ ಪಂಡಿತಾರಾಧ್ಯರ ನಾಮನಿರ್ದೇಶದ ಒಂದು ಲೇಖವಿದೆ ” ಅದರ ಕೆಳಗೆ ಒಂದು ಸ್ತ್ರೀ ವಿಗ್ರಹವು ತಲೆಯ ಮೇಲೆ ಎರಡು ಕೈ ಜೋಡಿಸಿ ನಿಂತಿದೆ. ಈ ಸನ್ನಿವೇಶದಿಂದ ಪಂಡಿತಾರಾಧ್ಯರ ಶಿಷ್ಯಳೊಬ್ಬಳು ಈ ಮಂದಿರವನ್ನು ತನ್ನ ಗುರುಗಳ ಪ್ರೀತ್ಯರ್ಥವಾಗಿ ಕಟ್ಟಿಸಿಕೊಟ್ಟಿರಬೇಕೆಂದು ತಿಳಿಯುವುದು. ಆ ದೇವಸ್ಥಾನವು ಈಗಲೂ ಪಂಡಿತಾರಾಧ್ಯ ಶಾಖೆಯ ಜಂಗಮರ ವಶದಲ್ಲಿದೆ. ಪೂಜೆಯೂ ಜಂಗಮರಿಂದಲೇ ನಡೆಸಲ್ಪಡುತ್ತಿದೆ. ಈ ದೇವಸ್ಥಾನದ ನಿರ್ಮಿತಿಯನ್ನೂ ನೋಡಿದರೆ ಆ ಶಿಲಾ ಲೇಖವು ಮೂಲ ಪಂಡಿತಾರಾಧ್ಯರ ಕಾಲಕ್ಕೆ ಸೇರಿದುದೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

ಪಾಲ್ಕುರಿಕೆ ಸೋಮನಾಥನು ಹೊಗಳಿರುವ “ ಮಲ್ಲಿಕಾರ್ಜುನ ಪಂಡಿತಾರಾಧ್ಯರು ” ಶ್ರೀ ಶೈಲಕ್ಕೆ ಯಾತ್ರೆಗಾಗಿ ಹೊರಟಿರುವ ಪರಿಸೆಯವರೊಂದಿಗೆ ಪ್ರಯಾಣಿಸುತ್ತಿರುವಾಗ ಪರಿಸೆಯವರು—

“ ಪಂಡಿತಾರಾಧ್ಯ ಶ್ರೀಪತಿ ಪಂಡಿತಯ್ಯ ” (ಪಂ. ಚ ೧೧—ಪ ೩೭೫) ಎಂದು ಹಾಡಿದಂತೆ ಇರುವುದರಿಂದ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗಿಂತ ಮೊದಲೊಬ್ಬ ಪಂಡಿತಾರಾಧ್ಯರೂ ಅವರ ತರುವಾಯ ಶ್ರೀಪತಿಪತಿ ಪಂಡಿತಾರಾಧ್ಯರೂ ಪ್ರಸಿದ್ಧರಾಗಿದ್ದರೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಡಾ|| ಚಿಲುಕೂರಿ ನಾರಾಯಣರಾವು ಅವರು ಈ ವಿಷಯವನ್ನು ಒಪ್ಪಿದ್ದಾರೆ. ಅವರ



ಶ್ರೀಶೈಲದ ಶಿಲಾಲೇಖ

ಎಂದು ಭಾವಿಸಿದರೂ ಕ್ರಿ. ಶ. ೧೦೫೨ರ ಅಂದಾಜಿಗೆ ಜಗತ್ತಿನ ಮರೆಯಾಗಿರುವ ಆದಿಮರುಳಸಿದ್ಧರ ಕಾಲಕ್ಕೆ ಹೊಂದಿಕೆಯಾಗುವುದಿಲ್ಲ. ಆದುದರಿಂದ ಈ ಗಣಪತಿರಾಯನ ಕಾಲಮಾನವು ಇನ್ನೂ ಹಿಂದಕ್ಕೆ ಹೋಗುತ್ತದೆ. ಎಂದರೆ ಕ್ರಿ. ಶ. ೧೧೪೦ ಇವನ ರಾಜ್ಯಭಾರದ ಕಾಲವಾಗುವುದು. ಆದಿ ಮರುಳಸಿದ್ಧನು ಓರಂಗಲ್ಲಿಗೆ ಬಂದು ಪುತ್ರಸಂತಾನವಾಗುವಂತೆ ಗಣಪತಿ ರಾಯನಿಗೆ ಆಶೀರ್ವದಿಸಿದ ಸಮಯ ಕ್ರಿ. ಶ ೧೦೪೫ ರಷ್ಟು ಪ್ರಾಚೀನವಾಗುವುದು.

ಹಾಲಿಯ ನಂದೀಶ ಕವಿಯು ಮೂಲಮರುಳಸಿದ್ಧರ ಸಿಂಹಾಸನಾರೋಹಣದ ಸಮಯವನ್ನು ಹೇಳಿರುವನಾದರೂ ಶಕ ವರ್ಷಗಳನ್ನೂ ಸ್ಪಷ್ಟಪಡಿಸಿಲ್ಲ. ಕರ್ನಾಟಕದ ಈಗಿನ ಉಜ್ಜಯಿನಿಯಲ್ಲಿ ಮೆರೆಯುತ್ತಿರುವ ಸಿದ್ಧೇಶ್ವರ ಲಿಂಗವನ್ನು ರೇವಣಸಿದ್ಧರು ಸ್ಥಾಪಿಸಿದಂತೆಯೂ ಆ ಸ್ಥಾಪನೆಯು ವೈಶಾಖ ಶು|| ತದಿಗೆಯಲ್ಲಿ ನಡೆದಂತೆಯೂ, ಪಂಚಮಿಯಲ್ಲಿ ಸಿಂಹಾಸನಾರೋಹಣವಾದಂತೆಯೂ ಸ್ಪಷ್ಟ ಪಡಿದ್ದಾನೆ. ಈಗ ಉಜ್ಜಯಿನಿಯಲ್ಲಿ ನಡೆಯುತ್ತಿರುವ ಯಾತ್ರೋತ್ಸವವು ಹಿಂದಿನ ಪದ್ಧತಿಯನ್ನೇ ಅನುಸರಿಸಿದಂತೆ ತಿಳಿಯುತ್ತದೆ.

ಮೂಲ ಮರುಳಸಿದ್ಧನು ಕಾಕತೀಯ ಗಣಪತಿರಾಯನ ಆಹ್ವಾನೆಗೆ ದಯಮಾಡಿಸಿದಾಗ ಶ್ರೀಪತಿ ಪಂಡಿತರೂ, ಅಮರಗುಂಡಯ್ಯ ಎಂಬವರೂ ದರ್ಶನಪಡೆದು ಶಿವಜೀವೈಕ್ಯ ವಿಚಾರವಾಗಿ ಶಾಸ್ತ್ರ ಸಮ್ಮತವಾದ ಸದ್ಬೋಧೆ ಪಡೆದಂತೆ ವಿವರಣೆಯಿದೆ (ಸಂ ೧೬. ಪದ್ಯ ೧೦ ) ಶ್ರೀಪತಿ ಪಂಡಿತಾರಾಧ್ಯರ ಕಾಲ ಕ್ರಿ. ಶ. ೧೦೭೨ ಎಂಬುದು ನಿರ್ಣಯವಾಗಿದೆ. ಇದು ಅವರ ಮಧ್ಯಕಾಲವೆಂದು ಊಹಿಸಬೇಕಾಗಿದೆ. ವಿಜಯ ವಾಟಿಕೆ ಅಥವಾ ಈಗಿನ ಬೆಜವಾಡದಲ್ಲಿ ಅರಸನಾಗಿದ್ದ ಕೊಂಡಪಲ್ಲಿ ನಾಡಿನ ಅನಂತಪಾಲನ ಸಮ್ಮುಖದಲ್ಲಿ ಶಿವಸರ್ವೋತ್ತ ಮತ್ವ ವಿಚಾರವಾಗಿ ಶಮೀವೃಕ್ಷಕ್ಕೆ ಬಟ್ಟೆಯಲ್ಲಿ ಅಗ್ನಿಯನ್ನು ಕಟ್ಟಿ ಅಗ್ನಿಸ್ತಂಭನಮಹಿಮೆಯನ್ನು ಶ್ರೀಪತಿ ಪಂಡಿತರು ತೋರಿಸಿರುವುದು ಸುಪ್ರಸಿದ್ಧವಾಗಿದೆ. ಈ ಅನಂತಪಾಲನ ಕಾಲಮಾನ ಕ್ರಿ. ಶ. ೧೦೯೫ ಎಂದು ಇತಿಹಾಸಕಾರರ ಮತ. ಶ್ರೀಪತಿ ಪಂಡಿತರು ಇಷ್ಟು ಕಾಲವೂ ಬದುಕಿರಬಹುದಾದರೂ ಈ ಮಹಿಮೆಯ ಕಾಲಕ್ಕೆ ಅವರು ಸಾಧಾರಣ ೬೦—೭೦ ವರ್ಷದ ವೃದ್ಧರೇ ಆಗಿರಬೇಕೆಂದು ನಾವು ತರ್ಕಿಸುತ್ತೇವೆ. ಈ ಶ್ರೀಪತಿ ಪಂಡಿತರು ಓರಂಗಲ್ಲಿನಲ್ಲಿ ಮೂಲಮರುಳಸಿದ್ಧರನ್ನು ಸಂದರ್ಶಿಸಿದ ಕಾಲ ಕ್ರಿ. ಶ. ೧೦೪೫ ರಷ್ಟು ಆಗುವುದಾದರೂ ಅಲ್ಲಿಗೆ ಇವನ ಪ್ರಾಯ ಕನಿಷ್ಠ ೩೦ ವರ್ಷವಾದರೂ ಇರಬೇಕು. ಹಾಗಿಲ್ಲದೆ ಜೀವ ಪರಬ್ರಹ್ಮರ ವಿದ್ಯೆಯನ್ನು ಚರ್ಚಿಸುವ ವಿದ್ಯಾಶಕ್ತಿ ಅನುಭವಗಳು ಬರಲು ಸಾಧ್ಯವಿಲ್ಲ. ಅದಕ್ಕಾಗಿ ಈ

ಶ್ರೀಪತಿ ಪಂಡಿತರ ಜನನ ಕ್ರಿ. ಶ. ೧೦೧೫ರ ಸುಮಾರಿಗೆ ಆಗಿರಬೇಕೆಂದೂ ಅಲ್ಲಿಂದ ಅವರು ದೀರ್ಘಾಯುಗಳಾಗಿ ಕ್ರಿ ಶ. ೧೦೯೫—೧೦೯೬ ರವರೆಗೂ ಬಾಳಿ ಶ್ರೀಕರ ಭಾಷ್ಯ ಮುಂತಾದ ಮಹಾ ಗ್ರಂಥಗಳನ್ನು ರಚಿಸಿ ಯೋಗಿಸಿದ್ಧರಾಗಿ ಮೆರೆದಿರಬೇಕೆಂದೂ ನಾವಿಲ್ಲಿ ನಿರ್ಣಯಿಸುತ್ತೇವೆ.

ಮೂಲಮರುಳಸಿದ್ಧರೂ ಓರಂಗಲ್ಲಿನಿಂದ ನೇರವಾಗಿ ಹಂಪೆಗೆ ದಯ ಮಾಡಿಸಿ ವಿರೂಪಾಕ್ಷ ಸಾನ್ನಿಧ್ಯದಲ್ಲಿ ವಾಸಮಾಡುತ್ತ ಅಂತೇ ವಾಸಿಗಳಾದ ಗುರುಕುಲದ ವಿರಕ್ತ ವೃಂದಕ್ಕೆ ಯೋಗ ಮಾರ್ಗವನ್ನು ಉಪದೇಶಮಾಡುತ್ತ ಶಿವಾಗಮ ಸಿದ್ಧಾಂತಕ್ಕನುಕೂಲವಾಗಿ ಅರವತ್ತೆಂಟು ಸಾವಿರ ವಚನಗಳನ್ನು ರಚಿಸುವರು. ಈ ಸಮಯ ದಲ್ಲಿ ಮಹಾದೇವಿಯಕ್ಕ ಎಂಬ ಶಿವಶರಣೆಯೂ, ಓಂಕಾರ ನೆಟ್ಟಿಯೆಂಬ ಶರಣನೂ ಮರುಳಸಿದ್ಧರಿಂದ ಷಟ್‌ಸ್ಥಲ ಬೋಧೆಯನ್ನು ಪಡೆಯುವರು; ಶಿಷ್ಯರಾಗುವರು. ಆ ಕಾಲದಲ್ಲಿ ಹಂಪೆರಾಜಧಾನಿಯಾಗಿರದೆ ಕೇವಲ ಕ್ಷೇತ್ರವಾಗಿ ಶಿವಶರಣರ ವಾಸಕ್ಕೆ ಅನುಕೂಲವಾಗಿರಬೇಕು. ಆಗ ಅಲ್ಲಿ ಅರಸೊತ್ತಿಗೆ ಇದ್ದರೆ ಮರುಳಸಿದ್ಧರೊಡನೆ ಸಮಾಗಮ ನಡೆಯಲೇ ಬೇಕಾಗುತ್ತಿತ್ತು. ಹರಪನಹಳ್ಳಿಯ ಅರಸೊತ್ತಿಗೆ ೯ನೆಯ ಶತಮಾನವಷ್ಟು ಪೂರ್ವದ್ದಾದರೂ ಕೊನೆಗೆ ವಿಜಯ ನಗರ ಸಾಮ್ರಾಜ್ಯ ಕಾಲದಲ್ಲಿ ನಾಯಕರ ವಶವಾಗಿ ಮಾಂಡಲಿಕ ರಾಜಧಾನಿಯಾಗಿ ಮಾರ್ಪಟ್ಟಿರಬೇಕು ಮರುಳಸಿದ್ಧರು ಅರವತ್ತೆಂಟು ಸಾವಿರ ವಚನವನ್ನು ರಚಿಸಿದರೆಂಬುದನ್ನು ಸೊನ್ನಲಾಪುರದ ಶಿವಶರಣ ಶ್ರೀ ಸಿದ್ಧರಾಮೇಶ್ವರನು ತನ್ನ ವಚನಗಳಲ್ಲಿ ಸ್ಪಷ್ಟಪಡಿಸಿದ್ದಾನೆ.— "ಮರುಳಸಿದ್ಧ ವಚನ ಅರವತ್ತೆಂಟು ಸಾವಿರ" ( ವಚನ ೪೦೯ ) ಸಿದ್ಧರಾಮೇಶ್ವರನು ಮರುಳಸಿದ್ಧರನ್ನು ಹೀಗೆ ತನ್ನ ವಚನದಲ್ಲಿ ಕೊಂಡಾಡಿರುವುದರಿಂದ ಮರುಳಸಿದ್ಧರು ೧೨ನೆಯ ಶತಮಾನದ ಶಿವಶರಣರಿಗೆ ವಚನ ರಚನೆಯ ಹಳೆಯಮಾರ್ಗದರ್ಶಕರೆಂಬುದೂ ಸ್ಪಷ್ಟವಾಗುತ್ತದೆ. ಇಲ್ಲಿ ಬರುವ ಮಹಾದೇವಿಯಕ್ಕನು ಅಕ್ಕ ಮಹಾದೇವಿಯೇ ಆಗಿರಬೇಕು. ಕೌಶಿಕನ ಸಂಸಾರದಿಂದ ವಿರಾಗಿಣಿಯಾಗಿ 'ತತ್ತ್ವಮಸಿ'ಯ ಕಡೆಗೆ ಚಿತ್ತೈಸಿದ ಅಕ್ಕ ಮಹಾದೇವಿಯು ಈ ಮರುಳಸಿದ್ಧರನ್ನು ಸಂದರ್ಶಿಸಿದ ಕಾಲ ಸುಮಾರು ಕ್ರಿ. ಶ. ೧೦೫೦ ಇರಬಹುದು. ಈ ವೇಳೆಗೆ ಅಕ್ಕನಿಗೆ ೧೫ ವರ್ಷದ ಪ್ರಾಯವಾದರೂ ಇರಬೇಕು.

ಅಲ್ಲಿಂದ ವೃದ್ಧರಾಗಿರುವ ಮರುಳಸಿದ್ಧರು ಕೂಡಲ ಸಂಗಮ ಎಂಬ ಪಟ್ಟಣಕ್ಕೆ ಪ್ರಯಾಣಿಸಿ ಅಲ್ಲಿಯ ಹಿರಿಯಮಠಕ್ಕೆ ಪಟ್ಟಾಧಿಕಾರಿಯನ್ನು ನಿಯಮಿಸಿ ಅವರಿಗೆ ಷಟ್‌ಸ್ಥಲ ಶಾಸ್ತ್ರವನ್ನು ಉಪದೇಶಮಾಡುತ್ತ ಮಹಾಮಹಿಮ ಬಸವಣ್ಣನು ಜಗತ್ತಿನಲ್ಲಿ ಜನಿಸುವನೆಂದು ಭವಿಷ್ಯವನ್ನು ನುಡಿಯುವರು. ( ಸಂ ೧೬—ಪದ್ಯ ೧೫ ) ಈ ಮರುಳಸಿದ್ಧರಿಂದ ಪಟ್ಟಾಧಿಕಾರ ಹೊಂದಿ

ದವರು ಕೂಡಲ ಸಂಗಮದಲ್ಲಿ ಪ್ರಸಿದ್ಧರಾದ ಜಾತವೇದ ಮುನಿ ಅಥವಾ ಈಶಾನ್ಯ ಗುರುಗಳಿರಬಹುದೇ ? ಏಕೆಂದರೆ ಮರುಳಸಿದ್ಧರ ಸಾಂಪ್ರದಾಯದಲ್ಲಿ ಶಾಂತಮುನಿ ಶಂಭುಮುನಿ---ಮುಕ್ತಿಮುನಿ ಮುಂತಾಗಿ ಮುನಿ ಎಂಬ ಹೆಸರಿನವರು ಪ್ರಸಿದ್ಧರಾಗಿದ್ದಾರೆ. ಮಹಾನುಭಾವಿ ಬಸವಣ್ಣನವರ ಶಿವ ದೀಕ್ಷಾ ಗುರುಗಳು ಜಾತವೇದ ಮುನಿ ಅಥವಾ ಈಶಾನ್ಯ ಗುರುಗಳೆಂಬುದನ್ನು ಇತಿಹಾಸಕಾರರು ನಿರ್ಣಯಿಸಿದ್ದಾರೆ. ಮೂಲ ಮರುಳಸಿದ್ಧರು ಬಸವಣ್ಣನವರ ಜನನ ಭವಿಷ್ಯವನ್ನು ನುಡಿದಿರುವರೆಂಬ ಪ್ರಬಲಾಧಾರದಿಂದ ಮರುಳಸಿದ್ಧರ ಪ್ರಾಚೀನತ್ವವು ರವಿಬಿಂಬದಷ್ಟು ಸ್ಪಷ್ಟವಾಗುತ್ತಿದೆ. ಕೂಡಲ ಸಂಗಮನಾಥಾ ಎಂದು ತಮ್ಮ ಪ್ರತಿವಚನಗಳಲ್ಲಿ ಹೊಗಳಿರುವುದು ಕೂಡಲ ಸಂಗಮ ಕ್ಷೇತ್ರದ ಹಿರಿಯರಾದ ತನ್ನ ಜಾತವೇದ ಗುರುಗಳಿಗೆ ಸಂಬಂಧಿಸುವುದೆಂದು ಸೂಕ್ಷ್ಮ, ಮತಿಗೆ ಅರಿವಾಗುವುದು.

ಸಿದ್ಧರೊಡೆಯನಾದ ಮೂಲ ಮರುಳಸಿದ್ಧನು ಕೂಡಲಸಂಗಮದಿಂದ ಮುದನೂರು ಗ್ರಾಮಕ್ಕೆ ಬಿಜಯಂಗೈದು ಅಲ್ಲಿಯ ಹಿರಿಯಮಠದ ಪಟ್ಟಾಧಿಕಾರಿಗಳಾಗಿದ್ದ ಏಕೋರಾಮ ಎಂಬವರಿಗೆ ಷಟ್‍ಸ್ಥಲ ತತ್ತ್ವವನ್ನು ಬೋಧಿಸುತ್ತ ಗ್ರಂಥರಚನೆಯನ್ನು ಮಾಡಿ ಅವರಿಗೆ ಆಶೀರ್ವದಿಸುವನು. ಇಲ್ಲಿ ಬಂದಿರುವ ಏಕೋರಾಮರು ಕೇದಾರ ಪೀಠದ ಮೂಲಾಚಾರ್ಯರಾದ ಏಕೋರಾಮರಿಗೂ ಶಿವಶರಣರಾದ ಏಕಾಂತರಾಮಯ್ಯನವರಿಗೂ ತೀರ ಭಿನ್ನರಾಗಿದ್ದಾರೆ.

ಮರುಳಸಿದ್ಧರು ಮುದನೂರಿಂದ ಪ್ರಯಾಣಿಸಿ ಪೈಲಾರ ಎಂಬ ಗ್ರಾಮಕ್ಕೆ ದಯಮಾಡಿಸುವರು. ಅಲ್ಲಿ ಆಗ ಕುಟಿಲಮಂತ್ರವಾದಿಗಳಾದ ಮಲ್ಹಾರಿ --ಮಾರ್ತಾಂಡ ಭೈರವ--ಕಪಾಲಭೈರವ ಎಂಬವರು ಪ್ರಸಿದ್ಧರಾಗಿದ್ದರು. ಇವರನ್ನು ಮಂತ್ರವಾದದಲ್ಲಿ ಸೋಲಿಸಿ, ಪುನಃ ಶಿವತತ್ತ್ವ ಬೋಧೆಯಿಂದ ಮರುಳಸಿದ್ಧನು ಅವರನ್ನು ಅನುಗ್ರಹಿಸುವನು. ಇವರೆಲ್ಲರೂ ಮರುಳಸಿದ್ಧನಿಗೆ ಶಿಷ್ಯರಾಗುವರು.

ಅಲ್ಲಿಂದ ಕಪ್ಪತಗುಡ್ಡದತ್ತ ಮರುಳಸಿದ್ಧರ ಪ್ರಯಾಣವಾಗುತ್ತದೆ. ಆಗ ಆ ಗುಡ್ಡದಲ್ಲಿ ಮಾರಣ-ವಶ್ಯ-ವಶೀಕರಣ ಮುಂತಾದ ಮಾಟ-ಮದ್ದುಗಳಲ್ಲಿ ಪ್ರಸಿದ್ಧನಾದ ಜಟ್ಟಿಗೇಶ್ವರನೆಂಬ ಒಬ್ಬ ನಾಥನು ವಾಸಿಸುತ್ತಿದ್ದನು. ಜನರು ಇವನ ದುರ್ಮಾರ್ಗಕ್ಕೆ ಬೇಸತ್ತರೂ ನಿರುಪಾಯರಾಗಿದ್ದರು. ಮಹಾಮಹಿಮನಾದ ಮರುಳಸಿದ್ಧನಿಗೆ ಇದು ತಿಳಿಯಿತು. ಅವನಿಗೆ ಆತ್ಮಯೋಗದಿಂದ ಭಯವನ್ನೂ ಕೊನೆಗೆ ಭಕ್ತಿಯನ್ನೂ ಹುಟ್ಟಿಸಿ ಮರುಳಸಿದ್ಧನು ಸದ್ಬೋಧೆಯನ್ನು ಮಾಡಿದನು. ಜಟ್ಟಿಗನು ಶಿಷ್ಯನಾಗಿ ಮರುಳಸಿದ್ಧನ ಹಿಂದೆ ಧಾವಿಸಿದನು.

ಅಲ್ಲಿಂದ ಮುರುಳಸಿದ್ಧನು ಹರಪುರಿ ಅಥವಾ ಈಗಿನ ಹರಪನಹಳ್ಳಿಗೆ ದಯಮಾಡಿಸಿದನು. ಅಲ್ಲಿ ಆಗ ಚಂದ್ರಕಾಂತನೆಂಬ ಅರಸು ರಾಜ್ಯವಾಳುತ್ತಿದ್ದನು. ಮುರುಳಸಿದ್ಧನ ಸದುಪದೇಶದ ಫಲವಾಗಿ ಚಂದ್ರಕಾಂತನು "ಜೈನಧರ್ಮವನೊಲ್ಲೆನೈ ನೀನೆನ್ನನುದ್ಧರಿಸು" ಎಂದು ಕೇಳಿಕೊಂಡನು. ಆಗ ಮುರುಳಸಿದ್ಧನು ಅರಸನಿಗೆ ಚಂದ್ರಶೇಖರನೆಂಬ ಹೆಸರಿಟ್ಟು, ಆವನಿಗೂ ಆವನ ಪರಿವಾರದವರಿಗೂ ಶಿವದೀಕ್ಷೆಯನ್ನು ಅನುಗ್ರಹಿಸಿ ವೀರಶೈವ ಮತದಲ್ಲಿ ಸೇರಿಸಿದನು. ಹರಪನಹಳ್ಳಿಯು ಈ ಜೈನರಾಜ್ಯವು ಎಂದು ನಾಶವಾಯಿತೆಂಬುದು ಸ್ಪಷ್ಟವಾಗದಿದ್ದರೂ ಇತ್ತೀಚಿಗೆ ದೊರೆತ ಆಧಾರಗಳಮೇಲಿಂದ ಹಂಪೆಯ ಅರಸರ ಅನುಗ್ರಹ ಪಾತ್ರನಾದ ದಾದಯ್ಯ ಎಂಬ ಪಾಳ್ಯಗಾರನು ಕ್ರಿ ಶ ೧೫೬೮ರಲ್ಲಿ ಆಂಜನೇಯ ದೇವಸ್ಥಾನವನ್ನು ಕಟ್ಟಿಸಿ ಪುನಃ ರಾಜ್ಯಭಾರವನ್ನು ಆರಂಭಿಸಿದಂತೆಯೂ, ತನ್ನ ಅರಮನೆಯಲ್ಲಿ ಬ್ರಹ್ಮರಾಕ್ಷಸನ ಕಾಟವಾಗಲು ಉಜ್ಜಯಿನಿಯಿಂದ ಮರುಳಸಿದ್ದೇಶ್ವರ ಸ್ವಾಮಿಯನ್ನು ಬರಮಾಡಿಕೊಂಡು ಸುಖಿಸಿದನೆಂದೂ ಅಲ್ಲಿಂದ ಮುಂದೆ ಈ ಪಾಳ್ಯಗಾರರೂ ವೀರಶೈವರಾಗಿ ಉಜ್ಜಯಿನೀ ಪೀಠಕ್ಕೆ ಶಿಷ್ಯರಾದರೆಂದೂ ತಿಳಿದುಬಂದಿದೆ. ಈ ಪಾಳ್ಯಗಾರರಲ್ಲಿ ಕೊನೆಯವನೇ ಸೋಮಶೇಖರ ನಾಯಕನು. ಇವನು ಕ್ರಿ. ಶ. ೧೭೬೮ ರಲ್ಲಿ ಪಟ್ಟಕ್ಕೆ ಬಂದನು. ಉಜ್ಜಯಿನೀ ಪೀಠಕ್ಕೆ ಪರಮಶಿಷ್ಯನಾಗಿ ನಡೆದನು. ತನ್ನ ಮುದ್ರಾಂಕಿತವನ್ನು ಶ್ರೀ ಸಿದ್ದೇಶ ಎಂದು ಬಳಕೆಯಲ್ಲಿ ತಂದನು. ಅವನ ಪತ್ರ ದೊರೆತಿದೆ. ಪದಗನಹಳ್ಳಿಯಲ್ಲಿದ್ದ ಜೈನರಲ್ಲಿಯು ಚತುರ್ಥರೆಂಬುವವರ್ಗದವರೆಲ್ಲರೂ ಆಗ ಮುರುಳಸಿದ್ಧನಿಂದ ವೀರಶೈವ ಮತಕ್ಕೆ ಸೇರಿಸಲ್ಪಟ್ಟ ಮೇಲೆ ತಮ್ಮ ಮುಂದಿನ ನಡತೆಯ ಬಗ್ಗೆ ಕೇಳಿಕೊಂಡರು. ಮುರುಳಸಿದ್ಧನು ಅವರೆಲ್ಲರನ್ನೂ ಸಂತೈಸಿ ವೀರಶೈವರಲ್ಲಿರುವ ಪಂಚಮ ಅಥವಾ ಪಂಚಮಸಾಲೆಯವರೊಡನೆ ನೀವು ಇನ್ನು ಮುಂದೆ ಸಹೋದರರಂತೆ ನಡೆದುಕೊಳ್ಳಿರಿ. ಈ ಉದ್ದೇಶದಿಂದ ನಿಮಗೆ ಸೋದರರು ಎಂಬ ಹೆಸರು ಶಾಶ್ವತವಾಗಲಿ ಎಂದು ಹರಸಿ ಅನುಗ್ರಹಿಸಿದನು. ( ಸಂ ೧೬ ಪದ್ಯ ೩೭ ) ಮುರುಳಸಿದ್ಧನ ಶಿಷ್ಯರಾದ ಆ ಸೋದರ ಎಂಬ ವೀರಶೈವರಿಗೆ ಶಬ್ದತದ್ಭವದಿಂದ ಅಥವಾ ಶಬ್ದವ್ಯತ್ಯಾಸದಿಂದ ಸಾದರ ಎಂಬ ಹೆಸರೂ ಆ ಮುಂದೆ ಸಾದ ಎಂದೂ ಬಳಿಕೆಯಲ್ಲಿ ಬಂದಿರಬೇಕು. ಮೂಲ ಮುರುಳಸಿದ್ಧನ ಆಜ್ಞೆಯಂತೆ ಭಕ್ತರಾಗಿ ವೀರಶೈವ ಸಮಾಜದಲ್ಲಿ ಮೆರೆಯುತ್ತಿರುವ ಪಂಚಮ ಸಾಲೆಯವರು ಸಾದರೂ ಅಣ್ಣ ತಮ್ಮಂದಿರಂತೆ ನಡೆದುಕೊಳ್ಳಬೇಕಾದುದು ಅತ್ಯಾವಶ್ಯಕ.

ಮುರುಳಸಿದ್ಧನ ಕೃಪೆಯಿಂದ ಸೋದರರ ಅಥವಾ ಸಾದರರ ಮೂಲ ವಂಶಾವಳಿಯು ಪ್ರಾರಂಭವಾದುದು ಹರಪನಹಳ್ಳಿಯಿಂದೂ ಅಥವಾ ಆ

ಧರ್ಮ ಕಾರ್ಯಗಳ ಆಚರಣೆಗಾಗಿ ಮರುಳಸಿದ್ಧನು ಹರವನಹಳ್ಳಿಯಲ್ಲಿ ಮಠವನ್ನು ಸ್ಥಾಪಿಸಿ ಸ್ಥಿರಪಟ್ಟಾಧಿಕಾರಿಯಾದ ಒಬ್ಬ ಮಾಹೇಶ್ವರ ಗುರುಗಳನ್ನೂ ನಿಯಮಿಸಿದ್ದನೆಂದು ಕಾವ್ಯ ಹೇಳುತ್ತದೆ. ಆ ಮಠವು ಈಗ ಯಾವುದೆಂಬುದು ವಿಮರ್ಶನೀಯವಾದ ಅಂಶ

ಮೂ: ಮರುಳಸಿದ್ಧರು ಹೀಗೆ ಪ್ರಪಂಚವನ್ನು ಸುತ್ತುತ್ತ ಧರ್ಮೋದ್ಧಾರ ಕಾರ್ಯಗಳನ್ನು ನಡೆಯಿಸುತ್ತಿರುವಲ್ಲಿ ಅತ್ತ ರಂಭಾಪುರೀ ಪೀಠಕ್ಕೆ ರೇವಣಸಿದ್ಧರು ಉತ್ತರಾಧಿಕಾರಿಗಳನ್ನು ನಿಯಮಿಸಿ ಅವರ ಪಟ್ಟಾಧಿಕಾರಕ್ಕೆ ಆಗಮಿಸುವಂತೆ ಮರುಳಸಿದ್ಧರಿಗೆ ಬಿನ್ನಹವನ್ನು ಕಳುಹಿಸಿದರು. ಮರುಳಸಿದ್ಧರು ನೇರವಾಗಿ ರಂಭಾಪುರಿಗೆ ದಯಮಾಡಿಸುವರು. ಆ ಸಮಯದಲ್ಲಿ ಹೂಲಿಯ ಗುರುವರ ಜ್ಞಾನಶಕ್ತೀಶ್ವರನೂ, ಶ್ರೀಗಿರಿಯ ( ಶ್ರೀಶೈಲದ ) ಗುರುವರೇಣ್ಯ ಶಂಕರನೂ, ಹಿಮಗಿರಿಯ ( ಕೇದಾರದ ) ಪರಮಾನಂದ ಲಿಂಗನೂ ದಯಮಾಡಿಸಿರುವರು. ರೇವಣಸಿದ್ಧರ ಅಭಿಪ್ರಾಯದಂತೆ ರುದ್ರಮುನಿಗೆ ಪಟ್ಟಾಧಿಕಾರವೂ ಕೋಟಿಮಲ್ಲಾರಾಧ್ಯರಿಗೆ ಚರಾಧಿಕಾರವೂ ಸಂಭ್ರಮದಿಂದ ನೆರವೇರಿದುವು. ಈ ಕಾಲಮಾನ ಅಂದಾಜು ಕ್ರಿ. ಶ. ೧೦೫೦ ಆಗಬಹುದು. ಚಿರಂಜೀವಿಗಳಾದ ರೇವಣಸಿದ್ಧರು ಈ ಕಾಲದವರೆಗೂ ಬಾಳಿರಬೇಕು. ಅವರ ದೀರ್ಘ ಜೀವನದ ಬಗ್ಗೆ ಸಂಶೋಧಕವಿಗಳನೇಕರು ಒಂದೇ ಅಭಿಪ್ರಾಯದವರಾಗಿದ್ದಾರೆ. ಯೋಗಸಿದ್ಧಿ, ರಸಸಿದ್ಧಿಗಳಿಂದ ಹದಿನಾಲ್ಕು ನೂರು ವರ್ಷ ರೇವಣಸಿದ್ಧರು ಬಾಳಿರುವುದು ಹಿಂದಿನವರೆಲ್ಲರಿಗೂ ಸಂದೇಹವನ್ನುಂಟುಮಾಡಿಲ್ಲ ಆ ಸಂಶೋಧಕರುಗಳ ಅಭಿಪ್ರಾಯದಂತೆ ಮಹಿಮಾಪಾತ್ರರಾದ ಈ ರೇವಣಸಿದ್ಧರು ಕ್ರಿ. ಪೂರ್ವ ಮುನ್ನೂರ ಐವತ್ತು ವರ್ಷಗಳ ಅವಧಿಯಲ್ಲಿ ಭೂಮಿಗೆ ಅವತಾರವಾಗಿ ಕ್ರಿ. ಶ. ೧೦೫೦ ರವರೆಗೆ ಬಾಳಿದ್ದೆಂದು ಇಲ್ಲಿ ಉಲ್ಲೇಖ ಮಾಡಿದ್ದೇನೆ.

ರುದ್ರಮುನಿಗಳ ಪಟ್ಟಾಧಿಕಾರಕ್ಕೆ ದಯಮಾಡಿಸಿದವರಲ್ಲಿ ಹಿಮವತ್ಕೇದಾರ ಪೀಠದ ಜಗದ್ಗುರು ಪರಮಾನಂದ ಲಿಂಗರೂ ಒಬ್ಬರಾಗಿದ್ದಾರೆ. ಇದರಿಂದ ಕ್ರಿ. ಶ. ೧೦೫೦ ರಲ್ಲಿ ಕೇದಾರ ಸಿಂಹಾಸನವು ಪ್ರಕಾಶಮಾನವಾಗಿಯೇ ಇದ್ದಿತೆಂದು ತಿಳಿದುಕೊಳ್ಳುವಂತಿದೆ. ಈ ಪೀಠಾಚಾರ್ಯರ ಮಂತ್ರವಾದ ಮಾಹೇಶ್ವರ ದೀಕ್ಷೆಯು ಕಾಶ್ಮೀರದಲ್ಲಿ ವ್ಯಾಪಕವಾಗಿದ್ದುದರಿಂದಲೇ ಆ ಮುಂದೆ ಮಹಾನುಭಾವ ಬಸವಣ್ಣನವರು ಕರ್ನಾಟಕದಲ್ಲಿ ವೀರಶೈವ ಮತರಕ್ಷಣೆಗಾಗಿ ಅಲ್ಲಿಂದ ನೇರವಾಗಿ ಜಂಗಮರನ್ನು ಕರೆತಂದಿರುವುದು ಇತಿಹಾಸಕ್ಕೆ ಒಪ್ಪುತ್ತದೆ.

ಪೂರ್ವಕಾಲದ ವೀರಶೈವ ಮಠಾಚಾರ್ಯರ ಪ್ರಧಾನಕಾರ್ಯವು ಮತ ಧರ್ಮಗಳನ್ನು ಅಭಿವೃದ್ಧಿ ಪಡಿಸುವುದೇ ಆಗಿದ್ದಿತು. ಪಟ್ಟಾಭಿಷಿಕ್ತರಾದ

ರುದ್ರಮುನಿಗಳು ಅಧಿಕಾರಕ್ಕೆ ಬಂದ ಕೆಲಕಾಲದಲ್ಲಿಯೇ ಆ ಪ್ರಾಂತದಲ್ಲಿ ಪ್ರಸಿದ್ಧರಾದ ಮಲ್ಲರು ಅಥವಾ ಮಲವರೆಂಬ ಸಪ್ತ ಸ್ತರನ್ನು ಶಿವಲಿಂಗದೀಕ್ಷೆಯಿಂದ ಪವಿತ್ರಗೊಳಿಸಿ ವೀರಶೈವಕ್ಕೆ ಸೇರಿಸಿದರು. ಅದೇ ಪ್ರಕಾರ ಕೋಟಿ ಪಲ್ಲಾರಾಧ್ಯರು ಸೋಣಮುಟ್ಟದಾಚಾರದವರು ಅಥವಾ ಸೋಣರೆಂಬ ಸಪ್ತ ಕ್ಷತ್ರಿಗೆಲ್ಲಾ ಶಿವಲಿಂಗದೀಕ್ಷೆ ಮಾಡಿ ವೀರಶೈವದಲ್ಲಿ ಸೇರಿಸಿದರು (ಸಂ ೧೬ ಪದ್ಯ ೪೧) ರಂಭಾಪುರಿಯಿಂದ ಮರುಳಸಿದ್ಧರು ಉಜ್ಜಯಿನಿಗೆ ಮರಳುವಾಗ ಜೈನರಲ್ಲಿ ಚತುರ್ಥರೆಂಬ ವರ್ಗದ ಎರಡು ಲಕ್ಷ ಜನರಿಗೆ ಶಿವದೀಕ್ಷೆಕೊಡುತ್ತ ವೀರಶೈವವನ್ನು ವೃದ್ಧಿಹೊಂದಿಸಿದರು. ಅದೇ ಪ್ರಕಾರ ರಂಭಾಪುರೀನಾಡಿನಲ್ಲಿ ರೇವಣಸಿದ್ಧರು ಎರಡೂವರೆ ಲಕ್ಷ ಜನರಿಗೆ ಶಿವದೀಕ್ಷೆಕೊಟ್ಟು ವೀರಶೈವ ಮತ ದಲ್ಲಿ ಸೇರಿಸಿದರು. ಈ ಮೂರು ಮರುಳಸಿದ್ಧ ರೇವಣಸಿದ್ಧರು ಯೋಗ ಮಹಿಮೆಯಿಂದ ಸಂಚರಿಸದ ದೇಶವೇ ಇರಲಿಕ್ಕಿಲ್ಲ. ಪವಿತ್ರ ಕ್ಷೇತ್ರವೇ ಇರಲಿಕ್ಕಿಲ್ಲವೆಂಬುದು ಇವರೀರ್ವರ ಇತಿಹಾಸದಿಂದ ಸ್ಪಷ್ಟವಾಗುತ್ತದೆ.

ಮೂಲ ಮರುಳಸಿದ್ಧರು ತಮ್ಮ ನಿಜವಾಸವಾದ ಕರ್ನಾಟಕದ ಉಜ್ಜಯಿನಿಗೆ ದಯಮಾಡಿಸಿದುದನ್ನು ಕಂಡು ಪುರಜನವೂ ಪರಜನವೂ ಭಕ್ತಿಯಿಂದ ವಂದಿಸಿತು. ಆನಂದೋದ್ಗಾರವನ್ನು ಮಾಡಿತು. ಕಣ್ಣುಗಳ ಪಾಪ ತಾಪಗಳನ್ನು ಕಳೆದುಕೊಂಡಿತು. ತಪೋ ಮಹಿಮನ ದೇಹವೇ ಅಂತ ಹುದು. ದೃಷ್ಟಿಯೇ ಅಂತಹುದು. ಪಾದವೇ ಅಂತಹುದು ಪವಿತ್ರ ಚರಿತ್ರನಾದ ಈ ಮರುಳಸಿದ್ಧನು—

"ಒಂದುನೂರೆಪ್ಪತ್ತು ವರುಷವು । ನಿಂದು ಮರ್ತ್ಯದಿ ಮರುಳಸಿದ್ಧನು ।
ತಂದೆ ರೇವಣಸಿದ್ಧ ಕೃಪೆಯಿಂದುಜ್ಜಯಿನಿ ಪುರದ ॥

ಚಂದದಿಂ ನಿರ್ಮಿಸುತ ಧರ್ಮಕೆ । ಕುಂದುಬಾರದ ಪರಿಯೊಳದೆ ಸ್ನೇಹಾ ।
ನಂದದಿಂಸದ್ಧರ್ಮಸಿಂಹಾಸನವ ರಚಿಸಿದನು" ॥ ೪೪ ॥ (ಸಂ ೧೬

ಒಂದುನೂರಾ ಎಪ್ಪತ್ತು ವರ್ಷ ಸುಖವಾಗಿ ಬಾಳಿ ತನ್ನ ಸದ್ಧರ್ಮ ಸಿಂಹಾಸನಕ್ಕೆ ಮುಕ್ತಿಮುನಿಯೆಂಬವರನ್ನು ಅಧಿಕಾರಿಗಳನ್ನಾಗಿ ಮಾಡಿ ಶಿವ ಸಿದ್ಧಾಂತವನ್ನು ಬೋಧಿಸಿ ಸಚ್ಚಿದಾನಂದ ಸ್ವರೂಪಿಯಾಗಿ ಶಿವೈಕ್ಯನಾದನು. ಇಲ್ಲಿಗೆ ಮೂಲ ಮರುಳಸಿದ್ಧರ ಸಂಕ್ಷಿಪ್ತವಾದ ಇತಿಹಾಸ ಮುಗಿಯಿತು.

**ಉಜ್ಜಯಿನಿಯ ಪೀಠಾಧಿಕಾರಿಯಾದ ಹೂಲಿಯ ಮರುಳಸಿದ್ಧ**

ಮೂಲ ಮರುಳಸಿದ್ಧರ ತರುವಾಯ ಮುಕ್ತಿಮುನಿ, ಅವನ ಶಿಷ್ಯ ಸಿದ್ಧಲಿಂಗ, ಅವನ ಶಿಷ್ಯ ಸಿದ್ಧೇಶ್ವರ, ಅವನ ಶಿಷ್ಯ ಸಿದ್ಧನಾಥ ಈ ನಾಲ್ವರು ಅನುಕ್ರಮವಾಗಿ ಪೀಠಾಧಿಕಾರಿಗಳಾಗಿ ಮೆರೆದ ನಂತರ ಸಿದ್ಧನಾಥನು ಹೂಲಿಯ ಸಿದ್ಧನಂಜೇಶನ ಗುರುಕುಲದಲ್ಲಿ ವಿದ್ಯಾವಿನಯ ಸದಾಚಾರ ಸಂಪನ್ನನಾದ ಮರುಳಸಿದ್ಧ ಎಂಬವನನ್ನು ಶಿಷ್ಯನನ್ನಾಗಿ ಗ್ರಹಿಸಿ ತನ್ನ ಉತ್ತರಾಧಿಕಾರವನ್ನು

ಅನುಗ್ರಹಿಸಿದನು. ಈ ಮಹಿಮನ ಪಟ್ಟಾಧಿಕಾರದ ಸಮಯ ಕ್ರಿ. ಶ. ೧೦೮೧. ಈತನು ಕ್ರಿಯಾಸಿದ್ಧನೂ, ಯೋಗೀಶ್ವರನೂ ಆಗಿದ್ದುದರಿಂದ ಅದ್ಭುತ ಆಶ್ಚರ್ಯಕರಗಳಾದ ಕೆಲವು ಲೀಲೆಗಳನ್ನು ತೋರಿಸಿರುವನು. ಆ ಚರಿತ್ರೆಯನ್ನು ಸಂಗೀತ ಕವಿಯ ಮಾತುಗಳಿಂದ ಮುಂದುವರಿಸುವೆವು.

ಮಹಿಮಾ ಶಾಲಿಯಾದ ಮಾಲಿಯ ಮರುಳಸಿದ್ಧನು ಉಜ್ಜಯಿನೀ ಪೀಠಾಧಿಪತಿಯಾಗಿ ಸಂಚಾರಮಾಡುತ್ತಿರುವಲ್ಲಿ ಮಾಡೂರಿನ ಕಗ್ಗಲ್ಲ ಗೌಡನು ಮರುಳಸಿದ್ಧನನ್ನು ಸಂದರ್ಶಿಸಿ ಪುತ್ರ ಸಂತಾನವನ್ನು ಕೇಳುವನು. ಗೌಡನ ಪ್ರಾರ್ಥನೆಗೆ ಮೆಚ್ಚಿ ಮರುಳಸಿದ್ಧನು ನಿನಗೆ ಪುತ್ರಸಂತಾನ ಫಲವಿಲ್ಲ ವಾದರೂ ನಾನೇ ನಿನಗೆ ಮಗನಾಗಿ ತೋರುವೆನೆಂದು ಆಶೀರ್ವದಿಸುವನು. ಗೌಡ ದಂಪತಿಗಳಿಗೆ ಅಪಾರ ಸಂತೋಷವಾಗುವುದು. ಗುರು ಚರಣಕ್ಕೆ ವಂದಿಸಿ ಪ್ರಾರ್ಥಿಸುವರು. ಆಗ ಮರುಳಸಿದ್ಧನು ಒಂದು ಹೊಲದಲ್ಲಿ ಬಿಲ್ವ ವೃಕ್ಷದಡಿಯಲ್ಲಿ ಶಿಶುವಾಗಿ ಆಡತೊಡಗಿದನು. ಕಗ್ಗಲ್ಲಿ ಗೌಡನ ಮನೆಯ ಆಳೊಬ್ಬನು ಅದೇ ಹೊಲಕ್ಕೆ ಬೇಸಾಯ ಮಾಡಲು ಬಂದು ಶಿಶುವನು. ಕಂಡು ಆಶ್ಚರ್ಯಪಟ್ಟು ಓಡಿಹೋಗಿ ಗೌಡನಿಗೆ ತಿಳುಹಿಸಿದನು. ಈ ವಾರ್ತೆಯನ್ನು ಕೇಳಿದ ಗೌಡದಂಪತಿಗಳು ಅತಿ ಶೀಘ್ರವಾಗಿ ಆ ಹೊಲಕ್ಕೆ ಬಂದು ಆಡುತ್ತಿರುವ ಶಿಶುವನ್ನು ಎತ್ತಿ ಮುದ್ದಾಡಿದರು. ಕೊರಳಲ್ಲಿ ಶಿವ ಲಿಂಗ ಹಣೆಯಲ್ಲಿ ಭಸ್ಮ ತ್ರಿಪುಂಡ್ರವುಳ್ಳ ಆ ಶಿಶುವಿಗೆ ಗೌಡನ ಹೆಂಡತಿಯು ಬಂಗಾರದ ಒಡವೆಗಳನ್ನು ತೊಡಿಸಿ ತೊಟ್ಟಿಲೊಳಿಟ್ಟು ಆನಂದದಿಂದ ಹಾಡಿ ಹರಸಿ ಪ್ರೇಮ ಭರದಲ್ಲಿ ಮೈಮರೆದು ತನ್ನ ಎದೆಗೆ ಶಿಶುವನ್ನು ತಬ್ಬಿಕೊಂಡಳು. ಉಬ್ಬಿ ಮೊಲೆಗೆ ಶಿಶುವಿನ ಮುಖವನ್ನಿಟ್ಟಳು ಶಿಶುವು ಭರದಿಂದ ಮೊಲೆ ಯನ್ನು ಕುಡಿಯ ಹತ್ತಿತು. ಬಂಜೆಯಾದರೂ ತನ್ನ ಮೊಲೆಗೆ ವಿಪುಲವಾದ ಹಾಲು ಬಿದ್ದುದರಿಂದ ಗೌಡತಿಯೂ, ಆಕೆಯ ವಾಕ್ಯ ಶ್ರವಣದಿಂದ ಅವಳ ಗೆಳತಿಯರೂ ಆಶ್ಚರ್ಯ ಚಕಿತರಾದರು. ಇವನು ಕಂದನಲ್ಲ, ಇಂದುಧರ ನೆಂದನು. ಬಾಲನಲ್ಲ ಕಾಲಹರನೆಂದರು. ಶಿಶುವಿನ ಚಂದ್ರಾನನವನ್ನು ಮುದ್ದಾಡಿ, ಚುಂಬಿಸಿದರು, ಶಿಶುವು ದಿನದಿನಕ್ಕೂ ಚಂದ್ರನಂತೆ ಬೆಳೆ ಯಿತು, ಅದರಂತೆ ಗೌಡದಂಪತಿಗಳಿಗೆ ಆನಂದವನ್ನುಂಟುಮಾಡಿತು. ಬಾಲ ಲೀಲೆಯಲ್ಲಿ ನೆರೆಯ ಬಾಲಕರೊಡನೆ ಆಡುತ್ತ ಓಡುತ್ತ ಬೀಳುತ್ತ ಏಳುತ್ತ ದೊಡ್ಡವನಾದರೂ ಗೋಪಾಲನೆ ಮುಂತಾದ ತರುಳಮರುಳಾಟದಿಂದ ಮತ್ತೆಯೂ ಮರುಳನಾದನನ್ನೇ ತೋರಿ ಗೌಡದಂಪತಿಗಳಿಗೆ ಕೆಲದಿನ ಆನಂದವನ್ನೀಯುತ್ತ ರೂಪಾಂತರಗೊಂಡು ಮರುಳಸಿದ್ಧನಾಗಿ ಪುನಃ ರಂಭಾ ಪುರಿಗೆ ತೆರಳಿದನು.

ಆಗ ರಂಭಾಪುರಿಯ ವೀರ ಸಿಂಹಾಸನದಲ್ಲಿ ಸಿದ್ಧನಾಥ ಎಂಬವರು ಅಧಿಪತಿಗಳಾಗಿದ್ದರು. ಮರುಳಸಿದ್ಧನು ಅವರಿಗೆ ಯೋಗ ವಿದ್ಯೆಯ ಪರಕಾಯ ಪ್ರವೇಶ ಮುಂತಾದವುಗಳನ್ನು ಬೋಧಿಸಿದನು. ಅಲ್ಲಿಂದ ಮಹಾಕೂಟವೆಂಬ ಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿಯ ಸಿದ್ಧರಾಶ್ರಮದಲ್ಲಿ ಕೆಲ ದಿನ ತಪೋನುಷ್ಠಾನ ತತ್ಪರನಾಗಿ ಆ ಪ್ರಾಂತದ ಅನೇಕ ಸದ್ಭಕ್ತರಿಗೆ ಶಿವಲಿಂಗ ದೀಕ್ಷೆ ಮಾಡಿ ವೀರಶೈವ ಧರ್ಮದಲ್ಲಿ ಸೇರಿಸಿದನು. ಭಕ್ತರ ಬೇಡಿಕೆಗಳನ್ನು ಸಫಲಗೊಳಿಸಿದನು (ಈಗ ಈ ಮಹಾಕೂಟ ಕ್ಷೇತ್ರವು ವಿಜಾಪೂರಜಿಲ್ಲೆಯ ಬಾದಾಮಿ ತಾಲೂಕಿನ ಶಿವಯೋಗ ಮಂದಿರಕ್ಕೆ ಸಮೀಪದಲ್ಲಿದೆ. ಶ್ರೀ ಮನ್ನಿರಂಜನ ಹಾನುಗಲ್ಲು ಕುಮಾರ ಶಿವಯೋಗಿಗಳು ಈ ಕ್ಷೇತ್ರದ ಪವಿತ್ರತೆಯನ್ನರಿತೇ ಆಬಳಿ ಶಿವಯೋಗ ಮಂದಿರವನ್ನು ಸ್ಥಾಪಿಸಿದ್ದಾರೆ.)

ಹೂಲಿಯ ಮರುಳಸಿದ್ಧನನ್ನು ಶಿಶುವಾಗಿ ಪಡೆದ ಕಗ್ಗಲ್ಲಿ ಗೌಡನು ಧಾರವಾಡಜಿಲ್ಲೆಯ ಹಾನಗಲ್ಲು ತಾಲೂಕು ಆಲೂರು ಬಳಿಯಿರುವ ಮೂಡೂರಿನವನೆಂದು ಕೆಲವರು ಹೇಳುವರು. ಅದಕ್ಕಾಗಿ ಕೆಲವು ಇತಿಹಾಸವನ್ನೂ ಅವರು ಕಟ್ಟುವರು. ಇನ್ನು ಕೆಲವರು ಉಜ್ಜಯಿನಿ ಹುಟ್ಟುವುದಕ್ಕೆ ಮೊದಲಿದ್ದ ಕೇತನಹಳ್ಳಿಯೇ ಕಗ್ಗಲ್ಲಾಗಿತ್ತೆಂದೂ, ಮತ್ತೆ ಕೆಲವರು ಉಜ್ಜಯಿನಿಗೆ ಸುಮಾರು ೩ ಮೈಲಿನಲ್ಲಿ ಉತ್ತರದಿಕ್ಕಿಗೆ ಹಾಳಾಗಿರುವ ಹಳ್ಳಿಯೇ ಕಗ್ಗಲ್ಲಪುರವೆಂದೂ ಹೇಳುವರು. ಇವುಗಳಲ್ಲಿ ಮೊದಲನೆಯವರ ಶೋಧನೆಯೇ ಸಾಧುವಾಗಿದೆ ಆ ವಿಚಾರವನ್ನು ಸಂದೀಶಕವಿಯು:—"ಮತ್ತೆ ಮೂಡೂರಕ್ಕೆ ಬರುತಿರೆ ಭಕ್ತವರ ಕಗ್ಗಲ್ಲ ಗೌಡನು ಕರ್ತೃ ಶ್ರೀ ಗುರುಮರುಳಸಿದ್ಧನ ಮಂದಿರವರಚಿಸಿ" ( ಸಂ ೧೭ ಪದ್ಯ ೩೮ ) ಎಂದು ಸ್ಪಷ್ಟ ಪಡಿಸಿದ್ದಾನೆ.

ಈ ಹೂಲಿಯ ಮರುಳಸಿದ್ಧನು ಮಹಾಕೂಟದಿಂದ ಪ್ರಯಾಣಿಸಿ ದರಿಕೇರಿ ಎಂಬಲ್ಲಿಗೆ ಬರುವನು. ಅಲ್ಲಿ ಸೋಮಣ್ಣನೆಂಬ ಕುರುಬನು ಪುತ್ರಸಂತಾನವನ್ನು ಕೇಳಿಕೊಳ್ಳುವನು. ಮರುಳಸಿದ್ಧನು ಆಶೀರ್ವದಿಸುವನು. ಈ ಮಹಿಮನ ಆಶೀರ್ವಾದದಿಂದ ಸೋಮಣ್ಣನಿಗೆ ಪುತ್ರಸಂತಾನವಾದುದರಿಂದ ಆವನಿಗೆ ಅಮೋಘಸಿದ್ಧನೆಂಬ ಹೆಸರಿಡುವರು, ಈ ಅಮೋಘಸಿದ್ಧನು ತನ್ನ ಗುರುವನ್ನು ಹುಡುಕುತ್ತ ಭೀಮಾನದಿಯ ದಂಡೆಯ ಮೇಲಿರುವ ಮಾಸನೂರೆಂಬ ಗ್ರಾಮದ ರೇವಣಸಿದ್ಧ ಮಂದಿರದಲ್ಲಿ ಮರುಳಸಿದ್ಧನನ್ನು ಕಾಣುವನು. ವಂದಿಸುವನು. ಶಿವದೀಕ್ಷೆ ಹೊಂದುವನು. ಶಿಷ್ಯನಾಗಿ ಮರುಳಸಿದ್ಧನೊಡನೆ ಹೂಲಿಯ ಕಡೆಗೆ ಪ್ರಯಾಣಿಸುವನು. ಈ ಅಮೋಘ ಸಿದ್ಧನು ಹೂಲಿಯ ಮರುಳಸಿದ್ಧನ ಅಪ್ಪಣೆಯಂತೆ ಕುರುಬ ಜನಕ್ಕೆಲ್ಲ ವೀರಶೈವವನ್ನು ಬೋಧಿಸಿ ಶಿವಲಿಂಗಧಾರಕರನ್ನಾಗಿಸಿದನು.

ಈ ಹೂಲಿಯ ಮರುಳಸಿದ್ಧನು ಅಮೋಘಸಿದ್ಧನನ್ನು ಕುರುಬರಿಗೆ ಗುರುವಾಗಿರುವಂತೆ ಮಾಡಿ ಹಿರಿಯಕುಂಬಿ ಎಂಬ ಗ್ರಾಮದಲ್ಲಿ ಅವನನ್ನು ಬಿಟ್ಟು ನೇರವಾಗಿ ಮೂಡಣೂರಿಗೆ ಬಂದು ಅಲ್ಲಿಯ ಕಗ್ಗಲ್ಲ ಗೌಡನ ಕಡೆಯಿಂದ ಅಲ್ಲಿ ಒಂದು ಮರುಳಸಿದ್ಧ ಮಂದಿರವನ್ನು ಕಟ್ಟಿಸಿದನು. ಅಲ್ಲದೆ ಒಂದು ಶಿವಲಿಂಗವನ್ನೂ ಸ್ಥಾಪಿಸಿದನು. ( ಸಂ ೧೭ ಪದ್ಯ ೩೯ )

ಅಲ್ಲಿಂದ ಚೀತೂರಿಗೂ ಆನೆಗೋಡಿಗೂ ಪ್ರಯಾಣಿಸಿ ಕೆಲಕಾಲ ತಪಸ್ಸನ್ನು ಮಾಡುವನು. ಅಲ್ಲಿ ಸಹಜಾನಂದ ಯೋಗಿ ಎಂಬವಗೆ ಶಿವಯೋಗ ಮಾರ್ಗವನ್ನುಪದೇಶಮಾಡಿದನು. ಹೀಗೆ ಹಲವು ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಧರ್ಮೋದ್ಧಾರ ಭಕ್ತೋದ್ಧಾರಗಳನ್ನೆಸಗುತ್ತ ಹೂಲಿಯ ಮರುಳಸಿದ್ಧನು ಮತ್ತೆಯೂ ಹೂಲಿಗೆ ಬಂದು ಆ ಮಠದ ಸಿದ್ಧ ನಂಜೇಶ್ವರನ ಅಭಿಪ್ರಾಯದ ಮೇರೆಗೆ ಸಿದ್ಧಮಲ್ಲ ಯೋಗಿ ಎಂಬವರಿಗೆ ತಮ್ಮ ಉತ್ತರಾಧಿಕಾರವನ್ನು ಅನುಗ್ರಹಿಸಲೋಸುಗ ಉಜ್ಜಯಿನಿಗೆ ಪಯಣ ಬೆಳಸಿ ಉಳಿದ ಚತುರಾಚಾರ್ಯ ಮಹಾಪೀಠಪತರ ಮತ್ತು ಇತರ ಸದ್ಭಕ್ತರ ಸದಭಿಪ್ರಾಯದೊಂದಿಗೆ ಶುಭ ಮುಹೂರ್ತದಲ್ಲಿ ಪಂಚಮುದ್ರೆಗಳನ್ನು ಒಪ್ಪಿಸುವ ಮೂಲಕ ಪೀಠಾಧಿಕಾರವನ್ನು ಕರುಣಿಸಿ ಬಳಿಕ ಹೂಲಿಗೆ ಪಯಣಮಾಡಿಸಿ ಅಲ್ಲಿಯೇ ಶಿವೈಕ್ಯನಾದನು (೧೭ ಪ ೪೪)

ಈ ಹೂಲಿಯ ಮರುಳಸಿದ್ಧನಿಂದ ಜಗದ್ಗುರು ಪಟ್ಟವನ್ನೇ ಪಡೆದ ಸಿದ್ಧಮಲ್ಲ ಯೋಗಿಗಳು ಬಹು ಪ್ರಸಿದ್ಧಿಗೆ ಬಂದರು. ಇವರಮಹಿಮೆ ನಾಲ್ಕು ದಿಕ್ಕುಗಳಲ್ಲಿ ಹರಡಿತು ಅನೇಕ ದೇಶದ ಅರಸರು ಇವರಿಂದ ಧರ್ಮಬೋಧೆ ಹೊಂದಿ ವೀರಶೈವರಾದರು. ಅವರಲ್ಲೊಬ್ಬನಾದ ಗಜಪತಿ ಮಹೇಂದ್ರ ಎಂಬ ಅರಸು ಉಜ್ಜಯನಿಗೆ ಬಂದು ಮರುಳಸಿದ್ಧೇಶ್ವರ ಮಂದಿರದ ಮುಂದುಗಡೆ ಒಂದು ಮಂಟಪವನ್ನು ಕಟ್ಟಿಸಿಕೊಟ್ಟು ಅದರ ಬಳಿಯಲ್ಲಿ ಭುವನೈಕಮಲ್ಲ (ಸೋಮೇಶ್ವರ ಕಲ್ಯಾಣದ ಅರಸ)ನ ಶಿಲಾವಿಗ್ರಹವನ್ನು ಸ್ಥಾಪಿಸಿದನು. ಸಿದ್ಧಮಲ್ಲ ಯೋಗಿಯ ವಿದ್ವತ್ತು ಅಗಾಧವಾಗಿದ್ದಿತು. ತತ್ತ್ವಜ್ಞಾನವನ್ನು ಬೀರುವುದರಲ್ಲಿ ಅದ್ವಿತೀಯನಾಗಿದ್ದನು. ಜೊತೆಗೆ ಶಿವಯೋಗ ಶಿವಭಕ್ತಿಗಳಿಂದಾಗಿ ಕ್ರಿಯಾಸಿದ್ಧನೂ ಆಗಿದ್ದನು. ಬಂಜೆಯರಿಗೆ ಸಂತಾನದಾನ ಮಾಡುವುದೆಂದರೆ ಈತನ ಮಹಿಮೆಗಳಲ್ಲಿ ಮೊದಲನೆಯದು. ಉಜ್ಜಯಿನೀ ಪುರದಲ್ಲಿ ತನ್ನ ಶಿಷ್ಯನಾದ ಬಿಜ್ಜಗೌಡ ಎಂಬವನಿಗೂ ಬಾಗಳಿ ಬಸಪ್ಪ ನಾಯಕ ಎಂಬವನಿಗೂ ಪುತ್ರಸಂತಾನವನ್ನನುಗ್ರಹಿಸಿದನು. ಅದೇ ಪ್ರಕಾರ ಬುಳ್ಳಪ್ಪ ಎಂಬ ಅರಸನಿಗೆ ಪುತ್ರ ಸಂತಾನವನ್ನನುಗ್ರಹಿಸಿ ಅವನು ಸಲ್ಲಿಸಿದ ಒಂದು ಸಾವಿರ ನಾಣ್ಯಗಳನ್ನು ಸ್ವೀಕರಿಸಿದನು. "ಸಾವಿರಕ್ಕೊಂದು ಸಂತಾನ" ಎಂದು ಇವರ ಕಾಲದಲ್ಲಿ ನಾಣ್ಣುಡಿಯಾಗಿ ಪ್ರಚಾರದಲ್ಲಿ ಬಂದಿತು, ಸಂತಾನಹೀನರಾದ

ಸಿರಿವಂತರನೇಕರು ಸಾವಿರ ರೂಪಾಯಿ ಕಾಣಿಕೆ ಸಲ್ಲಿಸಿ ಪುತ್ರರನ್ನು ಪಡೆದರು ಈ ಸಂದರ್ಭದಲ್ಲಿ ವಿಜಯನಗರ (ಹಂಪೆ)ದ ಸಾರ್ವಭೌಮನಾದ ಪ್ರೌಢ ರಾಯನು ಸಂತಾನಹೀನನಾಗಿದ್ದ ಕಾರಣ ಈ ಸಿದ್ಧಮಲ್ಲಯೋಗಿಗಳನ್ನು ತನ್ನರಮನೆಗೆ ಬರಮಾಡಿಕೊಂಡು ಭಕ್ತಿಯಿಂದ ಸೇವಿಸಿದನು. ಜಗದ್ಗುರುವು ಸಾರ್ವಭೌಮನ ಸೇವೆಗೆಮೆಚ್ಚಿ ಶುಭಶೀರ್ವಾದದಿಂದ ಪುತ್ರಸಂತಾನ ವಾಗು ವಂತೆಮಾಡಿದನು. ಹಂಪೆಯ ಪ್ರೌಢರಾಯನು ವಿದ್ಯಾವಿಶಾರದನಾಗಿದ್ದನು. ಧರ್ಮಜ್ಞನಾಗಿದ್ದನು. ಅದು ಕಾರಣ ಅವನ ಮನಸ್ಸು ವೀರಶೈವವನ್ನು ಸೇರಿತು; ಶಿವದೀಕ್ಷೆಯನ್ನು ಹೊಂದಿತು. ಉತ್ತರೋತ್ತರವಾಗಿ ವೀರಶೈವಾ ಚಾರದ ಆಚರಣೆಗೆ ಬೇಕಾದ ಗುರುವನ್ನು ಅನುಗ್ರಹಿಸಲು ಸಾರ್ವಭೌಮ ಪ್ರೌಢರಾಯನು ಸಿದ್ಧಮಲ್ಲಯೋಗಿಗಳನ್ನು ಪ್ರಾರ್ಥಿಸಿದನು ಅರಸನ ಇಚ್ಛೆ ಯಂತೆ ಹಂಪೆಯಲ್ಲಿ ಹಿರಿಯ ಮಠವನ್ನು ಸ್ಥಾಪಿಸಿ ಅಲ್ಲಿ ಮಳೆಯಮಲ್ಲೇಶ್ವರ ಎಂಬ ತಮ್ಮೊಬ್ಬ ಶಿಷ್ಯರಿಗೆ ಪಟ್ಟಾಧಿಕಾರವನ್ನು ಕೊಟ್ಟರು. ಅಲ್ಲಿಂದ ಹಂಪೆಯ ಹಿರಿಯಮಠದ ಪರಂಪರೆಯವನೇ ಪ್ರಸಿದ್ಧನಾದ ವಿರೂಪಾಕ್ಷ ಪಂಡಿತನೆಂಬುದು ಐತಿಹಾಸಿಕಜ್ಞರಿಗೆ ತಿಳಿದ ಸಂಗತಿಯೇ ಆಗಿದೆ.

ಹಂಪೆಯ ಅರಸು ಪ್ರೌಢರಾಯನ ಎರಡನೆಯ ಹೆಸರು ದೇವರಾಜ ಅರಸು ಅಥವಾ ಕೃಷ್ಣದೇವರಾಯನೆಂದಿರಬೇಕು. ಇವನ ಮಂತ್ರಿ ಜಕ್ಕಣ ಎಂಬವನೂ ಲಕ್ಷಣ ಎಂಬವನೂ ಇಬ್ಬರೂ ಸುಪ್ರಸಿದ್ಧ ವಿದ್ವಾಂಸರಾಗಿದ್ದರು. ರಾಜಮಂತ್ರಿ ಜಕ್ಕಣಾಚಾರ್ಯ, ಲಕ್ಕಣಾಮಾತ್ಯ ಎಂದು ಇವರನ್ನು ಸಂಗೀತ ಕವಿಯು ತನ್ನ ಕಾವ್ಯದಲ್ಲಿ ಉಲ್ಲೇಖಿಸಿದ್ದಾನೆ. ಮಹಾವಿದ್ವಾಂಸರೂ ವೀರ ಶೈವ ತತ್ತ್ವಜ್ಞರೂ ಆದ ಉಜ್ಜಯಿನೀ ಪೀಠದ ಜಗದ್ಗುರು ಸಿದ್ಧಮಲ್ಲ ಯೋಗಿಗಳ ನೇತೃತ್ವ ಸಾರ್ವಭೌಮ ಪ್ರೌಢರಾಯನ ಉದಾರದಾತೃತ್ವಗಳಲ್ಲಿ ಹಂಪೆಗೆ ದಿಕ್ಕು ದಿಕ್ಕುಗಳಿಂದ ಪೀಠಾಚಾರ್ಯರೂ, ವಿರಕ್ತರೂ ಇತರ ವಿದ್ವಾಂಸರೂ ತಂಡೋಪತಂಡವಾಗಿ ಧಾವಿಸಿ ಬಂದರು. ಮಹಾಗುರುವಾದ ಸಿದ್ಧ ಮಲ್ಲ ಯೋಗಿಯು ಬಸವದಂಡಾಧೀಶನೇ ಮೊದಲಾದ ಶಿವಶರಣರ ಬೋಧೆ ಹಾಗೂ ಅಗಸ್ತ್ಯ ಮಹರ್ಷಿಗೆ ಜಗದ್ಗುರು ರೇಣುಕರು ಬೋಧಿಸಿದ ಬೋಧೆ ಇವೆಲ್ಲವನ್ನು ಒಂದುಕಡೆ ಶೇಖರಿಸಿ ವಚನ ಗ್ರಂಥಗಳನ್ನು ಮತ್ತಿತರ ಸಿದ್ಧಾಂತ ಗ್ರಂಥಗಳನ್ನು ರಚಿಸಲು ಅಪ್ಪಣೆಮಾಡಿದನು. ಅವನ ಅಪ್ಪಣೆಯ ಮೇರೆಗೆ ಶಿವಶರಣರ ಅಂಕಿತವುಳ್ಳ ಅನೇಕ ವಚನ ಗ್ರಂಥಗಳು ಸಿದ್ಧವಾದವು ಲಕ್ಕ ಣಾಮಾತ್ಯನು ಸ್ವಮತಿ ಪ್ರೇರಿತನಾಗಿ ಕೂಡಲ ಸಂಗಮೇಶ್ವರ ಅಂಕಿತವುಳ್ಳ ಬಸವೇಶ್ವರ ವಚನಗಳನ್ನೂ, ಶಿವ ತತ್ತ್ವ ಚಿಂತಾಮಣಿ ಎಂಬ ಗ್ರಂಥವನ್ನೂ, ಅನುಭವಾಮೃತವೆಂಬ ಇನ್ನೊಂದು ಗ್ರಂಥವನ್ನೂ ರಚಿಸಿದನು. ಕಲ್ಲುಮಠದ ಆಚಾರ್ಯವರ್ಯನು ಅಲ್ಲಮಪ್ರಭು ವಚನಗಳನ್ನೂ, ಚಕ್ಕಣಾಮಾತ್ಯನು



ಸಿಂದೋಗಿ ಮಾದಿಗ ಮರುಳಪ್ಪನಗುಡಿ

ಇತರ ಶರಣರ ವಚನಗಳನ್ನೂ ರಚಿಸಿ ಪ್ರಸಿದ್ಧರಾದರು. ಸಿದ್ಧಮಲ್ಲಯೋಗಿಯ ವಿಶಾಲ ಹೃದಯದಿಂದ ಬೆಳೆದ ಶರಣರ ಸಾಹಿತ್ಯವು ಅಖಂಡ ಕರ್ನಾಟಕವನ್ನೇ ತುಂಬಿತು, ತುಳುಕಿತು. ಸರ್ವರನ್ನೂ ಸಮತಾ ನದಿಯ ತುಂಗಭದ್ರೆಯಲ್ಲಿ ಸ್ನಾನಮಾಡಿಸಿ ಪವಿತ್ರ ಹಾಗೂ ಶಾಂತರನ್ನಾಗಿ ಮಾಡಿತು. ಬಹುಭಾಗದಿಂದ ಬರುವ ಎಲ್ಲರಿಗೂ ಬೋಧೆ ದೊರೆಯಬೇಕೆಂದು ಹಂಪೆಯ ಅರಸು ಪ್ರೌಢರಾಯನು ಹಂಪೆಯ ತುಂಗಭದ್ರಾತಟದಲ್ಲಿ ಒಂದು ಪಾವನಾಶ್ರಮವನ್ನು ಈ ಮಹಾಗುರುವಿಗೆ ಕಟ್ಟಿಸಿಕೊಟ್ಟನು. ಕೆಲಕಾಲ ಈ ಸಿದ್ಧಮಲ್ಲ ಜಗದ್ಗುರುಗಳು ಅಲ್ಲಿಯೇ ತಪೋನುಷ್ಠಾನಮಾಡಿಕೊಂಡಿದ್ದರು. ( ಸಂ ೧೮. ಪದ್ಯ ೧೩ರಿಂದ ೨೮ರವರೆಗೆ )

## ಸಿಂದೋಗಿಯ ಮಾದಿಗ ಮರುಳಸಿದ್ಧ

ಉಜ್ಜಯಿನೀ ಸದ್ಧರ್ಮ ಪೀಠಾಧೀಶ್ವರನಾದ ಜಗದ್ಗುರು ಸಿದ್ಧಮಲ್ಲಯೋಗಿಯ ಸಂತಾನದಾನದ ವಾರ್ತೆಯನ್ನು ಕೇಳಿ ಸಿಂದೋಗಿ (ಈಗ ನೈಜಾಂ ಕೊಪ್ಪಳದ ಬಳಿಯಿದೆ) ಗ್ರಾಮದ ಗೌಡನು ಗುರುಗಳಲ್ಲಿ ಬಂದು ಒಂದು ಸಾವಿರ ಹೊನ್ನುಗಳನ್ನು ಅರ್ಪಿಸಿ ಪುತ್ರಸಂತಾನವನ್ನು ಯಾಚಿಸಿದನು. ಗುರುಗಳು ಕಾಣಿಕೆಯನ್ನು ಸ್ವೀಕರಿಸಿ ತಮ್ಮ ಹಸ್ತದಿಂದ ಫಲಾಶೀರ್ವಾದಮಾಡಿ ಕಳುಹಿಸಿದರು. ಅದರಂತೆ ವರ್ಷದೊಳಗೆ ಗೌಡನಿಗೆ ಧರ್ಮಪತ್ನಿಯಲ್ಲಿ ಪುತ್ರಸಂತಾನವಾಯಿತು. ಇದನ್ನು ಪ್ರತ್ಯಕ್ಷವಾಗಿ ಕಂಡ ಆ ಗೌಡನಮನೆಯಲ್ಲಿ ಆಳಾಗಿದ್ದ ಮುಗ್ಧಭಾವದ ಮಾರನೆಂಬ ಮಾದಿಗನೊಬ್ಬನು ಭಯಭಕ್ತಿಯಿಂದ ತನಗೆ ಸಂತಾನವಿಲ್ಲವಾಗಿಯೂ, ಕಾಣಿಕೆ ಕೊಡಲು ಹಣವಿಲ್ಲವಾಗಿಯೂ ಕೊಟ್ಟರೆ ಒಂದು ಸಾವಿರ ಕುಳ್ಳು ಮಾತ್ರ ಕೊಡಲು ಸಾಧ್ಯವೆಂತಲೂ ವಂದಿಸಿ ಪುತ್ರಸಂತಾನವನ್ನು ಕೇಳಿದನು. ಅವನ ಬಡಭಕ್ತಿಗೆ ಗುರುಗಳು ಮೆಚ್ಚಿ ಆಶೀರ್ವಾದವನ್ನು ಕೊಟ್ಟನು. ಇತ್ತ ಮಾದಿಗ ಮಾರನ ಹೆಂಡತಿಯು ಗರ್ಭಿಣಿಯಾಗಿ ಗುರುಕೃಪೆಯಿಂದ ಸತ್ಪುತ್ರನನ್ನು ಹಡೆದಳು. ಇವನಿಗೆ ಮರುಳಸಿದ್ಧ ಎಂಬ ಹೆಸರನ್ನೇ ಇಟ್ಟರು. ಹರಕೆಯಂತೆ ಉಜ್ಜಯಿನಿಯ ಮಠದ ದಾಸೋಹಕ್ಕೆ ಮಾದಿಗ ಮಾರನು ಒಂದು ಸಾವಿರ ಕುಳ್ಳುಗಳನ್ನೂ ತಂದು ಸಲ್ಲಿಸಿದನು.

ಈ ಸಿಂದೋಗಿಯ ಮಾದಿಗ ಮರುಳಸಿದ್ಧನು ಎಂಟು ವರ್ಷದವನಾದನು. ಗೌಡನ ಮನೆಯಲ್ಲಿ ದನಗಳನ್ನು ಕಾಯಲುದ್ಯುಕ್ತನಾಗಿ ಅನೇಕ ಲೀಲೆಗಳನ್ನು ಮಾಡತೊಡಗಿದನು. ಇವನ ಲೀಲೆಗಳಿಗೆ ಜನ ಬೆರಗಾಯಿತು. ಇವನೊಬ್ಬ ಶರಣನೆಂದು ಕೊಂಡಾಡತೊಡಗಿತು. ಗುರುಭಕ್ತನಾದ ಈ ಮಾದಿಗ ಮರುಳಸಿದ್ಧನು ಅಮಾನುಷ ಲೀಲೆಗಳನ್ನು ಮಾಡುತ್ತ ತನ್ನ ಗುರುವಾದ ಸಿದ್ಧಮಲ್ಲಯೋಗಿಯ ಸಂದರ್ಶನಕ್ಕಾಗಿ ಉಜ್ಜಯಿನಿಗೆ ಧಾವಿಸಿದನು.

ಪಾದಪೂಜೆಗೆ ಅವಕಾಶವನ್ನು ಕೊಡಲು ಪ್ರಾರ್ಥಿಸಿದನು. ಗುರುಗಳು ಅವನಿಗೆ ಸದುಪದೇಶವಿತ್ತು ಸಿಂದೋಗಿಯಲ್ಲಿ ಮಾದಿಗಕೇರಿಯಲ್ಲಿ ಮರುಳಸಿದ್ಧೇಶ್ವರ ದೇವಾಲಯವನ್ನು ಕಟ್ಟಿಸಿ ಅಲ್ಲಿ ಒಂದು ಶಿವಲಿಂಗವನ್ನು ಸ್ಥಾಪಿಸಿ ಅದನ್ನು ಪೂಜಿಸುತ್ತ ಹೋಗೆಂದು ಅಪ್ಪಣೆಮಾಡಿದರು. ಆ ವಿಧವಾಗಿಯೇ ಈ ಮಾದಿಗ ಮರುಳಸಿದ್ಧನು ಆಚರಿಸುತ್ತ ಬಂದನು. ( ಸಿಂದೋಗಿಯಲ್ಲಿ ಈಗಲೂ ಆ ದೇವಸ್ಥಾನವು ಮಾದಿಗರ ವಶದಲ್ಲಿದೆ. )

ಹೀಗೆಯೇ ಇನ್ನೊಬ್ಬ ಮಾದಿಗರ ಹರಳನೆಂಬವನು ಸಿದ್ಧಮಲ್ಲ ಯೋಗಿಗಳ ಅಪ್ಪಣೆ ಪಡೆದು ಉಜ್ಜಯಿನಿಯ ಮಾದಿಗಕೇರಿಯಲ್ಲಿ ಮರುಳಸಿದ್ಧನ ಹೆಸರಿನಿಂದ ಒಂದು ಗುಡಿಯನ್ನು ಕಟ್ಟಿಸಿ ಅಲ್ಲಿ ತಾನು ಪೂಜಾಸಕ್ತನಾಗಿದ್ದನು. ಸಿದ್ಧಮಲ್ಲಯೋಗಿಗಳು ಶಿವಾದ್ವೈತಭಾವದಿಂದ ತತ್ತ್ವವನ್ನೇ ಪ್ರಧಾನವಾಗಿಟ್ಟು ಮಾದಿಗರನ್ನೂ ಪರಮಭಕ್ತರನ್ನಾಗಿಸಿ ಧರ್ಮಲೋಪವಾಗದಂತೆ ಪೀರವನ್ನಾಳಿದರು. ಇವರು ಒಟ್ಟು ೮೦ ವರ್ಷ ಬದುಕಿದ್ದು ಕೊನೆಗೆ ಸಿದ್ಧನಾಥ ಎಂಬ ಶಿಷ್ಯನಿಗೆ ಉತ್ತರಾಧಿಕಾರ ಕೊಟ್ಟು ಉಜ್ಜಯಿನಿಯಲ್ಲಿಯೇ ಲಿಂಗೈಕ್ಯರಾದರು. ಈ ವಾರ್ತೆಯನ್ನು ಕೇಳಿ ಉಜ್ಜಯಿನಿಯಲ್ಲಿದ್ದ ಮಾದಿಗ ಹರಳನೆಂಬ ಶರಣನೂ ಅತ್ತ ಸಿಂದೋಗಿಯಲ್ಲಿ ಮಾದಿಗ ಮರುಳಸಿದ್ಧನೂ ಅದೇ ದಿನವೇ ಪವಿತ್ರ ಶಿವರಾತ್ರಿಯಲ್ಲಿ ಗುರುನಾಮಸ್ಮರಣೆ ಮಾಡುತ್ತ ಲಿಂಗೈಕ್ಯರಾದರು ( ಹರಳಯ್ಯನ ಸಮಾಧಿಯು ಉಜ್ಜಯಿನಿಯ ಮಾದಿಗಕೇರಿಯಲ್ಲಿಯೂ ಮಾದಿಗ ಮರುಳಸಿದ್ಧನ ಸಮಾಧಿಯು ಸಿಂದೋಗಿಯಲ್ಲಿಯೂ ಈಗಲೂ ಇರುವವು ಮತ್ತು ಅವು ಜನರಿಂದ ಪೂಜಿಸಲ್ಪಡುವವು. ) ( ಸಂ ೧೮—ಪದ್ಯ ೫೭ ರವರೆಗೆ. )

ಈ ಮಾದಿಗ ಮರುಳಸಿದ್ಧನೇ ದೇವಕವಿಯ ಕೃತಿಯ ಪ್ರಧಾನ ಪುರುಷನಾಗಿದ್ದಾನೆ. ಈ ಸಿಂದೋಗಿಯ ಮಾದಿಗ ಮರುಳಸಿದ್ಧನಿಗಾಗಲಿ ಅಥವಾ ಹೂಲಿಯ ಮರುಳಸಿದ್ಧನಿಗಾಗಲಿ ರೇವಣಸಿದ್ಧರ ಸಂಬಂಧವೇ ಇರುವದಿಲ್ಲ. ರೇವಣಸಿದ್ಧರ ಸಂಬಂಧವುಳ್ಳವನೇ ಆದಿಮರುಳಸಿದ್ಧನೆಂಬುದು ಮೇಲ್ಕಾಣಿಸಿದ ವಿವರಣೆಗಳಿಂದ ಸ್ಪಷ್ಟವಾಗಿದೆ; ಕಾರಣ ದೇವಕವಿಯ ಅಪಭ್ರಂಶತನವೂ ಆತನ ಮಾದಿಗ ಮರುಳಸಿದ್ಧನನ್ನೇ ಮೂಲ ಮರುಳಸಿದ್ಧನೆಂದು ಭ್ರಮಿಸಿ ಬರೆದ ಆ ಕಾವ್ಯವನ್ನು ಪರಮಮಾನ್ಯವಾದುದೆಂತಲೂ ತಮ್ಮ ಸಾಂಪ್ರದಾಯಕ್ಕೆ ಪುಷ್ಟಿಕೊಡತಕ್ಕದ್ದೆಂತಲೂ ಸಾರಿಹೇಳುವವರ ಬರೆಹ ಮತ್ತು ವಾಣಿಗಳೂ ಇನ್ನಾದರೂ ತಿದ್ದುಪಾಟಾಗಲೆಂಬುದೇ ನಮ್ಮ ಸದಭಿಪ್ರಾಯ.

**೧೨ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ " ಕುರುಬರ ಮರುಳಸಿದ್ಧ "**

ಆದಿಶಂಕರಾಚಾರ್ಯರ ಕಾಲದ ಮೂಲ ರೇವಣಸಿದ್ಧರ ತರುವಾಯ ಶಿವಯೋಗಿಶಾಂತಮುತ್ಯಗಳ ಕರಕಂಜಾತರಾದ ಇನ್ನೊಬ್ಬ ಸಿದ್ಧರೇವಣಯ್ಯಂ



ಉಜ್ಜಯನಿಯಲ್ಲಿ
**ಮಾದಿಗ ಮರುಳಪ್ಪನ ಸಮಾಧಿ**

ಗಳು ಪ್ರಸಿದ್ಧರಾಗಿ ಮೆರದಂತೆ ಕ್ರಿ. ಶ. ಸು. ೧೧೮೭ರಲ್ಲಿ ಹುಟ್ಟಿರಬಹುದಾದ ಶಿರಿವಾಳ ಶಾಸನದಿಂದ ಗೊತ್ತಾಗುತ್ತದೆ. ಸಿದ್ಧರಾಮೇಶ್ವರ ವಚನವನ್ನು ಮುಂಚೆಯೇ ಹೇಳಿದವರೂ ಬಸವಣ್ಣನವರ ತಂದೆಯವರಾದ ಮಾದರಸರಿಗೆ ರಾಜಕಾರಣವನ್ನು ಬೋಧಿಸಿದವರೂ ಇವರೇ ಇರಬೇಕು. ಇವರು ಬಿಜ್ಜೊಳಿ ಕ್ಷೇತ್ರದಲ್ಲಿ ವಾಸಮಾಡಿದ್ದಂತೆ ಗೊತ್ತಾಗುತ್ತದೆ. ಇವರೂ ಮಹಿಮರಾಗಿದ್ದು ಕೊಂಡು ಕೊನೆಗೆ ರಂಭಾಪುರೀ ಜಗದ್ಗುರು ಪೀಠವನ್ನು ಆರೋಹಿಸಿರಬಹುದು.

ಈ ರೇವಣಸಿದ್ಧರಿಂದ ಶಿವದೀಕ್ಷೆ ಹೊಂದಿ ಕಲ್ಯಾಣದ ಬಸವಣ್ಣನವರ ಸಮಕಾಲದಲ್ಲಿ ಮಹಿಮೆ ತೋರಿದ ಕುರುಬ ಮರುಳಸಿದ್ಧನ ಚರಿತ್ರೆಯೊಂದು ಹಾಲುಮತಪುರಾಣದಲ್ಲಿ ಉಕ್ತವಾಗಿದೆ. ಆ ಚರಿತೆಯ ಸಾರವನ್ನು ವಿವರಿಸುವೆವು.

ಶ್ರೀ ರೇವಣಸಿದ್ಧರು ದಕ್ಷಿಣ ದೇಶಕ್ಕೆ ಸಂಚಾರ ಬಂದಾಗ ಸರಪೂರೆಂಬಲ್ಲಿ ಆದಿಗೌಡನ ಮಗನಾದ ಮೊದಲಿಯ ಮುದ್ದುಗೌಡನ ಪತ್ನಿ ಸುಗ್ಗಲದೇವಿಯ ಗರ್ಭವನ್ನು ಸ್ಪರ್ಶಿಸಿ ಶಿವಯೋಗಿ ಸಿದ್ಧರಾಮನು ಜನಿಸುವನೆಂದು ಆಶೀರ್ವದಿಸಿದಂತೆ ಸಿದ್ಧರಾಮನ ಜನನವಾಯಿತು. ಇವನು ಮೊದಲು ಮೂಕನಾಗಿದ್ದನು. ಇವನ ಸಮಕಾಲಿಕರಾದ ಎಕ್ಕಯ್ಯ ಜೋಗಯ್ಯ ಎಂಬ ಮಿತ್ರರೊಡನೆ ಇವನನ್ನು ಪಶುಪಾಲನೆಗಾಗಿ ತಂದೆ ತಾಯಿಗಳು ಕಳುಹಿಸುತ್ತಿರುತ್ತಾರೆ ಈ ಮೂಕ ಹುಡುಗಹೋದಲ್ಲೆಲ್ಲಾ ಕಲ್ಲು ಹೂಡಿ ಮಲ್ಲಯ್ಯನೆಂದು ಪೂಜಿಸುತ್ತಿರುತ್ತಾನೆ. ರೇವಣಸಿದ್ಧನು ಭಿಕ್ಷುಕ ವೇಷದಿಂದ ಒಮ್ಮೆ ಅಲ್ಲಿಗೆ ಬಂದು ಊಟಕ್ಕೆ ಕೇಳುತ್ತಾನೆ. ಆ ಹುಡುಗನು ಮನೆಗೆ ಬಂದು ಬುತ್ತಿಯನ್ನು ತೆಗೆದು ಕೊಂಡು ಹೋಗುವಷ್ಟರಲ್ಲಿ ರೇವಣಸಿದ್ಧನು ಮಾಯವಾಗುವನು ಹುಡುಗನು ವ್ಯಥೆ ಪಡುವನು. ಜಂಗಮವನ್ನು ಹುಡುಕಲು ಹೊರಟು ಮಾರ್ಗದಲ್ಲಿ ಶ್ರೀ ಶೈಲ ಯಾತ್ರೆಗೆ ಪ್ರಯಾಣಿಸುತ್ತಿದ್ದ ಕಾವಡಿಗರ ತಂಡದವರೊಡನೆ ಕೂಡಿ ಕೊಂಡು ಶ್ರೀ ಶೈಲವನ್ನು ಕಂಡು ಜಂಗಮವನ್ನು ಹುಡುಕಿ ಬೇಸತ್ತು ಒಂದು ಬಂಡೆಯ ಮೇಲೇರಿ ಪ್ರಾಣನೀಗಲು ಯತ್ನಿಸುವನು. ಆಗಲೇ ಜಂಗಮವು ಪ್ರತ್ಯಕ್ಷವಾಗಿ ತಾನೇ ಮಲ್ಲಯ್ಯನೆಂದೂ ಬುತ್ತಿಯನ್ನು ಕೇಳಿದವನು ತಾನೇ ಎಂತಲೂ ಆ ಹುಡುಗನನ್ನು ಸಂತೈಸಿ ಬುತ್ತಿಯನ್ನುಂಡು ಹುಡುಗನಿಗೆ "ಮರುಳ ಸಿದ್ಧ" ನೆಂದು ಹೆಸರಿಟ್ಟು ದಿವ್ಯಯೋಗಿಯಾಗೆಂದು ಹರಸಿ ಭೈರವನನ್ನು ಜೊತೆಮಾಡಿ ನಿನ್ನ ಮನಬಂದಲ್ಲಿ ತಪಸ್ಸು ಮಾಡೆಂದು ಕಳುಹಿಸುವನು. ಮರುಳಸಿದ್ಧನು ಕೂಗುಡ್ಡವೆಂಬಲ್ಲಿ ಕೋಡುಗಲ್ಲಿನ ಮೇಲೆ ತಪಸ್ಸುಮಾಡುವನು.

ಈ ಮರುಳಸಿದ್ಧನು ರೇವಣಸಿದ್ಧನೊಡನೆ ಕಲ್ಯಾಣಕ್ಕೆ ಹೋಗಿ ಬಸವಣ್ಣನವರನ್ನು ಕಂಡಂತೆ ಈ ಕೆಳಗಿನ ಪದ್ಯಗಳಿಂದ ತಿಳಿಯುತ್ತದೆ.

ನೀವು ಪಡೆಯೆ ನಿಮ್ಮ ಬಸವನ ಪ್ರಾಣವ ।
ನಾವು ನಮ್ಮಯ ಸತ್ತ ಕುರಿಯ ॥
ಪಾವಾಡವನು ಗೆದ್ದು ಊರಹೊಗುವೆನೆಂದು ।
ರೇವಣಸಿದ್ಧನಾಡಿದನು ॥ ೨೮ ॥

ಆಸಮಯದಿ ನುಡಿಯಿಸಗಿತ್ತು ನನ ಗೇದು ।
ಉಸುರಿತವ್ಮೊಳು ಮಾತನಾಡಿ ॥
ಬಸವದಂಡೇಶಗೆ ಅರುಹಬೇಕೆನುತಲಿ ।
ಹೊಸಪರಿಮಾತ ಹೇಳಿದರು ॥ ೨೯ ॥

ಹೊರಗೆ ಹಾಕಿಸಿಕೊಂಡು ಹೋದಂಥ ನಾಲ್ವತ್ತು ।
ಕುರುಬರು ಮರುಳಸಿದ್ಧೇಶ ॥
ವೆರಸಿ ಕಲ್ಯಾಣದ ಹೊರಬಾಗಿಲಲಿ ನಿಂದು ।
ವಿರಸವ ಮಾಡಿ ಸಿಲಿಸಿದರು ॥ ೩೦ ॥

ಸತ್ತ ಪಾವಾಡವ ಎತ್ತಿ ಪೋಗುವೆನೆಂದು ।
ಮಂತ್ರಿ ದ್ವಾರವ ಬಡರವರು ॥
ಕರ್ತೃರೇವಣಸಿದ್ಧ ಸಹವಾಗಿ ಬಂದಿದ್ದರು ।
ಉತ್ತರಿಲ್ಲವು ಕೇಳು ನಿಮಗೆ ॥ ೩೧ ॥

( ಹಾಲುಮತ ಪುರಾಣ. ಸಂ. ೫ )

ಇವುಗಳ ಸಾರಾಂಶವೇನೆಂದರೆ: - ಈ ಹಿಂದೆ ಕೋಡುಗಲ್ಲಿನ ಮೇಲೆ ಮರುಳಸಿದ್ಧನು ತಪಸ್ಸಿಗೆ ಕೂತಿದ್ದುದು ಸರಿಯಷ್ಟೇ! ಪದ್ಮಣ್ಣ ಮೊದಲಾದ ಕುರುಬರು ಮರುಳಸಿದ್ಧನ ಸುತ್ತಲೂ ಗುಂಪಾಗಿ ವಾಸಮಾಡಿಕೊಂಡಿರುತ್ತಾರೆ. ಒಂದು ದಿನ ಕಲ್ಯಾಣ ಪಟ್ಟಣದ ಅರಸಾದ ಬಿಜ್ಜಳನು ಮಂತ್ರಿಯಾದ ಬಸವಣ್ಣನೊಡನೆ ಮೃಗಯಾವಿಹಾರಕ್ಕೆಂದು ಆವಸಾಂತರಕ್ಕೆ ಬಂದು ಬಿಸಿಲಿನಿಂದ ಬಳಲಿದನು. ಆ ಸಮಯದಲ್ಲಿ ಪದ್ಮಣ್ಣ ಮೊದಲಾದ ಕುರುಬರು ಬಸವಣ್ಣನವರನ್ನೂ ಅರಸು ಬಿಜ್ಜಳನನ್ನೂ ಫಲಾಹಾರಗಳಿಂದ ಸಂತೋಷಪಡಿಸುವರು. ಇದರಿಂದಾಗಿ ಬಿಜ್ಜಳನು ಔತ್ಸಾಹದಿಂದ ಅವರೆಲ್ಲರನ್ನೂ ಕಲ್ಯಾಣಕ್ಕೆ ಕರೆದೊಯ್ದು ಅಲ್ಲಿ ವಾಸಮಾಡಿಸಿ ಸತ್ತ ಕುರಿಯನ್ನು ಮಾತ್ರ ಮಾರುವಂತೆಯೂ, ಹಾಲು ಮೊಸರು ಮುಂತಾದವುಗಳನ್ನು ಮಾರಿ ಜೀವನ ಸಾಗಿಸಬೇಕಾಗಿಯೂ ಅವರಿಗೆ ಆಜ್ಞಾಪಿಸಿರುವನು. ಆ ಕುರುಬರು ಹಾಗೆಂದೇ ಮಾಡುತ್ತಿರಲು ಒಂದು ದಿನ ದೊಡ್ಡದಾದ ಮುಂಗಾರಿ ಮಳೆಯು ಬಡಿತದಿಂದ ಸಾವಿರಾರು ಕುರಿಗಳು ಒಮ್ಮೆಲೇ ಸಾಯುವವು. ಅವೆಲ್ಲವನ್ನೂ ಒಮ್ಮೆಲೆ ಮಾರಲು ಸಾಧ್ಯವಿಲ್ಲದೆ ಹೋಗಿ ಒಟ್ಟಾರೆ ಹುಲ್ಲಿಗೆ ಹಾಕಿ ಸುಡಲು ಪ್ರಾರಂಭಿಸುವರು. ಈ ದುರ್ವಾಸನೆಯು ಕಲ್ಯಾಣದ ತುಂಬೆಲ್ಲಾ ವ್ಯಾಪಿಸಿ ಶರಣರಿಗೆ ಸಹನಾತೀತವಾಗುವುದು. ಶರಣರು

ಅರಸನಲ್ಲಿ ದೂರು ಹೇಳಿ ಎಲ್ಲಾ ಕುರುಬರನ್ನೂ ಕಲ್ಯಾಣದಿಂದ ಹೊರಗೆ ಹಾಕಿಸುವರು. ಇದರಿಂದ ಮನನೊಂದ ಕುರುಬರು ತಮ್ಮ ಮೊದಲಿನ ಆವಾಸಕ್ಕೆ ಬಂದು ಮರುಳಸಿದ್ಧನಿಗೆ ದೂರು ಹೇಳುವರು. ಆಗ ರೇವಣಸಿದ್ಧರೂ ಅಲ್ಲಿಗೆ ಬರುವರು. ಈರ್ವರೂ ಕುರುಬರನ್ನು ಪುನಃ ಕಲ್ಯಾಣದಲ್ಲಿ ಸೇರಿಸಲೇ ಬೇಕೆಂದು ನಿರ್ಧರಿಸಿ ಕುರುಬರ ತಂಡದೊಡನೆ ಕಲ್ಯಾಣಕ್ಕೆ ಧಾವಿಸುವರು.

ಅದೇ ಸಮಯದಲ್ಲಿ ಕಲ್ಯಾಣದಲ್ಲಿ ಒಂದು ಗೂಳಿಯು ಸತ್ತಿರುತ್ತದೆ. ಅದನ್ನು ದಫನಮಾಡಲು ಶರಣರೆಲ್ಲರೂ ವಾದ್ಯ ಸಮೇತವಾಗಿ ಅಗಸಿಯ ವರೆಗೆ ಬರುವರು. ಅಷ್ಟರಲ್ಲಿ ಮರುಳಸಿದ್ಧ ರೇವಣಸಿದ್ಧರ ಸವಾರಿಯು ಅಲ್ಲಿಗೆ ದಯಮಾಡಿಸುತ್ತದೆ. ಗೂಳಿಯನ್ನು ಹೂಳಲು ಇವರು ಅತಂಕಪಡಿಸುತ್ತಾರೆ. ಇಷ್ಟು ಜನ ಶರಣರಿದ್ದು ಇದೊಂದು ಗೂಳಿಯನ್ನು ಬದುಕಿಸಲು ಕಲ್ಯಾಣದ ಶರಣರಿಗೆ ಶಕ್ತಿಯಿಲ್ಲವೆ ? ಎಂದು ಕೇಳುವರು. ಶರಣರು ಕುಪಿತರಾಗುವರು. ಬಸವಣ್ಣನವರಿಗೂ ದೂರು ಹೇಳುವರು. ಶರಣರ ಮಾತು ಏನೂ ಪ್ರಯೋಜನಕ್ಕೆ ಬರುವುದಿಲ್ಲ. ಮಹಾತ್ಮರಾದ ರೇವಣಸಿದ್ಧರ ಅಪ್ಪಣೆಯಂತೆ ನಡೆಯಿರೆಂದು ಬಸವಣ್ಣನವರ ಉತ್ತರವಾಗುವುದು. ಆಗ ಶರಣರೆಲ್ಲರೂ ಇವರನ್ನು ಪರೀಕ್ಷಿಸಬೇಕೆಂದು ನಿರ್ಧರಿಸಿ ಸತ್ತಿದ್ದ ಒಂದು ಟಗರನ್ನು ಗೂಳಿಯ ಬಳಿಹಾಕಿ ನಿಮ್ಮಲ್ಲಿ ಮಹಿಮೆಯಿದ್ದರೆ ಇವನ್ನು ಬದುಕಿಸಿ ವಿಜಯ ಸಂಪಾದಿಸಿರೆಂದು ಪಂಥವಾದವನ್ನು ನುಡಿಯುವರು. ಮರುಳಸಿದ್ಧ ರೇವಣಸಿದ್ಧರು ಅವೆರಡಕ್ಕೂ ಜೀವದಾನ ಮಾಡಿ ಕಲ್ಯಾಣದಲ್ಲಿ ಮೆರೆದು ಕುರುಬರಿಗೆ ಮತ್ತೆ ಅಲ್ಲಿಯೇ ಆ ವಾಸವನ್ನು ಮಾಡಿಕೊಡುವರು. ಮೇಲಿನ ಪದ್ಯಗಳು ಈ ಚರಿತ್ರೆಯನ್ನೇ ಹೇಳುವವು.

ಕುರುಬ ಬೆಡಗಿನ ಈ ಮರುಳಸಿದ್ಧನು ಕಲ್ಯಾಣಕ್ಕೆ ಹೋದಾಗ ಅಲ್ಲಿಯ ಶರಣರಲ್ಲಿ "ಮರುಳಶಂಕರ" ಎಂಬೊಬ್ಬ ಶರಣಸಿದ್ಧಂತೆ ಹಾಲುಮತ ಪುರಾಣದ ೫ನೆಯ ಸಂಧಿ ೫೧ನೆಯ ಪದ್ಯದಿಂದ ಗೊತ್ತಾಗುತ್ತದೆ. ಈ ಮುದ್ದುಗೌಡನ ಮಗನಾದ ಮರುಳಸಿದ್ಧನಿಗೆ ರೇವಣಸಿದ್ಧರು ವೀರಶೈವ ದೀಕ್ಷೆಕೊಟ್ಟು ಕುರುಬ ಅಥವಾ ಹಾಲುಮತದ ಧರ್ಮಾಚಾರ ರಕ್ಷಣೆಯ ಗುರುತ್ವವನ್ನು ಆತನಿಗೆ ಅನುಗ್ರಹಿಸಿದಂತೆ ಈ ಪುರಾಣದಿಂದ ತಿಳಿಯುತ್ತದೆ. ಈ ಮರುಳಸಿದ್ಧನಿಗೆ ರೇವಣಸಿದ್ಧರು ಶಿವದೀಕ್ಷೆಕೊಡುವಾಗ ಪಂಚಕಲಶಗಳನ್ನು ಸ್ಥಾಪಿಸುತ್ತಾರೆ.

ಬಂದು ರೇವಣಸಿದ್ಧ ನಿಂದು ದೇವಾಲಯದಿ ।
ಕಂದ ಮರುಳಸಿದ್ಧ ಗೊಲಿದು ॥
ಚಂದದಿ ಪಂಚಕಲಶವನಿಕ್ಕಿ ದೀಕ್ಷೆಯಾ ।
ನಂದದಿಂದಲಿ ಮಾಡುವುದಕೆ                    ॥ ೯೭ ॥

ನಾಲ್ಕು ಮೂಲೆಯ ಆಚಾರ್ಯರು ಬಂದರು ।
ವಾಕ್ಯ ಪುರುಷ ರೇವಣ್ಣ ॥ ೧೦೨ ॥
ಮರುಳಸಿದ್ಧಯ್ಯನೂ, ಏಕೋರಾಮಿತಂದೆ ।
ವರ ಪಂಡಿತಾರಾಧ್ಯರಿವರು ॥
ವೆರಸಿ ದೀಕ್ಷೆಯ ಕೊಟ್ಟು.... ... . ............ ... ॥ ೧೦೩ ॥

( ಹಾಲುಮತ ಪುರಾಣ. ಸಂ ೫ )

ಇಲ್ಲಿ ಮರುಳಸಿದ್ಧನ ದೀಕ್ಷೆಯಾಗುವಾಗ ಪಂಚಕಲಶಗಳಲ್ಲಿ ಮರುಳಸಿದ್ಧನ ಹೆಸರಿನ ಕಲಶವು ಪ್ರತ್ಯಕ್ಷವಾಗಿರುವುದರಿಂದಲೂ, ದೇವಕವಿಯು ಮರುಳಸಿದ್ಧ ಕಾವ್ಯದಲ್ಲಿ ಮರುಳಸಿದ್ಧನ ದೀಕ್ಷಾಕಾಲದಲ್ಲಿ ರೇವಣಸಿದ್ಧರು ಈ ಪಂಚಕಲಶಗಳನ್ನು ಸ್ಥಾಪಿಸಿರುವಂತೆ ಬರೆದಿರುವುದರಿಂದಲೂ, ಈ ಎಲ್ಲಾ ಮರುಳಸಿದ್ಧರಿಗಿಂತಲೂ ಭಿನ್ನರಾದ ಮಹಾಚಾರ್ಯ ಮರುಳಸಿದ್ಧರೊಬ್ಬರು ಬಹು ಪ್ರಾಚೀನಕಾಲದಲ್ಲಿದ್ದರೆಂದು ಸ್ಪಷ್ಟವಾಗುತ್ತದೆ. ಕಲ್ಯಾಣದ ಬಸವಣ್ಣನವರ ಕಾಲ ಕ್ರಿ. ಶ. ೧೧೬೩ ಎಂದು ಡಾ|| ಚಿಲಕೂರಿ ನಾರಾಯಣರಾವು ಅಭಿಪ್ರಾಯ ಪಡುವರು. ಕ್ರಿ. ಶ. ೧೦೭೨ರಲ್ಲಿದ್ದ ಶ್ರೀಕರ ಭಾಷ್ಯದ ಶ್ರೀಪತಿ ಪಂಡಿತಾರಾಧ್ಯರು ಬಸವಣ್ಣನವರಿಗಿಂತ ೯೧ ವರ್ಷಕ್ಕೆ ಹಿಂದಿನವರು. ಆದುದರಿಂದ ಇವರು ಸ್ತುತಿಸಿರುವ ರೇವಣಸಿದ್ಧ ಮರುಳಸಿದ್ಧರು ಬಸವಣ್ಣನವರ ಕಾಲದಲ್ಲಿದ್ದ ರೇವಣಸಿದ್ಧ ಮರುಳಸಿದ್ಧರಿಗಿಂತ ಬೇರೆಯಾದವರೆಂದು ತಿಳಿಯಬೇಕಾಗುತ್ತದೆ. ಶ್ರೀಕರ ಭಾಷ್ಯವು ಬಸವಣ್ಣನವರ ಜನನಕ್ಕೆ ಪೂರ್ವದಲ್ಲಿ ಹುಟ್ಟಿರುವುದಾದರೂ ಬೆಂಗಳೂರಿನ ಹಯವದನರಾಯರು ಅದರಲ್ಲಿ ಮಧ್ವಶಬ್ದವನ್ನು ಸೇರಿಸಿ ಇತ್ತೀಚಿನದನ್ನಾಗಿ ಮಾಡಲು ಪ್ರಯತ್ನಿಸಿದ್ದಾರೆಂದು ಡಾ|| ಚಿಲಕೂರಿ ನಾರಾಯಣರಾವು ಆಕ್ಷೇಪಿಸಿದ್ದಾರೆ.

ಹೀಗೆಯೇ ಅನೇಕ ಕಾವ್ಯಗಳನ್ನು ಪರಿಶೀಲಿಸುತ್ತ ಹೋದರೆ ಎಲ್ಲಾ ಪಂಗಡಗಳಲ್ಲಿಯೂ ಒಬ್ಬೊಬ್ಬ ಮರುಳಸಿದ್ಧರ ಹೆಸರಿನವರು ಸಿಗುವುದು.

ಪ್ರಸ್ತುತ ದೇವಕವಿಯ ಮರುಳಸಿದ್ಧ ಕಾವ್ಯದಲ್ಲಿ ವರ್ಣಿತವಾಗಿರುವ ಲೀಲೆಗಳು ಆಚಾರ್ಯ ಮರುಳಸಿದ್ಧನಿಗೆ ಕೆಲವು ಸಂಬಂಧಿಸುವವಾದರೂ ಚರಿತ್ರನಾಯಕ ಮರುಳಸಿದ್ಧನು ಮಾತ್ರ ಮೂಲ ಆಚಾರ್ಯನಲ್ಲವೆಂಬುದು ಮರುಳಸಿದ್ಧರ ಇಂದಿನವರೆಗೆ ದೊರೆತಿರುವ ಆಧಾರಗಳ ಮೇಲಿಂದ ಇತಿಹಾಸಜ್ಞರಿಗೆ ಸ್ಪಷ್ಟವಾಗಿದೆ. "ಮರುಳಸಿದ್ಧ ಕಾವ್ಯದಲ್ಲಿ ಬಂದಿರುವ ಮಾದಿಗ ಮರುಳಸಿದ್ಧನು ಉಜ್ಜಯಿನೀ ಪೀಠದ ಗುರುಗಳಾದ ಸಿದ್ಧಮಲ್ಲಸ್ವಾಮಿಗಳ ವರದಿಂದ ಹುಟ್ಟಿದ ಸಿಂದೋಗಿಯ ಗೌಡನ ಮನೆ ಆಳು ಮಾದಿಗ ಕೂಚಿಮಾರನ ಮಗನೆಂಬುದೇ ಸತ್ಯಾಂಶ." "ಮರುಳಾರಾಧ್ಯ ವಿಜಯ" ಸಂಧಿ ೧೮. ಪದ್ಯ ೩೨ ರಿಂದ ೫೧ ರವರೆಗೆ ಈ ವಿಷಯವಿದೆ.

## ಮೂದಾಪುರದ ಮುರುಳಸಿದ್ಧ

ತರಿಕೆರೆ ತಾಲೂಕು ಉಡವ ಗ್ರಾಮದ ಮಠದ ಪಟ್ಟದ ಶ್ರೀ ಶಿವಲಿಂಗ ಶಿವಾಚಾರ್ಯರಿಂದ ದೊರೆತ "ಮುರುಳಸಿದ್ಧೇಶನ ಪವಾಡ" ಎಂಬ ತಾಳ ವೋಲೆ ಗ್ರಂಥದಿಂದ ಈ ಕೆಳಗಿನ ವಿಷಯವನ್ನು ಬರೆಯಲಾಗಿದೆ.

ಪ್ಲವಸಂವತ್ಸರ ಮಾಘ ಬ॥ ೧ ಶುಕ್ರವಾರ ಗ್ರಂಥವನ್ನು ಪ್ರಾರಂಭ ಮಾಡಿದಂತೆ ಉಲ್ಲೇಖವಿದೆ. ಆರಂಭದಿಂದ ಕೊನೆಯವರೆಗೂ ಸಾಂಗತ್ಯದ ದಾಟಿಯಲ್ಲಿಯೇ ಈ ಕಾವ್ಯ ನಾಗಿದೆ.

ಆರಂಭದಲ್ಲಿ ಶ್ರೀಶೈಲ ಮಲ್ಲೇಶನ ಸ್ತುತಿಯಿದೆ. ಕವಿಯು ೧ನೆಯ ಸಂಧಿ ೬-೭ನೆಯ ಪದ್ಯಗಳಲ್ಲಿ "ಶ್ರೀಶೈಲನವಾಕ್ಯ" ಎಂತಲೂ, ೫ನೆಯ ಸಂಧಿ ೫ನೆಯ ಪದ್ಯದಲ್ಲಿ "ನವರಸಭರಿತ ಶ್ರೀಶೈಲನ ವೇದವಾಕ್ಯ" ಎಂತಲೂ, ಇದೇ ಸಂಧಿ ೯೮ ನೆಯ ಪದ್ಯದಲ್ಲಿ "ತರಣಿ ಸಂತತಿ ವೀರಶೈವ ಶ್ರೀಶೈಲನು ಗುರು ಮುರುಳೇಶ ಮೆರೆದುದ .......... ....ಮುಗಿಸಿದ ಉದ್ಧರಿಸಿದ ಭಯಭಕ್ತಿ ಯೊಳು" ॥ ಎಂತಲೂ ಹೇಳಿರುವುದರಿಂದ ಇವನ ಹೆಸರು ಶ್ರೀಶೈಲ ಕವಿ ಎಂದಿರಬೇಕೆಂದು ತಿಳಿಯುತ್ತದೆ. ಅಲ್ಲದೆ ವೀರಶೈವನಾಗಿದ್ದನೆಂದೂ ಸ್ಪಷ್ಟವಾಗುತ್ತದೆ.

ಈ ಕವಿಯು ಆರಂಭದಲ್ಲಿ ಗುರುಲಿಂಗಾರಾಧ್ಯರನ್ನೂ, ೧ನೆಯ ಸಂಧಿಯ ಆರಂಭದಲ್ಲಿ "ಕರುಣಿಸು ತೊಂಡೆಯ ಕೆರೆಯ ಪಂಶಾಧೀಶ, ಚರ ರೂಪ ಬಸವಲಿಂಗೇಶ" (ಪದ್ಯ ೩) ಎಂದು ಬಸವಲಿಂಗ ಸ್ವಾಮಿಯವ ರನ್ನೂ ಸ್ತುತಿಸಿರುವುದರಿಂದ ಕವಿಯ ವಿದ್ಯಾ ಗುರುವು ಗುರುಲಿಂಗಾರಾಧ್ಯ ರೆಂತಲೂ, ತಾನು ಜನ್ಮಿಸಿದ ವಂಶದ ಗುರುಗಳು ಬಸವಲಿಂಗ ಸ್ವಾಮಿ ಗಳೆಂತಲೂ ತಿಳಿಯುತ್ತದೆ. ಇದರಿಂದ ಈ ಕವಿಯು ಜಂಗಮನಾಗಿರಬೇ ಕೆಂದು ಸ್ಪಷ್ಟವಾಗುತ್ತದೆ.

ನಾಲ್ಕನೆಯ ಸಂಧಿ ೯ನೆಯ ಪದ್ಯದಲ್ಲಿ "ವರಗುರು ಮೂದಾಪುರದ ಮುರುಳಸಿದ್ಧೇಶನ ಮಹಾತ್ಮ್ಯದುನ್ನತಿಯ ಕರವ ಮುಗಿದು ಬಿನ್ನವಿಸುವೆ" ಎಂದು ಹೇಳಿರುವುದರಿಂದ ಈ ಮುರುಳಸಿದ್ಧನು ಹುಟ್ಟಿದೂರು ಮೂದಾಪುರ ವೆಂತಲೇ ತಿಳಿಯುವುದು. ಸಧ್ಯಃ ಮೂದಾಪೂರದಲ್ಲಿ ಇವರ ತೋರುಗದ್ದಿಗಿಯ ಮಹಿಮೆ ನಡೆಯುತ್ತಿದ್ದು ಅದರ ವ್ಯವಸ್ಥೆಯನ್ನು ಉಡವದ ಶ್ರೀ ಶಿವಲಿಂಗ ಸ್ವಾಮಿಗಳವರೇ ನೋಡಿಕೊಳ್ಳುತ್ತಿದ್ದರಾಗಿ ತಿಳಿಯುತ್ತದೆ.

ಲೀಲಾವಳಿಗಳು:— ಈಶ್ವರಾಜ್ಞೆಯಿಂದ ಕೈಲಾಸದ ರೇವಣಸಿದ್ಧನು ಮರ್ತ್ಯಕ್ಕೆ ಮುರುಳಸಿದ್ಧನಾಗಿ ಅವತರಿಸಿ "ಮಹಾದೇವಿ ಅಕ್ಕಗೆ" ಮಗನಾಗಿ ಜನಿಸುವನು. (ಸಂ ೧—ಪುಟ ೬ ಪದ್ಯ ೫೨) (ಮಹಾದೇವಿಯಕ್ಕನು ಬಾಲ್ಯದ ಪ್ರಾಯದಲ್ಲಿಯೇ ವಿರಾಗಿಣಿಯಾಗಿ ಸಂಸಾರತ್ಯಾಗಿಯಾಗಿರುವುದ

ರಿಂದ ಈ ಮರುಳಸಿದ್ಧನನ್ನು ಪಡೆದ ಮಹಾದೇವಿ ಅಕ್ಕನು ಬೇರೊಬ್ಬಳಿರ ಬೇಕು. )

ಈ ಮೂದಾಪುರದ ಮರುಳಸಿದ್ಧನು ಬಾನುವಳ್ಳಿ ಎಂಬಲ್ಲಿಗೆ ಬಂದು ಒಬ್ಬ ಭಕ್ತನಿಗೆ ಪ್ರಾಣದಾನ ಮಾಡುವನು. ಬುಕ್ಕಾಂಬುಧಿಯಲ್ಲಿ "ಗುರು ಸಮಾಧಿಯ ಸಿದ್ಧೇಶ್ವರ" ಎಂಬವರಲ್ಲಿ ಕಟ್ಟಿಗೆಹೊತ್ತು ಸೇವೆಮಾಡುವನು. ಕಪಗದ ಗ್ರಾಮುಕ್ಕೆ ಬಂದು ಒಬ್ಬ ಸತ್ತ ಹೆಣ್ಣುಮಗಳನ್ನು ಬದುಕಿಸುವನು. ಅಲ್ಲಿಯೇ ಕೆಲವರಿಗೆ ಅಂಟಿಕೊಂಡಿದ್ದ ಭೂತ ಪಿಶಾಚಗಳನ್ನು ಬಿಡಿಸುವನು. ( ೨ ಸಂಧಿ )

ಅಲ್ಲಿಂದ ಶ್ರೀಶೈಲಕ್ಕೆ ಪ್ರಯಾಣಿಸಿ ಯಾತ್ರೆಮಾಡುವನು. (೩ ಸಂಧಿ) ಅಲ್ಲಿಂದ ಆ ಸಂದಿಗ್ರಾಮಕ್ಕೆ ಬಂದು ಅಲ್ಲಿಯ ಆರಾಧ್ಯರಿಗೆ ಮಹಿಮೆ ತೋರಿ ಮುದಿಗೆರೆಗೆ ಬರುವನು. ಅಲ್ಲಿ ಪ್ರಸವವೇದನೆಯಿಂದ ಸತ್ತ ಬ್ರಾಹ್ಮಣಿಯೊಬ್ಬ ಳನ್ನು ಭಸ್ಮಲೇಪದಿಂದ ಬದುಕಿಸುವನು. ಗರಚೆಯೆಂಬಲ್ಲಿ ಹರಿಯುತ್ತಿದ್ದ ಹೊಳೆಯನ್ನು ದಾಟುವನು. ಬಾಣನೆಂಬ ಯತಿಗೆ ವಾಸಸ್ಥಾನವಾಗಿದ್ದ ಬಾಣಾವರಕ್ಕೆ ಬಂದು ಅಲ್ಲಿ ಒಬ್ಬ ಹೆಣ್ಣುಮಗಳಿಗೆ ರತಿಕಾಮ ಎಂಬ ಪಿಶಾ ಚವು ಹಿಡಿದಿರಲು ಅದನ್ನು ಬಿಡಿಸುವನು. ಅಲ್ಲಿಂದ ನಾರಾಯಣಪುರಕ್ಕೆ ಹೋಗಿ ಚವಡಿಗೊಂಡನೆಂಬವನ ಸತ್ತ ಹೆಂಡತಿಯನ್ನು ಬದುಕಿಸಿ ಅಲ್ಲಿಂದ ಸೊಕ್ಕೆ ಗ್ರಾಮಕ್ಕೂ ಗೌಡನಕಟ್ಟೆ ಗ್ರಾಮಕ್ಕೂ ಹೋಗಿ ಮಹಿಮೆ ತೋರು ವನು ( ಸಂ ೪).

ಅಲ್ಲಿಂದ ಉಜ್ಜಯಿನಿಗೆ ಯಾತ್ರಾರ್ಥಿಯಾಗಿ ತೆರಳುವನು "ವಿನಯ ದಿಂದಲಿ ಉಜ್ಜಯನಿನೋಳ್ಪೆನೆಂದೆನುತಲಿ ಹೋಗುವೆಡೆಯೊಳು" ( ಸಂ ೫. ಪ ೮ ) "ಉಜ್ಜನಿಲಿಂಗದ ದರುಶನಮಾಡಿ" ( ಸಂ ೫. ಪ ೨೧ ) ಎಂದು ಇಲ್ಲಿ ಕವಿಯು ಸ್ಪಷ್ಟಮಾಡಿರುವುದರಿಂದ ಈ ಮಹಿಮಾ ಶಾಲಿಯಾದ ಮೂದಾಪುರದ ಮರುಳಸಿದ್ಧನು ಇತ್ತೀಚೆಯವನಾಗಿರಬೇಕೆಂದು ತಿಳಿಯುತ್ತದೆ.

ಕಾವ್ಯದ ಕೊನೆಯಲ್ಲಿ ಹುವ್ವಿನಹಳ್ಳಿ ಚರಂತಪ್ಪನವರ ಪಾದಕ್ಕೆ ಕುಡುಗ ಲೂರು ಓದಿಸುವ ಶಾಂತಬಸಪ್ಪನು ಬರೆದುಕೊಟ್ಟದ್ದು ಎಂದಿದೆ.

ವಿಶೇಷ:— ಕಾವ್ಯ ಸರಿಯಾದ ಶೈಲಿಯಲ್ಲಿಲ್ಲ. ಚರಿತೆ ಧಾರಾರೂಪ ವಿಡಿದಿಲ್ಲ. ಸಪ್ರೌಢಿಯನ್ನು ಹೆಣೆಯಲು ಕವಿಗೆ ಸಾಮರ್ಥ್ಯವಿಲ್ಲ. ಆದರೆ ಮೂಲ ಮರುಳಸಿದ್ಧನಿಗಿಂತ ಬೇರೆ ಮರುಳಸಿದ್ಧರು ಕೆಲವರಿದ್ದರೆಂಬ ಬಗ್ಗೆ ಈ ಸಾಂಗತ್ಯವೂ ಐತಿಹಾಸಿಕರಿಗೆ ಬೇಕಾದುದೇ ಸರಿ.

# ದೇವಕವಿಯ ಮರುಳಸಿದ್ಧನು ಆಚಾರ್ಯ ಮರುಳಸಿದ್ಧನಲ್ಲ

ಲೇ|| ಉಭಯ ಸಾಹಿತ್ಯ ವಿದ್ವಾನ್ ವೇ|| ಕವೀಂದ್ರ, ಅಮರನಾಥ ಶಾಸ್ತ್ರಿಗಳು
ಬೃಹನ್ಮಠ ಬನ್ನಿಕೊಪ್ಪ.

ಶ್ರೀ ಪರಶಿವ ನಿರ್ಮಿತವಾದೀ ಭರತಖಂಡದಲ್ಲಿ ಪರಿಶೋಭಿಸುವ ಸಕಲ ಮತಗಳಲ್ಲಿ ವೀರಶೈವ ಮತವು ಪರಮ ಉದಾತ್ತ ತತ್ತ್ವಗಳಿಂದ ತುಂಬಿದೆ. ಅಂತೆಯೇ ಪಾರಮೇಶ್ವರಾಗಮದಲ್ಲಿ "ನವೀರಶೈವ ಸದೃಶಂ "ಮತಮಸ್ತಿಜಗತ್ರಯೇ" "ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜದಾಯುಕಂ|| ಎಂದು ಘಂಟಾಘೋಷವಾಗಿ ಸಾರುತ್ತಿರುವದು. ಇದಲ್ಲದೆ ಋಗಾದಿವೇದಗಳೂ, ಈಶಾವಾಸ್ಯಾದ್ಯುಪನಿಷತ್ತುಗಳೂ, ಶ್ರೀಕರಾದಿ ಭಾಷ್ಯಗಳೂ, ಸಿದ್ಧಾಂತಶಿಖಾಮಣ್ಯಾದಿ ಧರ್ಮಗ್ರಂಥಗಳೂ, ಈ ಮತದ ಸ್ವರೂಪವನ್ನು ಚನ್ನಾಗಿ ಪ್ರತಿಪಾದಿಸುತ್ತಿರುವವು; ಮತ್ತು ವ್ಯಾಸ ಮಹರ್ಷಿಗಳು ತಮ್ಮಿಂದ ರಚಿಸಲ್ಪಟ್ಟಿರುವ ಸ್ಕಂಧ ಪುರಾಣ ಶಿವಪುರಾಣ ಲಿಂಗ ಪುರಾಣಾದಿಗಳಲ್ಲಿ ಈ ಮತದ ಸಿದ್ಧಾಂತವನ್ನು ಸರಿಯಾಗಿ ಪ್ರತಿಪಾದಿಸಿರುವರು. "ರಿಲಿಜಿಸ್‌ಕ್ವೆಸ್ಟ್ ಆಫ್ ಇಂಡಿಯಾ" ಎಂಬ ಗ್ರಂಥದಲ್ಲಿ ಜೆ, ಎನ್, ಫಾರ್ಕುಹಾರ್ ಎಂ. ಏ ಡಿ. ಲಿಟ್. ಎಂಬವರು ವೀರಶೈವರ ಚರಿತ್ರೆಯನ್ನು ಕೊಟ್ಟಿರುತ್ತಾರೆ. ಪ್ರತಿಯುಗದಲ್ಲಿ ಶಿವನಮುಖಗಳಿಂದ ಉದ್ಭವಿಸಿದ ಏಕೋರಾಮ, ಪಂಡಿತಾರಾಧ್ಯ, ರೇವಣಾರಾಧ್ಯ, ಮರುಳಾರಾಧ್ಯ ಮತ್ತು ವಿಶ್ವಾರಾಧ್ಯ ಎಂಬ ಐದುಜನ ಯತಿಗಳಿಂದ ಈ ಮತವು ಸ್ಥಾಪಿಸಲ್ಪಟ್ಟಿತು. ಇವರು ಬಹಳ ಪ್ರಾಚೀನಕಾಲದವರು, ಎಂದೂ ಡಾ|| ಸರ್‌ಭಾಂಡಾರಕರರು "ಶೈವೀಝಂ ಅಂಡ್ ವೈಷ್ಣವೀಝಂ" ಎಂಬ ಗ್ರಂಥದಲ್ಲಿ ಶ್ರೀ ಮತ್ಪಂಚಾಚಾರ್ಯರು ಬಹುಪುರಾತನರು, ಎಂದೂ ಬರೆದಿರುವದನ್ನು ನೋಡಿದರೆ ಈ ಕೃತಿಗಳಿಂದ ಪರಶಿವನ ಪಂಚಮುಖಗಳಿಂದುದ್ಭವಿಸಿದ ಪಂಚಾಚಾರ್ಯರಿಂದ ಈ ಮತವು ಸ್ಥಾಪನವಾಯಿತೆಂದೂ ಪಂಚಾಚಾರ್ಯರು ಯತಿಗಳೆಂದೂ, ಬಹು ಪುರಾತನರೆಂದೂ, ಗೋಚರವಾಯಿತು. ಕೈಲಾಸದಲ್ಲಿ ಶಿವಮುಖದಿಂದ ಚತುರ್ಯುಗಗಳಲ್ಲಿ ಶಿವಲಿಂಗ ಮುಖಗಳಿಂದವತರಿಸಿದುವರೆಂಬುದದಕ್ಕೆ ಸ್ವಾಯಂಭುವಾಗಮ, ಸುಪ್ರಭೋಧಾಗಮ, ಪಾಶುಪತಾದಿತಂತ್ರಗಳು, ವೀರಶೈವೋಪನಿಷದಾದ್ಯುಪನಿಷತ್ತುಗಳೂ, ಪ್ರಮಾಣಗಳಾಗಿರುವವು. "ತ್ವಂದೇವೇಷು ಬ್ರಾಹ್ಮಣಃ" ಎಂದು ಸಾಮವೇದ ಪ್ರಪದ ಮಂತ್ರವು ಪರಶಿವನ ಪರವಾಗಿ ಸಾರುತ್ತಿರುವದು. ಶಿವನೇ ಬ್ರಾಹ್ಮಣನಾದ ಮೇಲೆ,

'ಬ್ರಾಹ್ಮಣೋಸ್ಯ ಮುಖಮಾಸೀತ್" ಎಂದು ಸಾರುವ ಪುರುಷಸೂಕ್ತೋಕ್ತಿಯಂತೆ ಶಿವನ ಮುಖದಿಂದ ಜನಿಸಿರುವ ಪಂಚಾಚಾರ್ಯರೂ ಬ್ರಾಹ್ಮಣರಾಪರು. ಬ್ರಾಹ್ಮಣ ಲಕ್ಷಣವನ್ನು ಗೌತಮಾದಿ ಸ್ಮೃತಿಗಳು ಮುಕ್ತಕಂಠದಿಂದ ಬೋಧಿಸುತ್ತವೆ. ಹೀಗಿದ್ದು ವೀರಶೈವ ಮತಸ್ಥಾಪಕ ಪಂಚಾಚಾರ್ಯರಲ್ಲಿ ಒಬ್ಬರಾದ ಉಜ್ಜಯಿನಿಯ ಮರುಳಸಿದ್ಧರ ವಿಷಯಕ್ಕೆ ದೇವಕವಿಕೃತ " ಮರುಳಸಿದ್ಧ ಕಾವ್ಯ" ವೆಂಬ ನೂತನ ಕಾವ್ಯವು ಉದಯವಾಗಿ ಕರ್ನಾಟಕದಲ್ಲಿ ತಾಂಡವವಾಡಲಿಕ್ಕೆ ಹತ್ತಿದೆ. ಶಿವಕವಿಗಳಲ್ಲಿ ಇಂದಿನವರೆಗೂ ದೇವಕವಿಯ ಹೆಸರನ್ನೇ ಕೇಳಿಲ್ಲ. ಈ ದೇವಕವಿಯ ಕಾವ್ಯವನ್ನು ಬೆಂಗಳೂರಿನ ತರುಣಸಾಹಿತಿಗಳಾದ ಶ್ರೀ ಅ, ನ, ಕೃಷ್ಣರಾಯರು ಹೇಗೆ ಶೋಧಿಸಿದರೋ ತಿಳಿಯದು. ಈ ಕಾವ್ಯದಲ್ಲಿ ರಸಭಂಗವು ಪ್ರಾಸರಹಿತತ್ವವು ವ್ಯಾಕರಣ ವಿರುದ್ಧ ಪ್ರಯೋಗಗಳು ಅನಂತ ಇರುವವು. ಅಂತೆಯೇ ಆ. ವಿ. ಬ, ಶಿವಮೂರ್ತಿ ಶಾಸ್ತ್ರಿಗಳು " ಮರುಳಸಿದ್ಧಕಾವ್ಯವಿಮರ್ಶ " ಎಂಬ ಚಿಕ್ಕ ಲೇಖದಲ್ಲಿ ಸಾಹಿತ್ಯದೃಷ್ಟಿ, ಧಾರ್ಮಿಕ ದೃಷ್ಟಿ, ಇತಿಹಾಸದೃಷ್ಟಿ, ಈ ಮೂರು ದೃಷ್ಟಿಗಳಿಂದ ವಿಚಾರಿಸಿರುವರು. ಎರಡು ದೃಷ್ಟಿಗಳ ವಿಚಾರವು ಯೋಗ್ಯವದೆ. ದಾವಣಗೇರಿಯಲ್ಲಿ ಹೊರಡುವ " ಸನ್ಮಾರ್ಗದರ್ಶಕ " ವಾರಪತ್ರಿಕೆಯಲ್ಲಿ " ದೇವಕವಿಯ ಮರುಳಸಿದ್ಧ ಕಾವ್ಯದ ಖಂಡನೆ " ಎಂಬ ಲೇಖವನ್ನು ಗುರುಕವಿಬಾಲಚಂದ್ರ ಪದವೀಧರರಾದ ಶಿವಯ್ಯನವರು ಹಿರೇಮಠ ಬನ್ನಿಕೊಪ್ಪ ಹೆಡ್ಡಮಾಸ್ತರ ಕವಲೂರು ಇವರು ಪ್ರಕಟಿಸಿರುವರು ಅದರಿಂದ ಶ್ರೀ ಅ, ನ, ಕೃಷ್ಣರಾಯರು ತೃಪ್ತರಾಗಿರುವರೋ ಇಲ್ಲವೋ ? ಇನ್ನು ಹೆಚ್ಚಾಗಿ ತೃಪ್ತರಾಗಲೆಂದು ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಕೃಪಾಪೋಷಿತ ವೀರಶೈವ ಧರ್ಮಾಲಯ ಸಂಸ್ಥೆಯವರು " ಮರುಳಸಿದ್ಧಾಂಕ " ವೆಂಬ ಪ್ರಕಟನೆ ಹೊರಡಿಸಿದ್ದು ನೋಡಿದರೆ ಯಾವ ಆಸ್ತಿಕನಿಗೆ ಆನಂದವಾಗಲಿಕ್ಕಿಲ್ಲ ! ಇಂಥ ಅಬದ್ಧ ಕಾವ್ಯಗಳನ್ನು ಖಂಡಿಸುವದೇ ಪಂಡಿತರ ಧರ್ಮವು. ದೇವಕವಿಯ ಕಾವ್ಯದಲ್ಲಿ ಮೂಲ ಮತಾಚಾರ್ಯ ಮರುಳಸಿದ್ಧನು ಅಸ್ಪೃಶ್ಯನಾದರೆ ವೇದಾಗಮೋಪನಿಷದ್ಬೃಹ್ಮದಿಗಳ ಗತಿಯೆಂತು ? ದೀಕ್ಷಾಶಿಕ್ಷಾ ಮೋಕ್ಷಗುರುವೆಂತು ? ಋಷಿಛಂದೋದೇವತಾದಿವಿಷಯ ವಿವೇಚನವೆಂತು? ಆಸ್ತಿಕಮಹಾಶಯರು ಅವಶ್ಯವಾಗಿ ವಿಚಾರಿಸಬೇಕಲ್ಲವೇ ? ದ್ವಾಪರಯುಗದಲ್ಲಿ ಸ್ರಿಯಾಶ್ರಮ ನಿವಾಸಿ ದಧೀಚಿ ಮಹರ್ಷಿಗೆ ದಾರುಕಾಚಾರ್ಯರೆಂಬ ಹೆಸರಿನ ಗುರುಗಳಾದವರೂ ೨೮ ಜನಯೋಗಾಚಾರ್ಯರ ಮಾಲಿಕೆಯಲ್ಲಿ ಸೇರಿದವರೂ, ಕಲಿಯುಗದಲ್ಲಿ ಕುಲ್ಯಪಾಕ ಕ್ಷೇತ್ರ ನಿವಾಸಿದೇವನಂದನ ಮಹಾರಾಜನ ಸತ್ವ ಪರೀಕ್ಷಿಸಿ ಬೋಧಿಸಿದವರೂ, ಉಜ್ಜಯಿನೀ ಮಹಾಕ್ಷೇತ್ರದಲ್ಲಿ ಸದ್ಧರ್ಮಪೀಠವನ್ನು ಸ್ಥಾಪಿಸಿ ಮಲ್ಲಿಕಾರ್ಜುನ ಶಿವಯೋಗಿಗಳೆಂಬ ಮಹಿಮ

ರಿಗೆ ಉತ್ತರಾಧಿಕಾರವನ್ನು ಅನುಗ್ರಹಿಸಿ ಮೆರೆದವರೂ ಮರುಳಸಿದ್ಧರಲ್ಲವೇ ? ಇವರ ಪೀಠದ ಹೆಸರನ್ನು ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿ ಗ್ರಂಥದಲ್ಲಿ ದೀಕ್ಷಾಪ್ರಕರಣದಲ್ಲಿ ತೆಗೆದುಕೊಂಡಿರುವರು. ಕ್ರಿಸ್ತಶಕದ ೩ನೆಯ ಶತಮಾನದಲ್ಲಿದ್ದು ಶೈವ ಶಿಖಾಮಣಿಗಳಾದ ಪಾಂಡ್ಯರಾಜರು ಸದ್ಧರ್ಮ ಪೀಠ ವನ್ನು ಕಟ್ಟಿಸಿ ಒಂದು ಶಿಲಾಶಾಸನವನ್ನು ಬರೆದುಕೊಟ್ಟಿದ್ದಾರೆ. ಇಂಥ ಜಗನ್ಮಾನ್ಯ ಪೀಠವನ್ನಾರೋಹಣಮಾಡಿ, ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ ತತ್ವಗಳನ್ನು ಶಿಷ್ಯ ಕೋಟಿಗೆ ಬೋಧಿಸಿ, ವೀರಶೈವ ಮತಸ್ಥಾಪನಾಚಾರ್ಯನೆನಿಸಿ, ಉದಿಸಿದ ಲಿಂಗದಲ್ಲಿಯೇ ದಿವ್ಯ ದೇಹಧಾರಿ ಯಾಗಿ ಅಡಗಿದ ಮರುಳಸಿದ್ಧನೆತ್ತ ! ಪ್ರಾಚೀನ ಶಿವಕವಿ ಮಾರ್ಗೋಲ್ಲಂಘಿತ ದೇವಕವಿ ಕಲ್ಪಿತಪುರುಷನೆನಿಸಿದ ಅಸ್ಪೃಶ್ಯ ಮರುಳಸಿದ್ಧನೆತ್ತ ! ನಿಷ್ಪಕ್ಷ ಪಾತಿಗಳಾದ ವಿದ್ವಾಂಸರೇ ತುಲನೆಮಾಡಲಿ. ಪಂಡಿತತ್ರಯದಲ್ಲಿ ಸೇರಿರುವ ಮಲ್ಲಿಕಾರ್ಜುನ ಪಂಡಿತನನ್ನು ಶ್ರೀಶೈಲ ಮಲ್ಲಿಕಾರ್ಜುನಲಿಂಗದಿಂದುದಿಸಿರುವ ಪಂಡಿತಾರಾಧ್ಯನೆಂದೂಹಿಸುವದು ಹೇಗೆ ಅನ್ಯಾಯವೋ ಹಾಗೆ ಮರುಳಸಿದ್ಧನ ವಿಷಯಕ್ಕಾದರೂ ಅನ್ಯಾಯವೇ ಸರಿ. ಈ ಭ್ರಮೆಯು ದೂರಾಗಿ ವೀರಶೈವ ಸಮಾಜದಲ್ಲಿ ಪಸರಿಸಿರುವ ಗೊಂದಲವು ಶಾಂತವಾಗಲೆಂದೂ, ಅಂತಹ ಗೊಂದಲಿಗರಿಗೆ ಜಗದಾಚಾರ್ಯ ಮರುಳಸಿದ್ಧರು ಸದ್ಬುದ್ಧಿಯನ್ನು ಕೊಡ ಲೆಂದೂ ಹಾರೈಸುತ್ತೇನೆ.

### " ಶ್ರೀಜಗದ್ಗುರು ಮರುಳಸಿದ್ಧರ ವಿಷಯಕ್ಕೆ ಪ್ರಮಾಣಗಳು "

ಯಜುರ್ವೇದೇ ವೀರಶೈವೋಪನಿಷದಿ:—

" ವಾಮದೇವ ಮುಖಮಾಸೀತ್ ದಾರುಕಾಚಾರ್ಯಾರಾಧ್ಯ ಉದ್ಭವತಿ "

ಪಾಶುಪತತಂತ್ರೇ ( ಶಿವಪಾರ್ವತೀ ಸಂವಾದಃ ) :—

" ರೇಣುಕೋದಾರುಕಶ್ಚೈವಘಂಟಾಕರ್ಣಶ್ಚಧೇನುಕಃ ||
ವಿಶ್ವಕರ್ಣಶ್ಚಪಂಚೈತೇ ಪಂಚವಕ್ತ್ರಸಮುದ್ಭವಾಃ || ೧ ||
ಏತೇಷಾಂಪ್ರತಿನಾಮಾನಿ ಯುಗಭೇದೇನ ಚ ಶೃಣು |
ಏಕಾಕ್ಷರೋದ್ವ್ಯಕ್ಷರಶ್ಚತ್ರ್ಯಕ್ಷರಶ್ಚತುರಕ್ಷರಃ ||
ಪಂಚಾಕ್ಷರಃ ಕೃತಯುಗೇ ಪಂಚನಾಮಾನಿ ಸರ್ವಶಃ || ೨ ||
ಏಕವಕ್ತ್ರೋದ್ವಿವಕ್ತ್ರಶ್ಚ ತ್ರಿವಕ್ತ್ರಶ್ಚತುರಾನನಃ ||
ಪಂಚವಕ್ತ್ರ ಇತಿಖ್ಯಾತಾಸ್ತ್ರೇತಾಯಾಂತು ಮಹೇಶ್ವರಿ || ೩ ||
ದ್ವಾಪರೇ ರೇಣುಕಶ್ಚೇತಿ ದಾರುಕಶ್ಚ ದ್ವಿತೀಯಕಃ
ಘಂಟಾಕರ್ಣ ಸ್ತೃತೀಯಃ ಸ್ಯಾಚ್ಚತುರ್ಥೋಧೇನುಕರ್ಣಕಃ || ೪ ||
ಪಂಚಮೋವಿಶ್ವಕರ್ಣಾಖ್ಯಃ ಪಂಚನಾಮಾನಿ ವೈ ಶೃಣು |

ರೇವಣೋ ಮರುಲಶ್ಚೈಕೋರಾಮಃ ಪಂಡಿತ ಏವ ಚ ||
ವಿಶ್ವಾರಾಧ್ಯ ಇತಿಪ್ರೋಕ್ತಾಃ ಕಲಾವಪಿ ಮಮ ಪ್ರಿಯೇ || ೫ ||

ಸ್ವಾಯಂಭುವಾಗಮೇ:—

" ತದ್ವನ್ಮರುಲಸಿದ್ಧಸ್ಯ ವಟಕ್ಷೇತ್ರೇಮಹತ್ತರೇ ||
ಸಿದ್ಧೇತಲಿಂಗಾಜ್ಞನಸಂಸ್ಥಾನಮುಜ್ಜಯಿನೀಪುರೇ || ೧ ||

ಸುಪ್ರಬೋಧಾಗಮೇ ( ದೀಕ್ಷಾಪ್ರಕರಣೇ ) :—

" ನಂದಿಗೋತ್ರಾಧಿನಾಥಶ್ಚ ಸಿಂಹಾಸನಪತಿಶ್ಚಯಃ ||
ಮರುಲಾರಾಧ್ಯಸನ್ನಾಮಾ ಜಗದ್ಗುರುತಮಶ್ಚಸಃ || ಶ್ಲೋಕ ೭೭

ವೀರಶೈವಸದಾಚಾರ ಸಂಗ್ರಹೇ (ಕಾರ್ಯರುದ್ರಂಪ್ರತಿಪರ ಶಿವಬೋಧಃ) :—

" ಕಲಿಯುಗೇ ರೇವಣಾರಾಧ್ಯ ಮರುಲಾರಾಧ್ಯೈಕೋರಾಮಾರಾಧ್ಯ ಪಂಡಿತಾರಾಧ್ಯ ವಿಶ್ವಾರಾಧ್ಯೇತಿ ನಾಮಸಮೇತೈಸ್ತೈರೇವ ಪಂಚಾಚಾರ್ಯೈರ್ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರಪ್ರಮುಖಾನಷ್ಟಾದಶಜಾತೀನೇಕೋತ್ತರಶತಕುಲಜಾನ್ಮನುಷ್ಯಾನ್ ಶಿಲಾಮಯ ಲಿಂಗಂಧಾರಯಿತ್ವಾ ಪಂಚಾಕ್ಷರಮುಪದಿಶ್ಯ ಮೋಕ್ಷಮಾರ್ಗಂ ಪ್ರದರ್ಶಯ || "

ಸಾಂಬಪುರಾಣೇ ಕೂಷ್ಮಾಂಡರುದ್ರಾಧ್ಯಾಯೇ :—

" ಪುರಾಮುರಾರಿ ಬ್ರಹ್ಮಾದ್ಯಾ ವೀರಭದ್ರೋ ಗುಹಸ್ತಥಾ ||
ಹೇರಂಬೋ ನಂದಿಭೃಂಗೀಶಾ ಮಹಾಕಾಲೀ ಚ ಭೈರವಃ || ೧ ||
ಮಾತೃಕಾಃ ಪ್ರಮಥಾದ್ಯೈಶ್ಚ ದೇವೇಂದ್ರಾದಿಸುರಸ್ತಥಾ ||
ರಾಕ್ಷಸಾಗುಹ್ಯಕಾಃ ಸಿದ್ಧಾ ಗಂಧರ್ವಾ ಯಕ್ಷಕಿನ್ನರಾಃ || ೨ ||
ಶಿವದೀಕ್ಷಾಂ ಕಾಂಕ್ಷಯಿತ್ವಾ ಪ್ರಾಪ್ತಾ ಆರಾಧ್ಯ ಪಂಚಕಂ ||
ಪಾದಪೂಜಾಸಮಾಸಕ್ತಾ ಲಿಂಗಪೂಜಾಭಿಲಾಷಯಾ || ೩ ||

ಸಿದ್ಧನಾಥ ಶಿವಾಚಾರ್ಯವಿರಚಿತ ರೇಣುಕ ವಿಜಯೇ

ದ್ವಿತೀಯಮಂಜರ್ಯಾಂ ಗದ್ಯೇ || :—

" ಉಜ್ಜಯಿನೀ ಮಹಾಕ್ಷೇತ್ರಮಾಸಾದ್ಯ ತನ್ಮಧ್ಯವಿದ್ಯೋತಮಾನಸದ್ಧರ್ಮ ಪೀಠಮಧಿತಿಷ್ಠಂತಂ ಬ್ರಹ್ಮಪ್ರತಿಪತ್ತಿಪ್ರಾಪ್ತಿ ಪರಾಯಣವರ್ಣಿಗಣಪಠನ ಪಾಠನ ಪರಿಪಾಟೀಂ ಪ್ರಕಟೀಕುರ್ವಂತಂ ಸಮಸ್ತಸಾಮಂತ ಸಾರ್ವಭೌಮ ಸಂಘಾತ ಪ್ರಣತ ಚರಣ ಸಂಚರಣ ಪವಿತ್ರಿತ ಪೃಥಿವೀಮಂಡಲಂ ಹೃದ್ಯಾನವದ್ಯ ಶಿವಜೀವೈಕ್ಯ ವಿದ್ಯಾವಿಲೋಲಂ ದುಷ್ಟಶಿಕ್ಷಣ ಶಿಷ್ಟರಕ್ಷಣ ಕ್ರಿಯಾಕರಣ ವಿಚಕ್ಷಣಂ ಚತುರ್ವರ್ಗಫಲ ಪ್ರದಾನ ಭರ್ಗಸದೃಶಂ ಸ್ವಯಶಃ ಪ್ರವಾಹಪರ್ಯಾಪ್ತ ದಿಗಂತದೇಶಂ ಶ್ರೀ ಮರುಲಾರಾಧ್ಯ ನಾಮದೇಶಿಕೇಶಂ ಸಂದೃಕ್ಷ್ಯ

ರೇಣುಕ ವಿಜಯೇ ಪಂಚಮಮಂಜರ್ಯಾಂ ||

ವಿಶ್ವಾರಾಧ್ಯ ಪ್ರಮುಖ ಚತುರಾಚಾರ್ಯಾ ಪಾದಾಂಸ್ತಥೈವ । ಪಾಂಡ್ಯೇಶಾದೀನವನಿಪಗಣಾನಾನಯನ್ ರೇವಣೇಶಃ || ಸಮ್ಯಗ್ವಿದ್ಯಾ ಪರಿಣತ ಮತಿಂ ರುದ್ರದೇವಂ ತದಾನೀಂ । ಶೈವಾಚಾರವ್ಯವಹೃತಿಪದೇ ಪಟ್ಟಬದ್ಧಂ ಚಕಾರ || ಶ್ಲೋಕ ೨೬

ಷಡಕ್ಷರ ಕವಿವಿರಚಿತೇ ಭಕ್ತಾಧಿಕ್ಯಶಿಖಾಮಣಾಂ || ಪ್ರಥಮಶ್ಲೋಕೇ||
" ಶ್ರೀನಂದೀಶ್ವರಭೃಂಗಿ ವೀರವೃಷಭಸ್ಕಂದಾಸ್ತಥಾಶೈಲಜಾ । ಸ್ಫೂರ್ಜದ್ದಾರುಕರೇಣುಕಾದಿಕಗಣಾಃಸಾನಂದ ಕುಂಭೋದ್ಭವಾ ||

ಷಡಕ್ಷರ ಕವಿಕೃತ ಶಬರಶಂಕರ ವಿಲಾಸಗ್ರಂಥ ಪ್ರಥಮಾಶ್ವಾಸದಲ್ಲಿ

ಚತುರಾಚಾರ್ಯಪದಾಂಬುಜಂಗಳೆಮಗೀಗಾಮೋದಸಂದೋಹಮಂ ||
ಕಂದ ||

ಚತುರಾಚಾರ್ಯರ ಪದಾಬ್ಜಕಾನತನಪ್ಪೆಂ ||

ಷಡಕ್ಷರ ಕವಿಕೃತ ರಾಜಶೇಖರ ವಿಲಾಸಗ್ರಂಥ ಪ್ರಥಮಾಶ್ವಾಸದಲ್ಲಿ—ರೇಣುಕ ರಾಮಪಂಡಿತ ಮಹಾ ಮರುಳಾರ್ಯರ ಮಾಯಿದೇವರಂ ।

ಬೊಮ್ಮರಸಕವಿವರ್ಯವಿರಚಿತ ರೇವಣಸಿದ್ಧೇಶ್ವರಪುರಾಣದ ಮೊದಲನೆಯ ಸಂಧಿಯಲ್ಲಿ || ವಾ, ಷ ||

ಹರುಷದಿಂದಂನೋಳ್ಪಭುಂಜಿಪಾಘ್ರಾಣಿಸುವ || ಪರುಸನಂಗೆಯ್ದುಕೇಳುವ ಪರಮ ಸುಖವನೋ । ಸರಿಸದರ್ಶಿಸುವ ಲಿಂಗಾಂಗದ ಟೆಡಂಗಿಂತಿದೆಂದು ಶಿಷ್ಯಪ್ರತತಿಗೇ || ಕರತಳಾಮಳಕಮಂ ಮಾಡಿದ ಸಮುನ್ನತಂ । ಕರುಣಿಸುಗೆ ಸಂತತಂ ಮರುಳಸಿದ್ಧೇಶಸ । ದ್ಗುರುಶಿವಾದ್ವೈತಕ್ಕೆ ಕರುಭವಮಹೀಧರಸ್ವರುವೆಮಗಭೀಷ್ಟಫಲಮಂ || ಪದ್ಯ ೫

ಗುರುಲಿಂಗಸಿದ್ಧ ಕವಿಕೃತ ಶ್ರೀ ಶರಣಬಸವೇಶ್ವರ ಪುರಾಣದ ಮೊದಲನೆಯ ಸಂಧಿಯಲ್ಲಿ || ವಾ. ಷ || " ತುರುಕಾಣ್ಯರಾಜ್ಯದೊಳು ಮಳೆಬರಿಸಿ ಬರನಳಿಸಿ । ಸುರಸ ಶಿವಗಂಗೆ ಬೆಟ್ಟದೊಳೆಂದು ತಪನಿಂದು । ವರಶಪೋಬಲದಿಂದ ಬಿಡಿಸಿ ಪೊನ್ನಾಂಬಿಕೆಯ ಉಗ್ರವಸ ಕಾಮ್ಯದಿರಿಸಿ || ಧರಣಿಯೊಳು ವೀರಶೈವಾಚಾರಸ್ಥಾಪಿಸಿದ । ಗುರುವೆ ಭಕ್ತರ ಕಲ್ಪತರುವೆ ನೀನಖಿಳರಂ । ಪೊರೆವೆಮತ್ಕುಲ ಪರಂಪರವೆವರ ಗುರುವೆ ಮರುಳಾರ್ಯಹೃತ್ಕಂಜಸೂರ್ಯ||
ಪದ್ಯ || ೧೫ ||

ಆಸ್ಥಾನವಿದ್ವಾನ್ ನಂಜನಗೂಡು ಶ್ರೀಕಂಠ ಶಾಸ್ತ್ರಿ ಕೃತ ರೇಣುಕ ವಿಜಯ ಪುರಾಣದಲ್ಲಿ || ಭಾ. ಷ || " ಆರ್ಯ ರೇಣುಕದಾರುಕರು ಗುರು । ವರ್ಯ ಘಂಟಾಕರ್ಣರೆಸೆವಾ । ಚಾರ್ಯರಾವರ ಧೇನುಕರ್ಣಸು ವಿಶ್ವಕರ್ಣಾಖ್ಯರ್ || ಸೂರ್ಯನನು ತನುದೀಪ್ತಿಯಿಂದೆಳ । ದಯ್ಯನನುವಿರಚಿಸುತೆ

ಮೆರೆದಿಹ । ರಾರ್ಯರ್ಯಾಳ್ದನ ಸಭೆಯೊಳಾತನ ಪಂಚವಕ್ತ್ರಭವರ್ ॥ ಎರಡನೆಯ ಸಂಧಿ ಪದ್ಯ ೧೮

ಅದೇ ಪುರಾಣದ ಹನ್ನೆರಡನೆಯ ಸಂಧಿಯಲ್ಲಿ:—

ಇಳೆಗೆ ಲಿಂಗಾಂಗೈಕ್ಯ ಭಾವವ । ತಿಳಿಸುತಲಿ ಪುರುಷಾರ್ಥ ಪುಂಜವ । ನೊಲಿದು ಶಿಷ್ಯರ್ಗ್ಗೆದೆ ಕೈಗೊಳಿಸುತ್ತಲಾಯೆಡೆಯೊಳ್ ॥ ಮಿಳಿರ್ವನ್ಯೆಜಯಶಃಪತಾಕೆಯ । ನಿಲಿಸಿಗುರುಮಂಡಲದೆತಾನ । ಗ್ಗಳನೆನಿಸಿ ಪೆಸರಾಂತ ಮರುಲಾರಾಧ್ಯನೆಸೆದಿರ್ದಂ ॥ ಪದ್ಯ ॥ ೪ ॥

ಈ ಮಹಾಮಹಿಮನೆ ಸದಾಶಿವ ॥ ವಾಮದೇವಾನನ ಸಮುದ್ಭವ । ನೀ ಮಹಿಯನುದ್ಧರಿಸೆ ಸಿದ್ಧೇಶ್ವರನ ಲಿಂಗದಿತಾಂ ॥ ಮೂಮುಸಕಳದಲಿ ಮೂಡಿ ಮೆರೆದಂ । ಪ್ರೇಮಪೂರ್ಣಂ ಶೈವ ಸನ್ಮತ । ತಾಮರಸದಿವಸಾಧಿಪತಿ ಗಡ ನಂದಿಗೋತ್ರ ಪತಿ ॥ " ಪದ್ಯ ॥ ೫ ॥

ಮೂವನೂರು ಚನ್ನಬಸವ ಕವಿಕೃತ ಶರಣ ಬಸವೇಶ್ವರ ಪುರಾಣದ ಮೂರನೆಯ ಸಂಧಿಯಲ್ಲಿ ॥ ಭಾ. ಷ ॥

( ಶರಣಬಸವೇಶ್ವರನದೀಕ್ಷಾಕಾಲದಲ್ಲಿ )

" ಪಂಚಪ್ರಣವಗಳಂ ಬರೆದು ಮೇಣ್ । ಪಂಚಸೂತ್ರಗಳನ್ನು ಸುತ್ತುತ । ಪಂಚವೆನಿಪರ್ಣಗಳೊಳು ನಾಣ್ಯಗಳ ನಿರಿಸುತ್ತ ॥ ಪಂಚಫಲವೀಳ್ಯಗಳನರ್ಪಿಸಿ । ಪಂಚಮುಖನಿಂದೊಗೆದ ಶ್ರೀ ಗುರು । ಪಂಚಕವ ಪೆಸರಿಂದಲರ್ಚಿಸಿದರು ಕಲಶಗಳನು ॥ ಪದ್ಯ ೪೦ ॥

ಪಂಡಿತ ಶಂಕರ ಶಾಸ್ತ್ರೀ ಕೃತ ದಾರುಕಾಚಾರ್ಯಸ್ತುತಿಃ ॥ ಕೇನೋಪನಿಷಚ್ಛಾಂಕರೀ ವ್ಯಾಖ್ಯಾಯಾಂ

" ಯೋವಿಶ್ವಂ ವ್ಯದಧಾಚ್ಛಿವಾರ್ಚನಪರಂ ಯಂಸಂಸ್ತುವಂತ್ಯಾಗಮಾಃ।
ಯೇನಾಕಾರಿ ಶಿವಂಸಮಸ್ತ ಯಮಿನಾಂ ಯಸ್ಮೈನಮಃಪ್ರಾಣಿನಾಂ ॥
ಯಸ್ಮಾತ್ಸಂಸೃತಿಸಂಹೃತಿಸ್ಸಮಭವದ್ಯಸ್ಯೇಕ್ಷಣಂಮೋಕ್ಷದಂ ।
ಯಸ್ಮಿನ್ ಸಿದ್ಧಮಭೂದ್ಗುರುತ್ವಮಖಿಲಂ ತಂ ದಾರುಕಾರ್ಯಂ ಭಜೇ॥

ಇದರಂತೆ ಎಷ್ಟೋ ಧಾರ್ಮಿಕ ಗ್ರಂಥಗಳಲ್ಲಿ ಪುರಾಣಗಳಲ್ಲಿ ಆಚಾರ್ಯ ಪಂಚಕದಲ್ಲಿ ಒಬ್ಬರಾದ ಶ್ರೀ ಮರುಳಸಿದ್ಧರ ವಿಷಯವು ತುಂಬಿತುಳುಕುತ್ತಿರುವದು. ರೇಣುಕನಿಗೆ ರೇವಣ, ರೇವಣಸಿದ್ಧ ಎಂಬ ನಾಮಗಳಿರುವಂತೆ ಈತನಿಗೆ ದಾರುಕ, ಮರುಳ, ಮರುಳಸಿದ್ಧ, ಎಂಬ ನಾಮಗಳಿರುವವು— ಕೆಳದಿ ಷಡಕ್ಷರ ಮಂತ್ರಿ ಕೃತ ವೀರಶೈವ ಧರ್ಮ ಶಿರೋಮಣಿಯ ಪ್ರಥಮ ಪರಿಚ್ಛೇದದಲ್ಲಿ, " ಸಿದ್ಧಾನ್ನಮಾಮಿ ಶಿರಸಾ ಶಿವರೂಪಭಾಜ ' ಶ್ರೀನಂದಿಭೃಂಗಿರಿಟಿರೇಣುಕ ಪಂಡಿತಾದೀನ್ ॥ ಯೈರ್ನಸ್ಥಾಪಿತಂ ಮತಮಿದಂ ಕಿಲ ವೀರಶೈವಂ.

ಸ್ವಾಚಾರ ಶಿಕ್ಷಿತ ಶಿವಾಗಮವೇತ್ಯ ಶಿಷ್ಯೈಃ " ॥ ೧ ॥ ಅಂದರೆ ಸಿದ್ಧಾನ್ನಮಾಮಿ, ಈ ಪ್ರಯೋಗದಿಂದ ಸಿದ್ಧಪುರುಷರು ಎಂದು ಅರ್ಥವು ಸಹಜ ಸಿದ್ಧವಾಗುತ್ತದೆ. ಕನ್ನಡ ಟಿಪ್ಪಣವನ್ನು ಎಂಬ ಬಸವಲಿಂಗಶಾಸ್ತ್ರಿಗಳು ಅದೇ ಪ್ರಕಾರವಾಗಿ ಬರೆದಿರುವರು.



# ಮೂಲ ಮರುಳಸಿದ್ಧರ ಬಗ್ಗೆ ಕೆಲವು ಪ್ರಮಾಣಗಳು

ಲೇ।। ಕಲಬುರ್ಗಿ ಚಾದಾಪುರೀ ಹಿರೇಮಠದ

ಶ್ರೀ ಶಾಂತವೀರ ಶಿವಾಚಾರ್ಯರು.

ಈ ನವಯುಗವು ನೂತನ ಸಂಶೋಧಕರ ಕಾಲವು. ನೂತನ ಸಂಶೋಧಕರಲ್ಲಿ ಉತ್ತಮ, ಮಧ್ಯಮ, ಅಧಮ, ಅಧಮಾಧಮ ವೆಂದು ಹೀಗೆ ನಾಲ್ಕು ವರ್ಗವಾಗಿ ಎಣಿಸಬಹುದು, ಸದ್ಯಃ ಹೊರಬಿದ್ದಿರುವ ಮರುಳಸಿದ್ಧ ಕಾವ್ಯ ವನ್ನೋದಿದ ಮಹಾನುಭಾವರು. ಈಗ ಹೊರಟಿರುವ ಮರುಳಸಿದ್ಧಾಂಕ ವನ್ನು ಪರಿಶೀಲಿಸಿ ನೋಡಿದಲ್ಲಿ ಮರುಳಸಿದ್ಧ ಕಾವ್ಯವನ್ನು ಬರೆದ ಪಂಡಿತಂ ಮನ್ಯರನ್ನು ಯಾವ ವರ್ಗದಲ್ಲಿ ಸೇರಿಸಬೇಕೆಂಬುದು ತಾನೇ ವಿದಿತವಾಗುತ್ತದೆ. "ಮರುಳಸಿದ್ಧಾಂಕ"ವು ಪ್ರಕಟವಾಗುವದೆಂದು ಹರಿಹರ ವೀರಶೈವ ಧರ್ಮಾಲಯದ ವ್ಯವಸ್ಥಾಪಕರಿಂದ ತಿಳಿದು ಬಂತು. ನಾನು ಪ್ರತ್ಯಕ್ಷ ನೋಡಿರುವ ಗ್ರಂಥ ಪ್ರಮಾಣಗಳನ್ನು ಅನುಭವದ ವಿಚಾರಗಳನ್ನು ಇಲ್ಲಿ ಬರೆಯುವೆನು. ಬಸವಾದಿ ಪ್ರಮಥರಿಗಿಂತಲೂ ಪೂರ್ವದಲ್ಲಿ ಜನ್ಮವನ್ನು ತಾಳಿದ ಶ್ರೀ ಮನ್ನಿಜಗುಣ ಶಿವಯೋಗಿಗಳ ದಿವ್ಯ ಜ್ಞಾನದ ಪ್ರಭೆಯು ಕೋಟಿಸೂರ್ಯ ಪ್ರಕಾಶದಂತೆ ದಶದಿಕ್ಕುಗಳಲ್ಲಿ ಪಸರಿಸಿದೆ. ಅವರು ಲಿಖಿಸಿರುವ ಆರು ಶಾಸ್ತ್ರಗಳನ್ನು ನೋಡಿ ಸಕಲಮತೀಯರು, ಈಗಿನ ನೂತನ ಸಂಶೋಧಕರಾದ ಯುರೋಪಿಯನ್ನರು ಸಹ ಶಿರಸಾಮಾನ್ಯವಾಗಿ ಒಪ್ಪಿ ಬಣ್ಣಿಸುತ್ತಿರುವರು. ನಿಜಗುಣ ಶಿವಯೋಗಿಗಳು ರಚಿಸಿರುವ ವಿವೇಕ ಚಿಂತಾಮಣಿಯ ಎರಡನೆಯ ಪ್ರಕರಣದ ದೀಕ್ಷಾ ಕ್ರಮದಲ್ಲಿ " ಪರಶಿವ ಸಂಜ್ಞಿತನಾಗಿ ಕುಳ್ಳಿರ್ದಾಚಾರ್ಯನ ಮಧ್ಯ ಕಲಶವನುಳಿದು, ಪೂರ್ವಾದಿ ನಾಲ್ಕು ಕಲಶಂಗಳನೇ ಕ್ರಮದಿಂ ರೇವಣಾಸಿದ್ಧ, ಮರುಳಸಿದ್ಧ, ರಾಮದೇವ, ಪಂಡಿತಾರಾಧ್ಯರೆಂಬಾಚಾರ್ಯ ಸಾಂಪ್ರದಾಯಕರಾದ ಬೇರೆ ಬೇರೆ ಮಠಪೀಠ ಆಸನಾದಿ ಲಕ್ಷಣ ಲಕ್ಷಿತರಾದ ಆಯಾಯ ದಿಕ್ಕುಗಳಂ ಅರ್ಘ್ಯಗಂಧ ಪುಷ್ಪಾಕ್ಷತಾದಿಗಳಿಂ ಶ್ರೀ ಮತ್ಪಂಚಾಕ್ಷರ ಪೂರ್ವಕ ಭಜಿಸುತ್ತ " ಹೀಗೆ ಬರೆದಿರುವರು. ಬಸವಣ್ಣನ ಅಳಿಯನಾದ ಚನ್ನಬಸವಣ್ಣನು ದೀಕ್ಷಾವಿಧಿಯೆಂಬ ವಚನ ಗ್ರಂಥವನ್ನು ಬರೆದಿರುವನು ಈ ಗ್ರಂಥವು ತಾಳವಾಲಿಯ ಮೇಲೆ ಬರೆದ ಪ್ರತಿಯು ನನ್ನ ಬಳಿಯಲ್ಲಿದೆ. ಆ ಚನ್ನಬಸವಣ್ಣನು ಲಿಖಿಸಿದ ದೀಕ್ಷಾವಿಧಿಯಲ್ಲಿ" " ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾರಾಧ್ಯರೆಂಬ ಐವರಾಚಾರ್ಯರು, ಆಯಾ ಸೂತ್ರಾನುವರ್ತಿಗಳು ತಮ್ಮ ಸೂತ್ರದಾಚಾರ್ಯರನ್ನೇ ಮಧ್ಯದಲ್ಲಿ ಭಾವಿಸಿ ಮಿಕ್ಕ ಚತುರಾಚಾರ್ಯರನ್ನು

ಚತುರ್ಥಿಕರ್ಮಗಳೆಲ್ಲಾ ಹ್ವಾನಿಸಿ, ಪಂಚಕಲಶಂಗಳನ್ನು ಸ್ಥಾಪಿಸಿ ಪೂಜಿಸಿ ದೀಕ್ಷೆಯು ನೆಸಗಬೇಕವೆಂತೆನೆ" ಹೀಗೆ ಬರದಿರುವನು,, ಗುಬ್ಬಿಯ ಮಲ್ಲಣಾರ್ಯರು ರಚಿಸಿರುವ ವೀರಶೈವಾ ಮೃತ ಮಹಾ ಪುರಾಣ ಏಳನೆಯ ಕಾಂಡ ಆರನೆಯ ಸಂಧಿ ೨೫ನೆಯ ಪದ್ಯದಿಂದ,, "॥ ಆದಧೀಚಿಕಣಾದ ಪಾಣಿ ನಿಸ್ಕಂದವ್ರ । ಮೋದಭೃಂಗಿರಿಟಿಂಯಾ ವೀರಭದ್ರಾಖ್ಯಾನ । ದಾದಿ ಸುಪ್ರಮಥ ರಜಹರಿಸಹಸ್ರಾಕ್ಷ ಬಾಣಾಸುರದಶಾಸ್ಯರಿನ್ಯಾ ॥ ನೈಮಿಕ ವಸಿಷ್ಠರುರುವಾಲ್ಮೀಕಿ ಭಾರದ್ವಜಾದಿಲನದತ್ರಿಗೌತಮರೆಲ್ಲ ಶರಮುತ್ಯ । ಮುದಿಗಳು ತತ್ತತ್ ಪ್ರಸಾದ ತತ್ಸೇವನಾಧ್ಯಾನಾದಿಸುತ್ತಾರ್ಚನೆಯ ॥ ೨೬ ॥

ಧಾರಣಾಜ್ಞಾ ತಾ ಎನುತ್ತ ಪರಾನಸುಕ । ರ್ದ್ರಾರಾ ಎನಿಪ್ಪಂದದಿಂ ಶ್ರೀಪ್ರರಾದರಿಂ । ತಾರಮ್ಯ ಸ್ವದೇವಕ್ಷಿೀಶ್ವರನ ಭಜಿಸುವರಲಾಕೃತಿ ಯುಗದೊಳೂ ॥ ಕಾರಣಿಕ ಥೇಳ್ಯಾಮ ತ್ರೇತಾಯುಗದೊಳುಗಾಂ । ಭೀರವ ಗಣೇಶ್ವರರ ಸಾಂಪ್ರದಾಯದಾದ । ರಾಧ್ಯರೇಕಾಕ್ಷರದ್ವ್ಯಕ್ಷರಂಸು ಪಂಚಾಕ್ಷರ ಷಡಕ್ಷರಾ ಖ್ಯಾ ॥ ೨೭ ॥

ಇವರು ಲೋಕಕ್ಕೆ ಯುಪದೇಶಂ ಮಾಡಿದರು । ಕುವರತದ್ವಾಪಾರ ಯುಗದೊಳಗೆ ತತ್ಸಾಂಪ್ರದಾ। ಯುಪದೇಶ ದೇರು ರಂ ರುರುಕಂ ಗೋಕರ್ನ ಶಂಖುಕರ್ನಂ ನಾಲ್ವರೂ ॥ ಪ್ರವಿ ಮಲಾಚಾರ್ಯೆಂಗುತ್ತ ದೀಕ್ಷೆಯನುವಾ । ದು ವರ ಲಾಕಲಿಯುಗದೊಳಾಗಣೇಶ್ವರರ ಸಾಂಪ್ರದಾಯದೊಳಗಾದ ಚತುರಾಚಾರ್ಯರಂ ಕೂರ್ತುಚಿಸ್ತರಿಪೆನೂ ॥ ೨೮ ॥

ರೇವಣಾಸಿದ್ಧೇಶ್ವರಂ ಮರುಲಸಿದ್ಧೇಶ । ಸಾಸಿರೇಪಪ್ಪದೇಕೋರಾಮು ತಂದೆಗಳು। ಪಾವನದ ಪಂಡಿತಾರಾಧ್ಯರೀ ನಾಲ್ವರಾಚಾರ್ಯರೀ ಲೋಕದೊಳಗೇ॥ ಓವಿದೀಕ್ಷೆಯವಾಡಿಸಲಹಿವರೆನುತ್ತುಮಾ । ದೇವಿಗೀಶ್ವರನೊರೆದ ಸದ್ಗ್ರಂಥ ದರ್ಥವಂ। ಪ್ರಾವೀಣಕೆಂಚವೀರಾಖ್ಯಂಗೆ ವಿಸ್ತರಿಸಿದಂ ದಲಗೆ ಯಾಚಾರ್ಯನೂ ॥ ೨೯ ॥ ಹೀಗೆ ಬರೆದಿರುವರು ,, ಇದೇ ಮರುಳಸಿದ್ಧಾಂಕದಲ್ಲಿ ವೀರಶೈವ ಧರ್ಮಶಾಸ್ತ್ರವನ್ನು ಸಂಪೂರ್ಣ ಓದಿ ಪರಿಣತರಾದ ಪಂಡಿತರು, ವೇದಾಗಮೋಪನಿಷತ್ಪುರಾಣಂಗಳಲ್ಲಿ ಪ್ರಣೀತರಾಗಿರುವ ವೀರಶೈವ ಮತಸ್ಥಾಪನಾಚಾರ್ಯರಾದ ಪಂಚಾಚಾರ್ಯರ ವಿಷಯದಲ್ಲಿ ಅನೇಕಪುರಾತನ ಗ್ರಂಥಗಳನ್ನು ಉಲ್ಲೇಖಿಸಿ ತೋರಿಸುವವರಿದ್ದಾರೆ. ಅವರೆಲ್ಲಾ ಇರುವ ಆನಂದಾಮೃತಸ್ವಾಂಬುಧಿಯಲ್ಲಿ ಮುಳುಗಿ ಜಗದಾಚಾರ್ಯರ ಅಗಾಧವಾದ ಲೀಲಾ ಜಾಲಗಳನ್ನು ಬಣ್ಣಿಸಬಹುದು. , ಒಂದು ಸಾವಿರ ವರ್ಷಗಳ ಮುಂಚೆ ಇರುವ ನಿಜಗುಣರು, ಒಂಭತ್ತು ನೂರು ವರ್ಷಗಳ ಮುಂಚೆ ಇರುವ ಬಸ್ಸವಣ್ಣನವರು ಬರೆದಿರುವ ಗ್ರಂಥಗಳ ಆಧಾರದಿಂದ ಜಗದಾಚಾರ್ಯರಾದ ಭಗವತ್ಪಾದ ಮರುಳಸಿದ್ಧರ ಸನಾತನತ್ವಸಿದ್ಧವಾಗುತ್ತಿರಲು, ಅ, ನ. ಕೃಷ್ಣರಾಯರು ದೇವನವಿಯು

ಬರೆದಿರುವ ಮರುಳಸಿದ್ಧ ಕಾವ್ಯವನ್ನು ಮುಂದಿಟ್ಟುಕೊಂಡು, ಈ ಕಾವ್ಯದಲ್ಲಿರುವ ಮಾದಿಗ ಮರುಳಸಿದ್ಧನೇ ವೀರಶೈವ ಮತಾಚಾರ್ಯರಲ್ಲೊಬ್ಬರಾದ ಮರುಳಸಿದ್ಧನೆಂದು ಬರೆದು ಜನರನ್ನು ಮರುಳುಗೊಳಿಸುವ ಸಂಗತಿಯನ್ನು ಕೇಳಿದರೆ ಕೇವಲ ಮರುಳರು ಸಹ ಒಪ್ಪುವಂತಿಲ್ಲ. ಸದ್ಧರ್ಮ ಸಂಭವನಾದ ಸುಜ್ಞ ಹೃದಯದ ಸಜ್ಜನನು ಇಂಥಾ ಅಪಭ್ರಂಶವಾದ ಕಾಪಟ್ಯದ ಲೇಖನವನ್ನೆಂದೂ ಬರೆಯಲಾರನು. ಧನದಾಸೆಯೆಂಬ ಕಾರ್ಗತ್ತಲೆಯಲ್ಲಿಸಂಚರಿಸುವ ಲೇಖಕನು, "ಸ್ಥಾಣು ಚೋರನ್ಯಾಯ"ದಂತೆ ಮಾದಿಗ ಮರುಳಸಿದ್ಧನನ್ನೇ ಜಗದಾಚಾರ್ಯ ಮರುಳಸಿದ್ಧನೆಂದು ಭಾವಿಸಿ ಬರೆದಿರಬಹುದು. ಸ್ವಧರ್ಮೇ ನಿಧನಂಶ್ರೇಯಃ ಪರಧರ್ಮೋ ಭಯಾವಹಃ ಎಂದು ಬೋಧಿಸಿರುವ ಗೀತೋಕ್ತಿಯನ್ನೋದಿ ತಿಳಿದಿದ್ದರೂ ರಾಯರಿಗೆ ಪರಧರ್ಮ ಸ್ಥಾಪನಾಚಾರ್ಯರ ಮೇಲೆ ಇಲ್ಲದಸಲ್ಲದ ಅಪವಾದವನ್ನು ಹೊರಿಸಿ ಬರೆಯಲು ಇವರ ಕಯ್ಯೊಳಗಿನ ಲೇಖನಿಯು ಹೇಗೆ ಮುಂದೆ ಸಾಗಿತೋ ಸರ್ವಾಂತರ್ಯಾಮಿಯೇ ಬಲ್ಲ. ಇವರಲ್ಲದೆ ಕರ್ನಾಟಕ ಮಂಗಲಂ ಶ್ರೀ ಕಂಠಯ್ಯ ಮಾಗಡಿ, ಎಂಬವರು ವೀರಶೈವ ಮತಾಚಾರ್ಯರ ಕಾಲನಿರ್ಣಯವೆಂಬ ಪುಸ್ತಕದಲ್ಲಿ ಬರೆದಿರುವ ವಿಷಯಗಳನ್ನು ವಿಸ್ತರಿಸಿ ಹೇಳಿದರೆ ಕೇಳಿದವರೆಲ್ಲರೂ 'ಕರ್ನಾಟಮಂಗಲಂ' ಎಂದು ನುಡಿಯುವಂತಿದೆ. ಇಂತಹ ಗೊಂದಲಗಳಿಂದ ವೀರಶೈವ ಧರ್ಮಗುರುಗಳ ಮೇಲೆ ವೈಷಮ್ಯ ವಿಚಾರಗಳು ಹೊರಬೀಳಲು ಕಾರಣವೇನೆಂದರೆ, ವೀರಶೈವ ಧರ್ಮದಲ್ಲಿ ಸಾಮಾನ್ಯ—ವಿಶೇಷ—ನಿರಾಭಾರವೆಂದು ಹೀಗೆ ಮೂರು ಭೇದಗಳಿವೆ. ಅವರೆಲ್ಲರೂ ಆಗಮಗಳ ಬೋಧೆಯಂತೆ ನಡೆಯುತ್ತಿದ್ದರೆ ಇಷ್ಟು ವಿಪರೀತಗಳಾಗುತ್ತಿರ್ದಿಲ್ಲ; ಪರಧರ್ಮದವರು ಕೇಳಿ ನೋಡಿ ನಗುತ್ತಿರ್ದಿಲ್ಲ. ವೀರಶೈವನು ತಾಯಿಯ ಗರ್ಭದಲ್ಲಿರುವಾಗ ಎಂಟು ತಿಂಗಳ ಗರ್ಭಕ್ಕೆ ಅಥವಾ ಮಾತೃಗರ್ಭದಿಂದ ಹೊರಗೆ ಬಂದಕೂಡಲೇ ಗುರುಗಳು ಬಂದು ಪಂಚಸೂತ್ರದ ಲಿಂಗವನ್ನು ಸಂಸ್ಕರಿಸಿ ಬ್ರಹ್ಮಕತೆಯನ್ನು ತುಂಬಿ ಶಿಶುವಿನ ಕಂಠಕ್ಕೆ ಬಂಧಿಸಿ, ಕರ್ಣದಲ್ಲಿ ಶಿವಮಂತ್ರವನ್ನು ಬೋಧಿಸಿ ಬರುವರು. ಪುನಃ, ಎಂಟು ವರ್ಷದಿಂದ ಮೊದಲ್ಗೊಂಡು ಹದಿನಾರು ವರ್ಷದೊಳಗಾಗಿ ಶ್ರೀ ಗುರುನಾಥನು ಜಗದ್ಗುರು ಪಂಚಾಚಾರ್ಯರನ್ನಾಹ್ವಾನಿಸಿ ಪಂಚಕಲಶಗಳನ್ನು ಸ್ಥಾಪಿಸಿ ಶಿಷ್ಯನನ್ನು ಮುಂದೆ ಕುಳ್ಳಿರಿಸಿ ಕಲಶಂಗಳ ಸೂತ್ರವನ್ನು ಕೊಟ್ಟು ದೀಕ್ಷಾತ್ರಯಂಗಳಿಂದ ತನುತ್ರಯಂಗಳ ದೋಷಗಳನ್ನು ಕಳೆದು, ಷಡಧ್ವಶೋಧಿತವಾದಲಿಂಗವನ್ನು ಶಿಷ್ಯನ ಹಸ್ತಸ್ಥದಲ್ಲಿರಿಸಿ, ಲಿಂಗಾಗ ಸಾಮರಸ್ಯವನ್ನರುಹಿ ಶಿವ ಪಂಚಾಕ್ಷರೀ ಮಹಾಮಂತ್ರವನ್ನು ಮಂತ್ರರಹಸ್ಯವನ್ನನು ಗ್ರಹಿಸಿ ಕೃತಕೃತ್ಯನನ್ನು ಮಾಡುವನು. ಪ್ರತಿಯೊಬ್ಬ ವೀರಶೈವನು ಶ್ರೀಗುರುವಿನಿಂದ ಸಂಸ್ಕೃತಿಯನ್ನು ಹೊಂದಿ, ಗುರುದತ್ತವಾದಲಿಂಗವನ್ನು ಧರಿಸಿ ಪೂಜಿಸುತ್ತ ಗುರೂಕ್ತಮಂತ್ರ

ವನ್ನು ಜಪಿಸುತ್ತ ತನ್ನಾಯುಷ್ಯವನ್ನು ಕಳೆದು ಕಡೆಗೆ ಪ್ರಾಣತ್ಯಾಗವಾದರು
ಸಹ ಗುರು ಕೊಟ್ಟ ಲಿಂಗವು ಸ್ಥೂಲಶರೀರದೊಡನೆ ಸಮಾಧಿಯಲ್ಲಿ ಸೇರು
ವದು. ಈ ರೀತಿ ಜನನಾದಿಯಿಂದ ಮೋಕ್ಷಲಕ್ಷ್ಮಿಯು ಕೈಗೂಡುವವರಿಗೂ
ಶ್ರೀಗುರುವಿನ ಕೃಪೆಯು ಬೆನ್ನುಹತ್ತಿ ಕಾಪಾಡುತ್ತಿರುವುದು ಶಾಸ್ತ್ರ ಪ್ರಮಾಣ
ದಿಂದಲೂ ಪ್ರತ್ಯಕ್ಷ ಅನುಭವದಿಂದಲೂ ಸರ್ವರಿಗೆ ವಿದಿತ್ತವಾಗುತ್ತಲಿದೆ. ಈ
ರೀತಿ ಪ್ರಾಪ್ತವಾಗುವ ಗುರುವಿನ ಉಪಕಾರವನ್ನು ಮರೆತು ಕೃತಘ್ನರು ಗುರು
ಗಳನ್ನು ತಿರಸ್ಕರಿಸುತ್ತ ತಿರಸ್ಕರಿಸುವವರಿಗೆ ಆಶ್ರಯವನ್ನು ಕೊಡುತ್ತ ವೀರ
ಶೈವ ಧರ್ಮದಲ್ಲಿ ಕೋಲಾಹಲವನ್ನೆಬ್ಬಿಸುತ್ತ ರೌರವ ನರಕದಲ್ಲಿ ಬೀಳುವರು.
ಹರಹರ ! ಗುರುನಿಂದಕರ ಲಿಖಿತವನ್ನು ನೋಡಿದ ಕಣ್ಣುಗಳಿಗೆ, ವಾಕ್ಯವನ್ನು
ಚ್ಚರಿಸಿದ ನಾಲಿಗೆಗೆ, ಕೇಳಿದ ಕಿವಿಗಳಿಗೆ, ಭಾವಿಸುವ ಹೃದಯಕ್ಕೆ, ಪ್ರಾಯಶ್ಚಿ
ತ್ತವು ! ಶಾಂತಂಪಾಪಂ !!



# ಆಚಾರ್ಯ ಮರುಳಸಿದ್ಧ

ಲೇ|| ಮೊರಬದ ಜಡೆಮಠದ ಶ್ರೀ. ಗಂಗಾಧರ ಶಿವಾಚಾರ್ಯರು.

ನಮ್ಮ ಸಮಾಜದಲ್ಲಿ ಮಹಾಚಾರ್ಯ ಮರುಳಸಿದ್ಧರ ಬಗ್ಗೆ ಐತಿಹಾಸಿಕ ಕುತುಹಲವೂ ಸಂಶೋಧನೆಯೂ ದಿನದಿನಕ್ಕೆ ಹೆಚ್ಚುತ್ತ ನಡೆದಿರುವದು ಸರಿ ಅಷ್ಟೆ! ದೇವಕವಿಯಿಂದ ರಚಿತವಾಗಿರುವ ಮರುಳಸಿದ್ಧ ಕಾವ್ಯದ ವಿಮರ್ಶೆಯಲ್ಲಿ ಬೆಂಗಳೂರಿನ ಅ. ನ ಕೃಷ್ಣರಾಯರು ಆಚಾರ್ಯ ಮರುಳಸಿದ್ಧನು ಮಾದಿಗನಾಗಿ ಜನಿಸಿ ಮುಂದೆ ತನ್ನ ಸತ್ವಬಲದಿಂದ ಮಹಾ ಗುರುವಾಗಿ ಪರಿಣಮಿಸಿದನೆಂದು ನಂಬಿಕೊಂಡು ಸಾರಾಸಾರ ವಿಚಾರಮಾಡದೆ ಬರೆದುಬಿಟ್ಟಿದ್ದಾರೆ. ಇದಕ್ಕಿಂತಲೂ ಮೊದಲು ಮರುಳಸಿದ್ಧರೆಷ್ಟುಜನ? ಎಂಬುದನ್ನು ಸರಿಯಾಗಿ ತಿಳಿದುಕೊಳ್ಳುವದು ಬಹಳ ಅವಶ್ಯಕವಾದುದು. ನಮಗೆ ತಿಳಿದು ಬಂದ ಮಟ್ಟಿಗೆ ಮರುಳಸಿದ್ಧರು ಐದುಜನರೆಂದು ಅಲ್ಲಲ್ಲಿಯ ಪರಿಶೋಧನೆಯಿಂದ ಗೊತ್ತಾಗಿರುವದು. ಓದುಗರ ತಿಳುವಳಿಕೆಗಾಗಿ ಸ್ವಲ್ಪದರಲ್ಲಿಯೆ ವಿವರಿಸುವೆವು.

(೧) ಶ್ರೀ ಸದ್ಧರ್ಮ ಪೀಠ ಸಂಸ್ಥಾಪಕರಾದ ಜಗದ್ಗುರು ಮರುಳಸಿದ್ಧರು ಉಜ್ಜಯನಿ.

(೨) ಮೈಸೂರ ಸಂಸ್ಥಾನ ಚಿತ್ರದುರ್ಗ ಜಿಲ್ಲೆಯೊಳಗಿನ ಕುಪ್ಪರಗದಿಗೆಯಲ್ಲಿರುವ ಮರುಳಸಿದ್ಧರು. ಈಗಲು ಇವರ ಗದ್ದುಗೆಯು ಮಹಿಮಾಸ್ಥಳವೆನಿಸಿರುವದು. ದಾಸೋಹವು ನಡೆದೇ ಇರುತ್ತದೆ. ಅಮಾವಾಸ್ಯೆಯ ದಿನ ಇಲ್ಲಿ ಭಕ್ತಾದಿಗಳು ಹೆಚ್ಚಿಗೆ ಸೇರುವರು.

(೩) ಬೆಳಗಾವಿ ಜಿಲ್ಲಾ ಸವದತ್ತಿ ತಾಲೂಕಿನಲ್ಲಿರುವ ಪುರಾತನ ಪ್ರಸಿದ್ಧಸ್ಥಾನವಾದ ಪೂವಲ್ಲಿ ಅಂದರೆ ಈಗಿನ ಹೂಲಿಯೆಂಬ ಗ್ರಾಮದೊಳಗೆ ಮರುಳಸಿದ್ಧನೊಬ್ಬನು ಆಗಿದ್ದಾನೆ. ಈಗಲು ಅಲ್ಲಿ ಆತನ ಹೆಸರಿನ ಗವಿಯು ಒಂದು ಇರುವದು. ಅದಕ್ಕೆ ಮಣಿಸಿದ್ಧೇಶ್ವರ ಗವಿ ಎಂದು ಜನಗಳು ಕರೆಯುತ್ತಿರುತ್ತಾರೆ.

(೪) ನೈಜಾಮ ಸಂಸ್ಥಾನಕ್ಕೆ ಸೇರಿರುವ ಕೊಪ್ಪಳಜಿಲ್ಲಾ ಕೆಂಭಾವಿ ಎಂಬಲ್ಲಿ ಮರುಳಸಿದ್ಧ ನೊಬ್ಬನು ಆಗಿದ್ದಾನೆ. ಈಗಲೂ ಗುಡಿ ಇದ್ದು ಉತ್ಸವಾದಿಗಳು ನಡೆಯುತ್ತವೆ.

(೫) ಮಾದಿಗ ಮರುಳಸಿದ್ಧ ಈತನು ಪೀಠಾಧಿಪತಿಯಾದ ಮರುಳಸಿದ್ಧನ ಪವಿತ್ರ ನಾಮಧಾರಿಯಾಗಿ ಆತನ ಸೇವೆಯನ್ನು ಮಾಡಿ ಕೊನೆಗೆ ಅಲ್ಲಿಯೆ ದೇಹ ಬಿಟ್ಟಿದ್ದಾನೆ. ಈತನ ಸಮಾಧಿಯು ಈಗಲೂ ಉಜ್ಜಯನಿಯ ಮಾದಿಗ ಕೇರಿಯಲ್ಲಿ ಇದೆ. * ನಾವು ಕಣ್ಣಾರೆ ಕಂಡಿದ್ದೇವೆ ಈ ರೀತಿಯಾಗಿ ಇವರೆಲ್ಲರ ಕುರುಹುಗಳು. ಆಯಾ ಸ್ಥಾನಗಳಲ್ಲಿ ಕಂಡುಬರುವವು

ಅ. ನ. ರವರ ವಿಮರ್ಶೆಯನ್ನು ಓದಿದೊಡನೆಯೆ ಆಚಾರ್ಯ ಮರುಳಸಿದ್ಧರು ಮಾದಿಗರೆ ? ಎಂದು ದಿಗಿಲು ಪಟ್ಟೆ. ಕೂಡಲೆ ಉಜ್ಜಯನಿಗೆ ನಿಜ ಸಂಗತಿಯನ್ನು ತಿಳಿಯ ಬೇಕಾಗಿ ಹೋಗಬೇಕು ಹೋದಂದಾಯಿತು ಅಲ್ಲಿಗೆ ಹೋಗಿ ಪರಿಶೋಧಿಸಲು ವಸ್ತುಸ್ಥಿತಿಯು ವಿಪರೀತವಾಗಿ ಕಂಡು ಬಂದಿತು. ನಮ್ಮ ದೇಶದಲ್ಲೆಲ್ಲ ಪಂಚಪೀಠದ ಮಹಾಚಾರ್ಯರ ಸತ್ಯ ಶಿವಶರಣ ಮಂಗಲನಾಮವನ್ನು ಇಟ್ಟುಕೊಳ್ಳುವದು ಹಾಗು ಕರೆಯುವದು ಸಾಂಪ್ರದಾಯಕವಾಗಿ ಬಂದಿರುವದು. ಅದ ಪ್ರಯುಕ್ತ ಅವರ ಹೆಸರಿನಿಂದ ಹಾಗೂ ಸೇವೆಯಿಂದ ಭಕ್ತಿಭಾವದಿಂದ ಧನ್ಯರಾಗಿ ಹೋದ ವ್ಯಕ್ತಿಗಳೆಷ್ಟೋ ಇದ್ದಾರೆ. ಅಂಥವರಲ್ಲಿ ಮಾದಿಗರಲ್ಲಿಯ ಮರುಳಸಿದ್ಧನೂ ಒಬ್ಬನು. ಈಗಲೂ ಉಜ್ಜಯನಿಗೆ ಹೋದರೆ ಮಾದಿಗರಕೇರಿಯಲ್ಲಿ ಈತನ ಅವಶೇಷ ದೃಗ್ಗೋಚರವಾಗುತ್ತಲಿದೆ. ಆದು ಕಾರಣ ಆಚಾರ್ಯ ಮರುಳಸಿದ್ಧನೇ ಬೇರೆ; ಮಾದಿಗ ಮರುಳಸಿದ್ಧನೇ ಬೇರೆ. ಒಂದೇ ಊರಾದುದರಿಂದಲೊ ಮತ್ತಾವ ಕಾರಣದಿಂದಲೋ (?) ಅ. ನ. ರವರು ಆಚಾರ್ಯ ಮರುಳಸಿದ್ಧರನ್ನು ಮಾದಿಗ ಮರುಳಸಿದ್ಧರನ್ನು ಮಾದಿಗ ಮರುಳಸಿದ್ಧನೆಂದು ಭ್ರಾಂತಿಪಟ್ಟಿದ್ದಾರೆ. ವಿರೂಪಾಕ್ಷ ಪಂಡಿತರಿಂದ ಬರೆಯಲ್ಪಟ್ಟಿರುವ ಹೆಸರುಗೊಂಡ ಚನ್ನಬಸವ ಪುರಾಣದ ಐದನೆಯ ಖಂಡ ೪೯ನೆಯ ಸಂಧಿ ೨೧ನೆಯ ಪದ್ಯದಲ್ಲಿ ಚನ್ನಬಸವಣ್ಣನು ಸಿದ್ಧರಾಮ ದೇವರಿಗೆ ಪಂಚಕಲಶ ಸ್ಥಾಪನ ಪೂರ್ವಕವಾಗಿ ದೀಕ್ಷಾ ಸಂಸ್ಕಾರ ವೆಸಗಿ ಅನಂತರ ಆಯಾಕಲಶಗಳಿಗೆ ಅಧಿಪತಿಗಳಾಗಿರುವ ಮಹಾಚಾರ್ಯರ ಸಂಬಂಧವಾಗಿ ಈ ರೀತಿಯಾಗಿ ಹೇಳುತ್ತಾನೆ.

" ತಿಳಿಯೆ ಮನು ಮುನಿ ಪಿಶಾಚಾವಳಿಗೆ ಕಿಂಪುರುಷ || ಕುಲಕೆ ವರ ಶೈವಾಗ ಮೋಕ್ತ ಪ್ರಕಾರದಿಂ ||

ನಲವಿನಿಂ ದೀಕ್ಷೆಯಂ ಮಾಡಿ ಮರ್ತ್ಯದ ಜನರ ಭವಬಂಧಮಂ ಕಳೆಯಲು ||

ಇಳೆಯೊಳವರಂತದಿಂ ರೇವಣಾಸಿದ್ಧ ನಿ ||

ರ್ಮಲ ಮರುಳಸಿದ್ಧನೇ ಕೋರಾಮನತುಳಗುಣ |

ನಿಳಯರಾ ಪಂಡಿತರಾಧ್ಯರಾದರ್ ಕ್ರಮದೊಳವರಿರುವನೀಂ ಕೇಳ್ವುದು||

ಅಲ್ಲದೆ ಶ್ರೀಕರ ಭಾಷ್ಯಕಾರನಾದ ಶ್ರೀಪತಿ ಪಂಡಿತನು. ತನ್ನ ಭಾಷ್ಯಾರಂಭದಲ್ಲಿ

"ಸಿದ್ಧಾರ್ಯಂ ಮರುಳ ಪ್ರಭು ಭುವನುತಂ ತಂ ಮನ್ಮಹೇ ಶ್ರೇಯಸೇ" ಎಂದು ಮಂಗಳವನ್ನಾಚರಿಸಿದ್ದಾರೆ. ಇದರಂತೆಯೇ ಬೊಮ್ಮರಸ ಮೊದಲಾದ ಅನೇಕ ಕವಿಗಳು ಈ ಮಹಾಚಾರ್ಯನನ್ನು ಬಹು ಭಕ್ತಿ ಭಾವದಿಂದ ಕೊಂಡಾಡಿದ್ದಾರೆ ಹೀಗೆ ಸ್ತೋತ್ರ ಪಾತ್ರನಾದವನು ಆಚಾರ್ಯ ಮರುಳಸಿದ್ಧನೆಂದು ಸ್ಪಷ್ಟವಾಗಿ ದೃಢಪಡುತ್ತಲಿದೆ. ಶ್ರೀ ರೇಣುಕರ ಜನನ ಸ್ಥಾನವಾಗಿ ಪ್ರಸಿದ್ಧಿಗೊಂಡಿರುವ ಕೊಲ್ಲಿಪಾಕಿಯ ಪಕ್ಕದ ಬೆಟ್ಟದ ನಾಲ್ಕು ಶಿಖರಗಳಿಗೆ ರೇವಣಸಿದ್ಧ ಮರುಳಸಿದ್ಧಾದಿಗಳ ಹೆಸರುಗಳಿರುವದು ಕೂಡ ಆಚಾರ್ಯ ಚತುಷ್ಟಯದ ಸೂಚನೆ ಮಾಡುವಂತಿರುವದು.

## ಶ್ರೀ ಶಿವಾಗಮಗಳಲ್ಲಿ

ತಸ್ಯನ್ಮರುಳಸಿದ್ಧಸ್ಯ ಪಟಿಕ್ಷೇತ್ರೇ ಮಹತ್ತರೇ ॥
ಸಿದ್ಧೇಶಲಿಂಗಾಜ್ಜನನ ಮಾವಾಸೋಜ್ಜಯಿನೀ ಪುರೇ ॥

ಎಂದು ಮರುಳಸಿದ್ಧರ ಜನನ ಸ್ಥಾನ ವಾಸಸ್ಥಾನಗಳು ನಿಕ್ಕಳವಾಗಿ ಹೇಳಲ್ಪಟ್ಟಿರುವವು. ಇಂತು ಜಗದ್ಗುರುವಾಗಿ ಮೆರೆದ ಹಾಗು ಜಗನ್ನುತನಾದ ಅನೇಕ ಲೀಲೆಗಳನ್ನು ಮಾಡಿ ಪ್ರಪಂಚದ ಹಿತಸಾಧಿಸಿದ ಮರುಳಸಿದ್ಧರು ಗಣಪುಂಗವರೆಂದೂ ಸಿದ್ಧ ಸಾರ್ವಭೌಮರೆಂದೂ ಪರಮ ಪುರಾತನರಾದ ದಾರುಕರ ಅಪರಾವತಾರಿಗಳೆಂದೂ ನಿರ್ಣೀತವಾಗಿದೆ. ಜಗಜ್ಜನನಿ ಪಾರ್ವತಿಯರ ವಿವಾಹಮಂಗಲ ಕಾಲದಲ್ಲಿಯೂ ಮತ್ತು ಅರ್ಜುನ ಪಾಶುಪತಾಸ್ತ್ರ ಪ್ರದಾನ ಕಾಲದಲ್ಲಿಯೂ ಹರಿಹರ ಮತ್ತು ಷಡಕ್ಷರ ಮಹಾಕವಿಗಳಿಂದ ದಾರುಕರ ನಾಮನಿರ್ದೇಶವಾಗಿರುವದು ಕಂಡುಬರುವದು. ಇಂತಹ ಮಹಾಮಹಿಮರಾದ ಮರುಳಸಿದ್ಧರು ಮಾದಿಗರೆನ್ನುವ ಕವಿಯಾಗಲಿ ಸಂಪಾದಕರಾಗಲಿ ವೀರಶೈವ ಸಮಾಜಕ್ಕೆ ದೊಡ್ಡದೊಂದು ದ್ರೋಹವನ್ನು ಬಗೆದಂತಿಲ್ಲವೇ ?

# ವೈದ್ಯನಾಥಲಿಂಗವೂ ಮರುಳಸಿದ್ಧರೂ

ಲೇಖಕರು:— ಶ್ರೀ. ಷ ಬ್ರ. ಗುರುಮೂರ್ತಿ ಶಿವಾಚಾರ್ಯರು, ಹಿರೇಮಠ
ಸುತ್ತಗಟ್ಟಿ.

ಶ್ರೀ. ಜಗದ್ಗುರು ಮರುಳಸಿದ್ಧೇಶ್ವರರು ಉಜ್ಜಯಿನೀ ಪಟ್ಟಣವನ್ನು ಬಿಟ್ಟು ದಕ್ಷಿಣ ದೇಶದಲ್ಲಿ ಸಂಚರಿಸುತ್ತ ಬರುವಾಗ ಶ್ರೀ. ಜ. ರೇವಣಸಿದ್ಧರ ವಾಸಸ್ಥಾನವಾದ ಸಿದ್ಧಗಿರಿಯಲ್ಲಿ ಕೆಲವು ದಿವಸಗಳ ಪರ್ಯಂತ ರೇವಣಸಿದ್ಧರೊಡನೆ ಇದ್ದು ಅಲ್ಲಿಂದ ಮುಂದೆ ಪ್ರಯಾಣ ಮಾಡುವವರಾಗಿದ್ದಾರೆ.

ಕೊಲ್ಲಾಪುರವು ದೊಡ್ಡ ಪಟ್ಟಣವು. ಎಷ್ಟೋ ದಿವಸಗಳಿಂದಲೂ ರಾಜಧಾನಿಯಾಗಿ ಮೆರೆಯುತ್ತ ಬಂದಿದೆ. ಕೆಲವು ದಿವಸ ಕುಟಿಲಸಿದ್ಧರ ಆಳಿಕೆಯಲ್ಲಿಯೂ ಇತ್ತು. ಆ ಪಟ್ಟಣದಲ್ಲಿ ಮಾಯಾದೇವಿ ಎಂಬ ಒಬ್ಬ ಸ್ತ್ರೀಯಳು ಇದ್ದಳು. ಅವಳು ಒಳ್ಳೆಯ ರೂಪವತಿಯೂ ಎಷ್ಟೋ ಮಾಟ ವಿದ್ಯೆಗಳಲ್ಲಿ ಬಲ್ಲಿದಳೂ ಇದ್ದಳು. ಆಕೆಯು ಒಂದು ವಿಷದಿಂದ ತುಂಬಿದ ಕೊಡವನ್ನು ತಯಾರಿಸಿದ್ದಳು. ಅದನ್ನು ಕುಡಿದು ಯಾರು ದಕ್ಕಿಸಿಕೊಳ್ಳುವರೊ ಅವರನ್ನು ಲಗ್ನವಾಗುತ್ತೇನೆಂದು ಒಂದು ಪಂಥಮಾಡಿದ್ದಳು. ಆಕೆಯ ರೂಪಕ್ಕೆ ಮೆಚ್ಚಿ ಮನಸೋತು ಈಕೆಯನ್ನು ಲಗ್ನವಾಗಿಯೇ ತೀರಬೇಕೆಂದು ಕೊಡದಲ್ಲಿಯ ವಿಷವನ್ನು ಕುಡಿದು ಎಷ್ಟೋ ಮಂದಿ ಸಿದ್ಧರೂ ಋಷಿಗಳೂ ಮತ್ತು ಮಾಟಗಾರರೂ ಬೇರೆ ಕೆಲವರೂ ಸತ್ತು ಹೋಗಿದ್ದರು. ಈ ಕಾರ್ಯವು ಹಾಗೆಯೇ ನಡೆದೇ ಇತ್ತು. ಹೀಗಿರುವಾಗ. ಅಲ್ಲಿಗೆ ಮರುಳಸಿದ್ಧೇಶ್ವರರು ಸಿದ್ಧಗಿರಿಯನ್ನು ಬಿಟ್ಟು ಬಂದಿದ್ದಾರೆ. ಮಾಯಾದೇವಿಯು ಇವರೆಡೆಗೆ ಹೋಗಿ ನಮಿಸಿ ಎಲ್ಲರಿಗೂ ಹೇಳಿದಂತೆ ಇವರಿಗೂ ತನ್ನ ಪಂಥವನ್ನು ಹೇಳಿ ವಿಷದ ಕುಂಭವನ್ನು ತಂದಿರಿಸಿದಳು. ಆಗ ಶ್ರೀ. ಮರುಳಸಿದ್ಧರು ಈಕೆಯ ರೂಪಕ್ಕೆ ಮೋಹಿತರಾಗಿ ವಿಷ ಕುಡಿದು ಸತ್ತ ಎಷ್ಟೋ ಜನ ಸಾಧು ಸಂತರ ಶವಗಳ ಅಸ್ಥಿ ಪಂಜರಗಳ ರಾಶಿಯನ್ನು ನೋಡಿ ಕನಿಕರ ಪಟ್ಟು—ಈಕೆಯನ್ನು ಹೀಗೆಯೇ ಬಿಟ್ಟರೆ ಇನ್ನೂ ಎಷ್ಟೋ ಸತ್ಪುರುಷರನ್ನು ಹಾಳುಮಾಡುತ್ತಾಳೆ. ಈಗಲೇ ಈಕೆಯ ಗರ್ವಭಂಗವನ್ನು ಮಾಡಬೇಕೆಂದು ತಿಳಿದು, ಮಾಯೆಯಿಂದ ಕೊಡಲ್ಪಟ್ಟ ವಿಷವನ್ನು ಕುಡಿದು ಏನೂ ಆಯಾಸವಿಲ್ಲದೆ ಮುಂದಕ್ಕೆ ಹೊರಟರು.

ಪರಮಾತ್ಮನ ಅಪರಾವತಾರಿಗಳಾದ ಗುರುಗಳಿಗೆ ಆ ವಿಷದ ಬಾಧೆಯು ಎಳ್ಳಷ್ಟೂ ಆಗಲಿಲ್ಲ. ಆಗ ಮಾಯೆಯು ಈ ಚಮತ್ಕಾರವನ್ನು ನೋಡಿ ಚಕಿತಳಾದಳು. ವಿಷಪಾನ ಮಾಡಿ ಏನೊಂದೂ ವಿಕಾರವಿಲ್ಲದೆ ಶಾಂತ ಮುದ್ರೆಯಿಂದ ಇರುವ ಮತ್ತು ಮನ್ಮಥನಂತೆ ರೂಪಗಳೂ ಸಮುದ್ರದಂತೆ ಶಾಂತರೂ ದೂರ್ವಾಸರಂತೆ ಕೋಪಿಗಳೂ ಬೃಹಸ್ಪತಿಯಂತೆ ವಾಗ್ಮಿಗಳೂ ಸೂರ್ಯನಂತೆ ತೇಜಸ್ವಿಗಳೂ ಪರಶಿವನಂತೆ ಶಾಪಾನುಗ್ರಹ ಸಮರ್ಥರೂ ಆದ ಮರುಳಸಿದ್ಧರನ್ನು ನೋಡಿ ಮನದಲ್ಲಿ ಮಾಯೆಯು ಈ ಅಘಟಿತ ಘಟನಾ ಶಕ್ತಿಯಿಂದ ಕೂಡಿದ ದಿವ್ಯ ಯೋಗಿಯು ಯಾರಿರಬಹುದು? ಹಿಂದೆ ಹಾಲಾಹಲ ವಿಷವನ್ನು ಕುಡಿದು ಸಂಕಟದಲ್ಲಿ ಬಿದ್ದ ದೇವತೆಗಳನ್ನು ರಕ್ಷಿಸಿದ ಪರಶಿವನೇನಾದರೂ ಇರಬಹುದೋ ? ಅಥವಾ ಭೂಮಿಯಲ್ಲಿ ನನ್ನ ವಿಷದಿಂದ ಪೀಡಿತರಾದವರನ್ನು ಉದ್ಧರಿಸಿ ನನ್ನ ಗರ್ವಭಂಗವನ್ನು ಮಾಡಲಿಕ್ಕೆ ಶಿವನೇ ಯೋಗಿಯಾಗಿ ಬಂದಿರಬಹುದೋ ? ಹೀಗೆ ಅನೇಕ ವಿಚಾರಗಳನ್ನು ಮಾಡುತ್ತಾಳೆ. ಕಡೆಗೆ ನಿರ್ಧರಿಸಿ ಈ ಮಹಾಪುರುಷನನ್ನು ವರಿಸದಿದ್ದರೆ ನನ್ನ ಜನ್ಮವೇ ವ್ಯರ್ಥವೆಂದು ತಿಳಿದು ಮರುಳಸಿದ್ಧರ ಸಮೀಪಕ್ಕೆ ಬಂದು ತನ್ನ ತಲೆಯನ್ನು ಅವರ ಪಾದದಡಿಯಲ್ಲಿರಿಸಿ ಎದ್ದು ಕೈಮುಗಿದುಕೊಂಡು ನಿಂತು ಮಹಾನುಭಾವಾ ! ನಾನು ತಮ್ಮ ದಾಸಿಯು, ನನ್ನ ಮನೋಬಯಕೆಯನ್ನು ಪೂರೈಸಿ ಉದ್ಧರಿಸಬೇಕೆಂದಳು. ಇದನ್ನು ಕೇಳುತ್ತಲೇ ಮರುಳಸಿದ್ಧರು ಸುಮ್ಮನೇ ಮುಂದಕ್ಕೆ ಹೊರಟರು. ಅವರ ಹಿಂದೆ ಆಕೆಯೂ ಬೆನ್ನುಹತ್ತಿ ನಡೆದಳು. ಶ್ರೀ ಮರುಳಸಿದ್ಧರು ಮುಂದೆ, ಮಾಯೆಯು ಹಿಂದೆ; ಹೀಗೆ ದೊಡ್ಡ ದೊಡ್ಡ ಅರಣ್ಯಗಳಲ್ಲಿ ಹಾಯಿದು ಹೋಗುತ್ತಿದ್ದಾರೆ. ಹೀಗೆಯೇ ಕೆಲವು ದಿವಸಗಳು ಹೋದರೂ ಆಕೆಯನ್ನು ಮರುಳಸಿದ್ಧರು ಕಣ್ಣೆತ್ತಿ ನೋಡಲಿಲ್ಲ; ಮತ್ತು ಯೋಗಕ್ಷೇಮವನ್ನು ವಿಚಾರಿಸಲಿಲ್ಲ. ಮುಂದೆ ಒಂದು ಸ್ಥಾನದಲ್ಲಿ ಮರುಳಸಿದ್ಧರು ಇಳಿದುಕೊಂಡು ಅನುಷ್ಠಾನವನ್ನು ಮುಗಿಸಿಕೊಂಡಿದ್ದಾರೆ. ಒಂದು ಗಿಡದಡಿಯಲ್ಲಿ ಶಾಂತರಾಗಿ ಕುಳಿತ ಸಮಯದಲ್ಲಿ ಮಾಯೆಯು ಹೋಗಿ ಹಿರಬಾಗಿ ತನ್ನ ಎಲ್ಲ ಮನೋಬಯಕೆಯನ್ನು ಹೇಳಿಕೊಂಡಿದ್ದಾಳೆ. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಮರುಳಸಿದ್ಧರು ಸುಮ್ಮನೆ ಕುಳಿತು ಬಿಟ್ಟರು. ಆವಾಗ ಆಕೆಯು ಮರುಳಸಿದ್ಧರನ್ನು ಕುರಿತು 'ಕಾಗತಿ' ಅಂದರೆ ನನ್ನ ಮುಂದಿನ ಗತಿಯೇನು ? ಎಂದು ಕೇಳಿದ್ದಾಳೆ. ಯಾವಸ್ಥಾನದಲ್ಲಿ ಈ ವಾಗ್ವಾದ ನಡೆಯಿತೋ. ಅದೇ ಸ್ಥಾನಕ್ಕೆ 'ಕಾಗತಿ' ಎಂಬ ಹೆಸರು ಬಂದಿದೆ. ಈಗಲೂ ಕಾಗತಿ ಎಂದು ರೂಢಿಯಲ್ಲಿ ಪ್ರಸಿದ್ಧ ವಿದ್ದ ಊರು. ಇದೇ ಬೆಳಗಾಂವಿಯ ಶಹರದಿಂದ ಉತ್ತರಕ್ಕೆ ಐದು ಮೈಲು ಅಂತರದಲ್ಲಿ ಕಾಗತಿ ಎಂಬ ಊರು ಇದೆ. ಆ ಊರು ಪ್ರಸಿದ್ಧವಾದ ಸಿದ್ಧೇಶ್ವರ ದೇವ

ಸ್ಥಾನ ಒಂದಿದೆ ಇದು ಮರುಳಸಿದ್ಧರ ಸ್ಮಾರಕ ವಿರಬಹುದು. ಮಾಯೆಯು 'ಕಾಗತಿ' ಎಂದು ಕೇಳಿದ ಕೂಡಲೇ ಮರುಳಸಿದ್ಧರೂ ಸಿಟ್ಟಿಗೆದ್ದು ಮೂರ್ಖಳೇ ! ಎಲ್ಲಾ ಕುಟಿಲಸಿದ್ಧರಂತೆ ನನ್ನನ್ನು ತಿಳಿದಿರುವಿಯಾ ? ನಿನ್ನ ರೂಪಕ್ಕೆ ನಾನು ಮೋಹಿಸುವವನಲ್ಲ. ಹಿಗೆಯೇ ನಿನ್ನನ್ನು ಬಿಟ್ಟರೆ ದೊಡ್ಡ ಅನಾಹುತವನ್ನು ಮಾಡುವಿ ಎಂದು ತಿಳಿದು, ನಿನ್ನ ಗರ್ವಭಂಗ ಮಾಡಲಿಕ್ಕೆ ಬಂದಿದ್ದೇನೆಂದು ಅಂದರು. ಅದಕ್ಕೆ ಅವಳಿಗೂ ಸಿಟ್ಟು ಬಂದು ನನ್ನ ಬಲೆ ಯಲ್ಲಿ ನಿನ್ನಂಥ ಎಷ್ಟೋ ಜನರು ಸಿಕ್ಕು ದಾಟಲಾರದೆ ಹೋಗಿದ್ದಾರೆ. ನಿನ್ನ ಈ ದಿವ್ಯ ರೂಪಕ್ಕೆ ಮೆಚ್ಚಿ ನಿನ್ನನ್ನು ವರಿಸುವ ಅಪೇಕ್ಷೆಯಿಂದ ನನಗೆ ಏನೂ ಮಾಡದೆ ನಾಲ್ಕಾರು ದಿವಸಗಳಿಂದ ಅನ್ನ ನೀರಿಲ್ಲದೆ ನಿನ್ನ ಬೆನ್ನು ಹತ್ತಿ ಬಂದು ದಕ್ಕೆ ನನ್ನನ್ನು ಉಳಿದ ಸ್ತ್ರೀಯರಂತೆ ಕಃಪದಾರ್ಥವೆಂದು ತಿಳಿದಿರುವಿಯೊ ? ಹಾಗಾದರೆ ಇಗೋ ನೋಡು ಮಾಯಾಜಾಲವನ್ನು ಬಿಡುತ್ತೇನೆಂದು ಅನೇಕ ತೆರನಾದ ಯೋಜನೆಗಳನ್ನು ಮಾಡುತ್ತಾಳೆ, ಏನೂ ಸಾಮರ್ಥ್ಯವು ನಡೆಯು ಲಾರದೆ ನಿರಾಶಳಾಗುತ್ತಾಳೆ. ಮರುಳಸಿದ್ಧರು ಆಕೆಗೆ ಅನೇಕ ತೆರವಾಗಿ ತಿಳಿಹೇಳಿದರೂ ಕೇಳದಾದಳು. ಕಡೆಗೆ ನಾನು ಕೊಟ್ಟಿರುವ ವಿಷವನ್ನು ತಿರುಗಿ ನನಗೆ ಕೊಟ್ಟುಬಿಡು ಎನ್ನುತ್ತಾಳೆ. ಹಾಗಾದರೆ ತೆಗೆದುಕೊ ಎಂದು ಮರುಳಸಿದ್ಧರು ಕುಡಿದ ವಿಷವನ್ನು ಕಾರುತ್ತಾರೆ. ಅದರ ದ್ಯೋತಕವು ಈಗಲೂ ಕಾಗತಿಯ ಸಿದ್ಧೇಶ್ವರ ದೇವಾಲಯದಲ್ಲಿರುವದು. ಅದಕ್ಕೆ ಈಗ ವಿಷದ ಕಲ್ಲು ಅನ್ನುತ್ತಾರೆ ಕೆಲವರು ( ಗಾರಗಲ್ಲು ) ಅನ್ನುತ್ತಾರೆ, ಆ ಕಲ್ಲು ಕಪ್ಪು ಬಣ್ಣದ್ದು ಇದ್ದು ಸಾಧಾರಣ ಆರು ಫೂಟು ಚೌರಸದಲ್ಲಿ ದುಂಡನಾದ ಆಕಾರಉಳ್ಳದಾಗಿದೆ. ಅದು ದೇವಾಲಯದ ಮಧ್ಯಭಾಗದಲ್ಲಿ ಇರುವುದು. ಈ ವಿಷದ ಕಲ್ಲಿನ ಮಹತ್ವವನ್ನು ಅಲ್ಲಿಯ ಜನರು ಬಹಳವಾಗಿ ಕೊಂಡಾಡು ತ್ತಾರೆ.

ಮರುಳಸಿದ್ಧರು ತಾವು ಕುಡಿದಿರುವ ವಿಷವನ್ನು ಕಾರಿದ ಈ ಚಮ ತ್ಕಾರವನ್ನು ನೋಡಿ ಮಾಯೆಗೆ ಮತ್ತಿಷ್ಟು ಆಶ್ಚರ್ಯವೆನಿಸಿ ಈತನು ಮಹಾಂತನಾಗಿ ಇರುವುದೇ ನಿಶ್ಚಯ; ಇವನನ್ನು ಬಿಟ್ಟರೆ ಮುಂದೆ ಕಾಣು ವುದು ಅಪರೂಪ. ಹೇಗಾದರೂ ಮಾಡಿ ವರಿಸಬೇಕೆಂದು ಅವರ ಮುಂದೆ ಅನೇಕ ತೆರನಾದ ಹಾವಭಾವಗಳನ್ನು ಮಾಡಲಿಕ್ಕ ಹತ್ತಿದಳು. ಆಗ ಮರುಳ ಸಿದ್ಧರು ಸಿಟ್ಟಿಗೆದ್ದು ಆಕೆಯ ಮೂಗು ಮೊಲೆಗಳನ್ನು ಕೊಯ್ದು ವಿರೂಪಳು ನ್ನಾಗಿ ಮಾಡಿದರು.

ಈ ಮಾಯಾದೇವಿ ಮೂರ್ತಿಯು ಕಾಗತಿಯ ಸಿದ್ಧೇಶ್ವರ ಗುಡಿಯಲ್ಲಿ ಈಗಲೂ ಇದೆ. ಅದಕ್ಕೆ ಮಾಯಾದೆ ವಿಯೆಂದೇ ಕರೆಯುತ್ತಾರೆ. ಈ ಹೆಣ್ಣು ಮೂರ್ತಿಯದು ೧॥ ಫೂಟು ಎತ್ತರವಾಗಿಯೂ ೧ ಫೂಟು ಅಗಲ

ವಾಗಿಯೂ ಇರುತ್ತದೆ. ಗರ್ಭ ಗುಡಿಯಲ್ಲಿ ಶ್ರೀ ಸಿದ್ಧೇಶ್ವರ ಲಿಂಗವು ಸಾಧಾರಣ ೨ ಫೂಟು ಎತ್ತರವಾಗಿಯೂ ೨|| ಫೂಟು ಅಗಲಾಗಿಯೂ ಇರುತ್ತದೆ.

ಮರುಳಸಿದ್ಧರು ಅಲ್ಲಿಂದ ಪಶ್ಚಿಮ ದಿಕ್ಕಿಗೆ ಪ್ರಯಾಣ ಮಾಡಿ ಸಾಧಾರಣ ೮—೧೦ ಮೈಲು ಅಂತರದಲ್ಲಿರುವ ಒಂದು ಗುಡ್ಡದಲ್ಲಿ ಹೋದರು ಅಲ್ಲಿಯೂ ವಿರುಪಳಾದ ಮಾಯೆಯು ಮರುಳಸಿದ್ಧರ ಹಿಂದೆಯೆ ಹೋದಳು. ಅಲ್ಲಿಗೆ ಗರ್ವರಹಿತಳಾಗಿ ದೀನಳಾಗಿ ಮರುಳಸಿದ್ಧನ ಚರಣಗಳಿಗೆರಗಿ "ದೇವಾ! ನನ್ನನ್ನು ಉದ್ಧರಿಸು ನಿನ್ನ ಮಹಿಮೆಯನ್ನು ಅರಿಯದೆ ಮಾಡಿದ ಅಪರಾಧವನ್ನು ಕ್ಷಮಿಸು. ಮತ್ತು ವಿರೂಪಳಾದ ನನ್ನನ್ನು ಮೊದಲಿನ ರೂಪದಂತೆ ಸುರೂಪಗಳನ್ನಾಗಿ ಮಾಡು. ನಾನು ಗರ್ವದಿಂದ ದೂರಳಾಗಿದ್ದೇನೆ. ನನಗೆ ಉಪದೇಶವನ್ನು ಮಾಡು, ಶಿವ ಪಥವನ್ನು ತೋರು. ನಿನ್ನ ಶಿಷ್ಯಳಾಗಿ ನಿನ್ನ ಉಪದೇಶದಂತೆ ನಡೆಯುತ್ತೇನೆಂ"ದು ಅಂದಳು. ಕರುಣಾಳುಗಳಾದ ಮರುಳಸಿದ್ಧರು ಆಗ ಆ ಗುಡ್ಡದಲ್ಲಿರುವ ಕೆಲವು ತೊಪ್ಪಲಗಳನ್ನು ತೋರಿಸಿ ಇವುಗಳನ್ನು ತಂದು ಅರೆದು ಕತ್ತರಿಸಿ ಹೋಗಿರುವ ಮೂಗು ಮೊಲೆಗಳಿಗೆ ಹಚ್ಚು ಎಂದರು. ಅದರಂತೆ ಮಾಡಲಾಗಿ ಆಕೆಯ ಮೂಗು ಮೊಲೆಗಳು ಆ ಗುಡ್ಡದಲ್ಲಿಯ ವನಸ್ಪತಿಗಳ ಲೇಪದಿಂದ ಚಿಗಿತು ಮೊದಲಿನಂತೆಯೇ ಆದವು. ಆಗ ಗರ್ವದೂರಳಾಗಿ ಮಾಯೆಯು ಅವರ ಶಿಷ್ಯಳಾಗಿದ್ದಾಳೆ. ಅಲ್ಲಿ ವೈದ್ಯನಾಥನೆಂಬಹೆಸರಿನ ಲಿಂಗವೂ ಇದೆ. ಈ ಲೇಖದೊಂದಿಗೆ ಆ ಚಿತ್ರವೂ ಅದರ ಮುಂದಿನ ನಂದಿಯೂ ಮರುಳಸಿದ್ಧರು ವೈದ್ಯಶಾಸ್ತ್ರದಲ್ಲಿಯೂ ಬಲ್ಲಿದರಿದ್ದರೆಂದು ಅಚ್ಚಾಗಿದೆ. ಅವರ ಕೆಲವು ಆಖ್ಯಾಯಿಕೆಗಳಿಂದ ತಿಳಿದು ಬರುತ್ತದೆ. ಅಲ್ಲದೆ ಚರಕ, ಸುಶ್ರುತ ಮೊದಲಾದ ಆಯುರ್ವೇದ ಶಾಸ್ತ್ರಜ್ಞರ ಮಾಲಿಕೆಯಲ್ಲಿ ರೇವಣಸಿದ್ಧ ಮರುಳಸಿದ್ಧರ ನಾಮನಿರ್ದೇಶವೂ ಇದೆ. ಈ ಲಿಂಗ ಮರುಳಸಿದ್ಧರಿಂದ ಸ್ಥಾಪಿತವಾಗಿರಬಹುದು ಈ ವೈದ್ಯನಾಥ ದೇವಾಲಯವು ಬಹಳ ಪ್ರಸಿದ್ಧವೂ ಪುರಾತನವೂ ಆಗಿದೆ. ರೂಢಿಯಲ್ಲಿ ವೈಜನಾಥನೆಂದು ಕರೆಯುವರು. ವೈದ್ಯನಾಥನ ಎಡಭಾಗದಲ್ಲಿ ಸಾಧಾರಣ ೪೦-೫೦ ಫೂಟು ಅಂತರದಲ್ಲಿ ಒಂದು ಪಾರ್ವತೀ ದೇವಿಯ ಗುಡಿಯೂ ಅದೆ. ಇದೂ ಬಹಳ ಪುರಾತನ ವಾದುದಾಗಿದೆ. ಮತ್ತು ಭದ್ರವಾದ ಕಟ್ಟಡದಿಂದೊಡಗೂಡಿದ ದೇವರ ವಾಡಿ ಎಂಬ ಹಳ್ಳಿ ಇನಾಮಾಗಿದೆ. ಈ ದೇವರ ಅರ್ಚಕರು ವೀರಶೈವರಾಗಿದ್ದಾರೆ. ಈ ಭಾಗದಲ್ಲಿ ಈ ದೇವಾಲಯದ ಪ್ರಸಿದ್ಧಿಯೂ ಹೆಚ್ಚಾಗಿದೆ. ಪ್ರತಿವರ್ಷ ಚೈತ್ರಮಾಸದ ಪೌರ್ಣಿಮೆಗೆ ವೈದ್ಯನಾಥನ ಜಾತ್ರೆಯು ಕೂಡುತ್ತದೆ. ಒಳ್ಳೇ ವೈಭವದಿಂದ ಜಾತ್ರೆಯಾಗುತ್ತದೆ. ಸರಕಾರದವರು ಜಾತ್ರೆಯ ವ್ಯವಸ್ಥೆಯನ್ನು ದಕ್ಷತೆಯಿಂದ ನೆರವೇರಿಸುತ್ತಾರೆ. ವೈದ್ಯನಾಥನಲ್ಲಿ ಬೇಸಗೆಯಲ್ಲಿ ಹವೆಯು ಬಹಳ ಉತ್ತಮವಾಗಿರುತ್ತದೆ ದೇವರ

ಪೂಜೆಯು ಪ್ರತಿದಿವಸ ವೈಭವದಿಂದ ಸಾಗುತ್ತದೆ. ಪೂಜಾರಿ, ಬಾರಿಸುವವ, ಕಸಹೊಡಿಯುವವ ಇನ್ನು ದೇವಾಲಯಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಮಾಡುವ ಎಲ್ಲ ಜನರಿಗೂ ಭೂಮಿಗಳು ಇನಾಮಾಗಿದೆ. ಒಟ್ಟಿಗೆ ವೈದ್ಯ ನಾಥನ ವೈಭವವು ಒಹುಸೊಗಸಾಗಿ ಸಾಗುತ್ತದೆ. ವೈದ್ಯನಾಥ ಗುಡ್ಡವು ಇತಿಹಾಸ ಪ್ರಸಿದ್ಧ ವನಸ್ಪತಿಗಳ ಸ್ಥಾನವಾಗಿದೆ, ಎಷ್ಟೋ ವೈದ್ಯ ತಜ್ಞರು ಅಮೂಲ್ಯಗಳಾದ ವನಸ್ಪತಿಗಳನ್ನು ಹುಡುಕಾಡುತ್ತಲಿರುತ್ತಾರೆ. ಬೆಳಗಾಂವಿಯ ಶಹರದಿಂದ ಪಶ್ಚಿಮಕ್ಕೆ ೧೧ ಮೈಲು ಅಂತರದಲ್ಲಿ ಇದು ನೈಜವಾದ ಸೃಷ್ಟಿಯ ಸೌಂದರ್ಯದಿಂದ ಒಪ್ಪುತ್ತದೆ. ಮರುಳಸಿದ್ಧರು ಹೀಗೆ ಮಾಯೂಗರ್ವಭಂಗವನ್ನು ಮಾಡಿದುದು ಈಗಲೂ ಪ್ರತ್ಯಕ್ಷ ಪ್ರಮಾಣವಾಗಿರುವುದು ವಿಜ್ಞಾನಿಗಳ ಸಂದೇಹವನ್ನು ದೂರಮಾಡಲು ಅನುಕೂಲವಾಗಿದೆ.



# ಹರಪನಹಳ್ಳಿ ನಾಯಕರು
# ಉಜ್ಜಯಿನೀ ಪೀಠಕ್ಕೆ ಶಿಷ್ಯರಾದುದು

ಲೇ|| ಪಂ|| ವೇ|| ನೀಲಕಂಠ ಶಾಸ್ತ್ರಿಗಳು. ಗುರುಪಾದ ದೇವರ ಮಠ
ಹರಪನಹಳ್ಳಿ

ವಿಜಯ ನಗರದ ಅರಸು ಮನೆತನದವರು ವೈಭವದಿಂದ ಕರ್ನಾಟಕ ರಾಜ್ಯವನ್ನು ಪರಿಪಾಲಿಸುತ್ತಿರುವಾಗ ಆ ರಾಜರ ಪರಮಾನುಗ್ರಹ ಪಾತ್ರರಾದ ಪಾಳೆಯಗಾರರಲ್ಲಿ ಶ್ರೀ ಹರಪನಹಳ್ಳಿಯ ಪಾಳೆಗಾರನೊಬ್ಬನು. ಇವರು ಮೊಟ್ಟಮೊದಲು ಶ್ರೀ ಚಂಡುಲಾ ಪರಮೇಶ್ವರಿಯ ಪರ್ವತದಲ್ಲಿ ಬೇಟೆಯನ್ನಾಡುತ್ತಾ ಸಾಯಂಕಾಲವಾಗಲು ಆ ದೇವಿಯ ಗುಡಿಯಲ್ಲಿಯೇ ಶಯನಮಾಡಿದರು. ಮೂಲ ಪುರುಷರು ದಾದಯ್ಯ, ರಂಗಯ್ಯ ಎಂಬ ನಾಯಕರು. ಇವರಲ್ಲಿ ಜ್ಯೇಷ್ಠನಾದ ದಾದಯ್ಯ ನಾಯಕನು ಮಲಗಿದಾಗ್ಗೆ ದೇವಿಯು ಸ್ವಪ್ನದಲ್ಲಿ ಬಂದು, ಮಗನೆ ನೀನು ನಿನ್ನ ಕಿರಾತ ಸೈನ್ಯದಿಂದಲೂ, ಅನುಜನಿಂದಲೂ ಯುಕ್ತನಾಗಿ ತುಂಗಭದ್ರೆಯನ್ನು ದಾಟಿ 'ಕಾನಹಳ್ಳಿ' ಎಂಬಲ್ಲಿ ಹೋಗಿ ನೆಲಸಿರು. ನಿನಗೆ ಹೊಯಿಸಳ ರಾಜರ ಮುಖ್ಯ ನಗರಿಯಾದ "ಬಾಗುಳಿ"ಯ ರಾಜ್ಯದಲ್ಲಿ ಪಟ್ಟಗಟ್ಟುತ್ತೇನೆ. ಅಲ್ಲಿ •ರಾಜನಾಗಿ ಧರ್ಮದಿಂದ ರಾಜ್ಯವನ್ನಾಳು ಎಂದು ತಿಳಿಸಿದಳು. ಯಾವತ್ತು ನಾಯಕರಿಗೂ, ಅನುಜರಿಗೂ ಈ ವಿಷಯವನ್ನು ತಿಳಿಸಿ ಹೊರಡುವುದಾಗಿ ಕೇಳಿಕೊಂಡನು. ಅಜ್ಜ ಮುತ್ತಜ್ಜಂದಿರ ಕಾಲದಿಂದಲೂ ಸುಖವಾಸಯೋಗ್ಯವಾಗಿರುವ ಜನ್ಮ ಭೂಮಿಯನ್ನು ಬಿಡುವುದು ಹೇಗೆಂದು ಯೋಚಿಸುತ್ತಿದ್ದರು; ಮತ್ತು ದೇವಿಯು ಸ್ವಪ್ನದಲ್ಲಿ ಮೂರು ಸಾರಿಯೂ ಬಲಾತ್ಕರಿಸಲು ಎಲ್ಲರನ್ನೂ ಕರೆದುಕೊಂಡು ಹೊರಟು "ಕಾನಹಳ್ಳಿ" ಎಂಬಲ್ಲಿಗೆ ಬಂದು ಬಿಡಾರವನ್ನು ಹಾಕಿದರು. ಅಲ್ಲಲ್ಲಿ ಅಡವಿಯಲ್ಲಿ ಬೇಟೆಯಾಡುತ್ತಾ ದೂರ ತೆರಳಿ ಶ್ರಾಂತನಾಗಿ ಗಿಡದ ನೆಳಲಲ್ಲಿ ವಿಶ್ರಮಿಸಿ ನಿದ್ರಿಸಿರುವಾಗ್ಗೆ ಒಂದು ಸರ್ಪವು ತಲೆಯ ಮೇಲೆ ಆಡುತ್ತಿದ್ದುದನ್ನು ನೀಲಗುಂದ ಗ್ರಾಮದ ಗೌಡರು ಬ್ರಹ್ಮಪುರಿಯ ಕಾಂಭಟ್ಟರು ಕಂಡು ದಾದಯ್ಯನನ್ನು ಎಚ್ಚರಿಸಿದರು. ಹಾವು ಹೊರಟು ಹೋಯಿತು. "ನಿನಗೆ ರಾಜ್ಯವಾಳುವ ಯೋಗವಿದೆ. ನೀನು ರಾಜನಾಗುತ್ತಿ" ಎಂದರು. ಹಾಸ್ಯಮಾಡಿ, ದಾದಯ್ಯನು "ಸ್ವಾಮಿ !! ನಾನು ರಾಜನಾದರೆ ನಿಮ್ಮ ಎದುರಿಗೆ ಪರದೇಶಿಗಳಂತೆ ಊರೂರು ಅಲೆಯುವ ಸಂಭವವೇ ಇರಲಾರದು. ನಿಮ್ಮಗೆ ಜಹಗೀರು ಮೊದಲಾದ ಸಂಪತ್ತನ್ನು ಕೊಟ್ಟು ಬಿಡುತ್ತೇನೆ" ಎಂದನು. ಅವರು ಹಾಗೆಯೇ ಆಗಲಿ ಎಂದು ಅನುಗ್ರಹಿಸಿ

ಹೊರಟುಹೋದರು. ತನ್ನ ಅನುಯಾಯಿಗಳಿಂದೊಡಗೂಡಿ ಕಾನನ ಸಂಚಾರಮಾಡುತ್ತಾ "ಕೊಟ್ಟೂಕಲ್ಲು" ಸರಿಹದ್ದಾಗಿರುವ ಕೆಲವು ಗ್ರಾಮಗಳನ್ನು ವಶಮಾಡಿಕೊಂಡು ಬಾಗಳಿಗೆ ಸಂಬಂಧಿಸಿದ ರಾಜ್ಯ ಪಾಲನ ಮಾಡುತ್ತಿದ್ದನು. ಹೀಗಿರಲು ಒಮ್ಮೆ ನಿಚ್ಚವ್ವನಹಳ್ಳಿ ಪ್ರಾಂತದ ಘೋರಕಾಂತಾರದಲ್ಲಿ ಸಂಚಾರದ ಇಚ್ಛೆಯು ಹುಟ್ಟಿತು. ಹೋಗಲಾಗಿ ಅಲ್ಲಿ ಉಚ್ಚಂಗಿದುರ್ಗದ ಪಾಳೆಯಗಾರರ ಅಭ್ಯುದಯವನ್ನು ನೋಡಿ ಸಹಿಸಲಾರದೆ ಬಸಾಪಟ್ಟಣದ ಕೆಂಗಣ್ಣನಾಯಕನು ಉಚ್ಚಂಗಿದುರ್ಗಕ್ಕೆ ದಾಳಿಯಿಕ್ಕಿದ್ದನು. ಆಗ ದಾದಯ್ಯನು ಹೀಗೆ ಆಲೋಚಿಸಿದನು:— ನಮಗೂ ಗುಂಡಗೊಂಡಲ ಬೆಡಗಿನವರಿಗೂ, ಚಿತ್ರಕಲ್ಲು ಬೆಡವು, ಕಾಮನಕಲ್ಲು ಬೆಡಗಿನವರಿಗೂ ಬಾಂಧವ್ಯವಿದೆ. ಆಪತ್ತಿನಕಾಲದಲ್ಲಿ ನಾನು ಒದಗುವುದು ಉಚಿತವೆಂದೆಣಿಸಿ ಕಿರಾತ ಸೈನ್ಯದೊಡನೆ ಲಗ್ಗೆಹಾಕಿದನು. ಕೆಂಗಣ್ಣ ನಾಯಕನು ಬೆದರಿದನು. ಶತ್ರುಭೀತಿಯಿಂದ ಮುಚ್ಚಿದ್ದ ಉಚ್ಚಂಗಿದುರ್ಗದ ಬಾಗಿಲು ತೆರೆದವು. ತತ್‌ಕ್ಷಣವೇ ದಾದಯ್ಯನು ಪ್ರವೇಶಿಸಿ ಅಭಯವನ್ನಿತ್ತು ಬಿಲ್ಲನ್ನು ತೆಗೆದುಕೊಂಡು ಕೆಂಗಣ್ಣನಾಯಕನು ಹತ್ತಿಕೊಂಡಿದ್ದ ಆನೆಯು ನೆಲಕ್ಕೆ ಉರುಳುವಂತೆ ದಾದಣ್ಣನು ಬಾಣವನ್ನೆಸೆದು ಸಿಂಹನಾದವನ್ನು ಮಾಡಿದನು. ಪರಿಪರಿಮಾರ್ಗವಾಗಿ ಶತ್ರುಗಳು ಪಲಾಯನ ಮಾಡಿದರು. ಉಚ್ಚಂಗಿ ದುರ್ಗದ ಪಾಳೆಗಾರನಾದ ಚಿಕ್ಕಣ್ಣನಾಯಕನು ದಾದಣ್ಣನು ಮಾಡಿದ ಮಹೋಪಕಾರಕ್ಕೆ ತನ್ನ ಮಗಳಾದ ಹೊನ್ನನಾಯಕಿಯನ್ನು ದಾದಣ್ಣನಾಯಕನಿಗೆ ಕೊಟ್ಟು ವಿವಾಹಮಾಡಿ ಸಂಬಂಧವನ್ನು ಬೆಳೆಸಿದನು. ಆಗ್ಗೆ ಉಚ್ಚಂಗಿದುರ್ಗವೆಂಬ (ರಾಜಧಾನಿಯನ್ನು) ಕೋಟೆಯನ್ನು ವರದಕ್ಷಿಣೆಯಾಗಿ ಕೊಟ್ಟನು. ಕೋಟೆಯನ್ನು ವಶಪಡಿಸಿಕೊಂಡು ಅಲ್ಲಿಯೆ ಆ ರಾತ್ರಿ ಮಲಗಿರಲು ಉತ್ಸವಾಂಬಾದೇವಿಯು ಸ್ವಪ್ನದಲ್ಲಿ ದರ್ಶನವಿತ್ತು ನಾಳೆ ಅಡವಿಯ ಮಾರ್ಗವಾಗಿ ನೀನು ಕಾನಳ್ಳಿಗೆ ಹೋಗುವಾಗ್ಗೆ ಬಾಯಿಕಾರ ರಾಮಪ್ಪನ ಐಶ್ವರ್ಯವನ್ನು ಹೇರಿಕೊಂಡು ಹೋಗುತ್ತಿದ್ದ ಒಂಟೆಗಳು, ದಾರಿತಪ್ಪಿ ನಿನಗೆ ಅಭಿಮುಖವಾಗಿ ಬರುವವು. ನೀನು ಧೈರ್ಯದಿಂದ ಅವನ್ನು ತಡೆದು ಆ ಐಶ್ವರ್ಯವನ್ನು ಸ್ವಾಧೀನಮಾಡಿಕೊಂಡು ನನ್ನ ಪರ್ವತದಲ್ಲಿರುವ ಎರಡು ಸುತ್ತಿನ ಕೋಟೆಯನ್ನು ಭದ್ರಪಡಿಸಿಕೋ. ಹರಪನಹಳ್ಳಿಯಲ್ಲಿಯೂ ಎರಡುಸುತ್ತಿನ ಕೋಟೆಯನ್ನು ಕಟ್ಟಿಸಿಕೋ. ಈ ಎರಡು ಸ್ಥಳಗಳಲ್ಲಿಯೂ ರಾಜಧಾನಿಗಳನ್ನು ಕಟ್ಟಿಸುಖದಿಂದಿರುವುದೆಂದು ಸೂಚಿಸಿದಳು. ಹರಪನಹಳ್ಳಿಯಲ್ಲಿ ಕೋಟೆಯನ್ನು ಕಟ್ಟುವುದೆಲ್ಲಿ ಎಂದು ಚಿಂತಿಸುತ್ತಿದ್ದ ದಾದಯ್ಯಗೆ ಮತ್ತೆ ಸ್ವಪ್ನವಾಯಿತು. ನಾಳೆ ನಿನ್ನ ಬೇಟೆಯ ವೇಳೆಯಲ್ಲಿ ಒಂದು ವಿಚಿತ್ರವನ್ನು ಕಾಣುತ್ತೀ. ಆ ಗಂಡುಮೆಟ್ಟಿನ ಭೂಮಿಯಲ್ಲಿ ಕೋಟೆ ಕೊತ್ತಗಳನ್ನು ಕಟ್ಟಿಸಿಕೋ ಎಂದು ತಿಳಿಸಿ

ದಳು. ಹಾಗೆಯೇ ಈಗಿರುವ ಸ್ಥಳವು ದೊಡ್ಡದೊಂದು ಹಾವಿನ ಹುತ್ತದಿಂದೊಡಗೂಡಿತ್ತು. ಅಡವಿ ನಾಯಿಗಳು ಒಂದುವರಾಹವನ್ನು ಹಿಂಬಾಲಿಸಿ ಈ ಪೆಳೆಯಲ್ಲಿ ನುಗ್ಗಿದವು. ದಾದಣ್ಣನೂ ನುಗ್ಗಿದನು. ಅಲ್ಲಿರುತ್ತಿದ್ದ ಹುತ್ತಿನೊಳಗಿನಿಂದ ಕೆಲವು ಶಶಗಳು ( ಮೊಲಗಳು ) ನಾಯಿಗಳನ್ನು ಅಟ್ಟಿಕೊಂಡು ಬರಲು ಈ ಸೋಜಿಗವನ್ನು ಕಂಡು ನಾಯಿಗಳಿಗೆ ಭಯವನ್ನುಂಟುಮಾಡಿದ ಮೊಲಗಳಿರುವ ಸ್ಥಳವಲ್ಲವೇ ವೀರ ಭೂಮಿಯೆಂದರಿತು ಅಲ್ಲಿಯೇ ಕೋಟೆಯನ್ನು ಕಟ್ಟಲು ನಿರ್ಧರಿಸಿದನು. ಹುತ್ತವನ್ನು ಬಗಿಸಿ ನೋಡಲು ಅಲ್ಲಿ ಈಗ ತೋರುತ್ತಿರುವ ಶ್ರೀಆಂಜನೇಯ ಮೂರ್ತಿಯು ದೊರೆಯಿತು. “ ರೊಟ್ಟಿಯು, ಜಾರಿ ತುಪ್ಪದಲ್ಲಿಯೇ ಬಿದ್ದಂತಾಯ್ತು”ಂದು ಭಾವಿಸಿ ದೇವರಿಗೆ ಗುಡಿಯನ್ನು ಕಟ್ಟಿಸಿದನು. ಪರಮವೈಭವದಿಂದೊಡಗೂಡಿದ ಹರಪನಹಳ್ಳಿಯ ರಾಜ್ಯವು ಪ್ರಾರಂಭವಾಯಿತು. ಗ್ರಾಮಕ್ಕೆ ಹುಗ್ಗಿ ಹೊಯ್ದಿದ್ದು ಶಾ|| ಶ|| ೧೬೨೬ ಕ್ರೋಧನನಾಮ ಸಂವತ್ಸರದಲ್ಲಿ. ಹುಗ್ಗಿಹೊಯ್ಯುವ ಮುಹೂರ್ತದಲ್ಲಿ ಏನು ವ್ಯತ್ಯಾಸವಾಯಿತೋ ತಿಳಿಯದು. ರಾಜನ ಅರಮನೆಯಲ್ಲಿ ದೊಡ್ಡದೊಂದು ಬ್ರಹ್ಮರಾಕ್ಷಸವು ಸೇರಿತು. ರಾಜವಂಶದವರಿಗೆ ವಿಚಿತ್ರ ಹಿಂಸೆಯಾಯಿತು. ಆಗ ಚಿಪ್ಪಿಮಲ್ಲಪ್ಪನೆಂಬ ಮಲ್ಲಿಕಾರ್ಜುನ ದೇವರನ್ನು ಭಜಿಸಿದರು. ಸ್ವಾಮಿಯು ಸ್ವಪ್ನದಲ್ಲಿ ಬಂದು “ ಮಕ್ಕಳಿರಾ!!! ನೀವು ಈಬ್ರಹ್ಮರಾಕ್ಷಸನ ಬಾಧೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಬೇರೇ ಮಾರ್ಗವಿಲ್ಲ. ನೀವು ಶ್ರೀ ಉಜ್ಜನಿ ಮರುಳಸಿದ್ಧೇಶ್ವರ ಸ್ವಾಮಿಯವರನ್ನು ಕರೆತಂದರೆ, ಆ ಮಹಾಮಹಿಮರು ನಿಮ್ಮ ಸಂಕಟವನ್ನು ಪರಿಹರಿಸಬಲ್ಲರೆಂದು ” ಬೋಧಿಸಿದನು. ಆ ಮೇರೆಗೆ ಉಜ್ಜನೀಪುರಕ್ಕೆ ಪ್ರಯಾಣ ಬೆಳೆಸಿ, ಶಾ|| ಶ|| ೧೫೦೯ ಸರ್ವಜಿತು ಸಂವತ್ಸರ ಕಾರ್ತಿಕ ಶು|| ಪ್ರತಿಪದ ಶುಭ ಮುಹೂರ್ತದಲ್ಲಿ ವೃತ್ತಾಂತವನ್ನು ಬಿನ್ನವಿಸಿ ಹರಪುರಿಗೆ ಕರೆತಂದರು. ಆ ಮಹಾಮಹಿಮರ ಪ್ರಭಾವದಿಂದ ಬ್ರಹ್ಮಪಿಶಾಚವು ಓಡಿಹೋಯಿತು. ರಾಜರು ಸ್ವಾಮಿಗಳಿಗೆ ಸೂರ್ಯಚಂದ್ರರಿರುವವರೆಗೂ ಜರುಗುವ ಕರಾರಿನ ಮೇಲೆ “ ಐಗಳ ಬೀಜವರಿ ” ಗ್ರಾಮದಾನಕೊಟ್ಟಿದ್ದಲ್ಲದೆ ಮಲಿಬೆಂಚಿ ವೃಕ್ಷದಸ್ಥಾನದಲ್ಲಿ ಕಂಚಿನ ಹಿರೇಮಠವನ್ನು ಸ್ಥಾಪಿಸಿಗೈದರು. ರಾಜಸ್ಥಾನವು ಶುಭವಾಗಿತ್ತು. ‘ಬಾಗುಳಿ’ಯಲ್ಲಿದ್ದ ಜೋಯಿಸ ಕಾಂಭಟ್ಟರು, ನೀಲಗುಂದ ರೆಡ್ಡಿ ಸೋಮನಗೌಡರು ಬಂದು ದಾದಯ್ಯಗೆ ತಾವು ಮಾಡಿದ ಆಶೀರ್ವಾದವನ್ನೂ, ದಾವಯ್ಯನು ತಮಗೆ ಕೊಟ್ಟಿದ್ದ ಭಾಷೆಯನ್ನು ಶ್ರುತಪಡಿಸಿ ವಿಜ್ಞಾಪಿಸಿಕೊಂಡರು. ಸ್ವಾಮಿ, ನಿಜವೇ; ಆದರೆ ನಾನು ರಾಜ್ಯದಲ್ಲಿ ಅಭಿಷಿಕ್ತನಾಗಿಲ್ಲ. ನನಗೆ ಒಡೆತನವು ಬಂದರೆ ಮಾತಿನಂತೆ ನಡೆದುಕೊಳ್ಳಲು ಸಿದ್ಧನೆಂದು ನುಡಿದಿದ್ದೆನು. ಈ ದಾದಣ್ಣನನ್ನು ಸಿಂಹಾಸನದಲ್ಲಿ ಕೂಡ್ರಿಸಿ ಶಾ|| ಶ|| ೧೪೬೮ರಲ್ಲಿ ಕಾಂಭ

ಟ್ಟರೇ ಅಭಿಷೇಕಮಾಡಿದರು. ಆಗರಾಜನು ಭಟ್ಟರಿಗೂ ಗೌಡರಿಗೂ ಮಾತಿನಂತೆ ಜಹಗೀರುಗಳನ್ನು ಕೊಟ್ಟನು. ಅದನ್ನೆಲ್ಲಾ ಸಂಸ್ಥಾನಿಕರಾದ ಉಜ್ಜಿನೀ ಮರುಳಸಿದ್ಧೇಶ್ವರ ಸ್ವಾಮಿಗಳು ಮಾನ್ಯಮಾಡಲು ಅಂದಿನಿಂದ ಶ್ರೀ ದಾದಣ್ಣನು "ನಾಯಕಾಚಾರ್ಯ, ನಾಯಕ ಶಿರೋಮಣಿ, ರಾಜಾ, ಶ್ರೀ ದಾದಣ್ಣನಾಯಕ ಬಹದ್ದೂರ್" ಎಂದು ಬಿರುದು ಹೊಗಳಿಸಿಕೊಳ್ಳುತ್ತಾ ೧೪೮೮ರಿಂದ ೧೫೧೪ ನೇದು ಶಾ|| ಶ|| ಪರ್ಯಂತರ ೨೬ ವರ್ಷ ರಾಜ್ಯ ಪರಿಪಾಲನಮಾಡಿದನು.

ಕೆಲವು ಕಾಲಾನಂತರ ಮುಸ್ಟೂರುಮಠದಿಂದ ಇಲ್ಲಿಗೆ ಬಂದ ಗಂಗಾಧರ ಸ್ವಾಮಿಯವರು ರಾಜಗೆ ( ಬಸವಂತರಾಯ ) ಲಿಂಗಾಂಗ ಸಾಮರಸ್ಯವನ್ನು ಬೋಧಿಸಿದರು. ಅದರಿಂದ ರಾಜನು ತಾನು ಲಿಂಗಾಂಗಿಯಾಗಲು ಅಪೇಕ್ಷಿಸಿದನು. ಮತ್ತು ಉಜ್ಜಿನೀ ಪೀಠದಲ್ಲಿ ಆ ಕಾಲದಲ್ಲಿದ್ದ "ಬಸಲಿಂಗ ಸ್ವಾಮಿಗಳನ್ನು" ಕರೆಯಿಸಿ ಗುರುವರ್ಗದವರ ಸನ್ನಿಧಿಯಲ್ಲಿ ವಿಜಯನಗರದಲ್ಲಿ ಅಂದರೆ ಹಂಪೆಯಲ್ಲಿ ಲಿಂಗಧಾರಣೆಮಾಡಿದರು. ಆಗ್ಗೆ "ಬಸಪ್ಪ"ನಾಯಕನೆಂಬ ಹೆಸರನ್ನಿಟ್ಟು ಕರೆದರು. ಇದು ಶಾ|| ಶ|| ೧೬೩೨ ಸುಮಾರರಲ್ಲಿ ಕಾಲಾಂತರದಲ್ಲಿ ಅಂದರೆ ಶಾ|| ಶ|| ೧೬೮೮ರಲ್ಲಿ ಶ್ರೀ ಸೋಮಶೇಖರ ನಾಯಕನೆಂಬ ಶೂರನು ಸಿಂಹಾಸನಕ್ಕೆ ಬಂದನು. ಈತನು ೨೪ ವರ್ಷ ರಾಜ್ಯವಾಳಿದನು. ಈ ರಾಜ್ಯವೇ ಲೋಕಪ್ರಖ್ಯಾತವಾಯಿತು. ಏಕೆಂದರೆ ಈತನು ವಿಜಯ ನಗರದ ಅರಸರ ಪದ್ಧತಿಗಳನ್ನೇ ಅನುಸರಿಸಿ ರಾಜ್ಯವಾಳಿದನು. ಈತನ ಕಾಲದಲ್ಲಿ ಅರಸಿಕೆರೆಯ ಶ್ರೀ ವಿರೂಪಾಕ್ಷಪ್ಪ, ಶ್ರೀ ಹಂಪರಸಪ್ಪ ಮೊದಲಾದ ಮಂತ್ರಿಗಳು, ಬೊಕ್ಕಸದ ವೆಂಕೋಬಪ್ಪ, ಸ್ವಾಮಿ ರಾಯಪ್ಪ ಮೊದಲಾದ ಭಾಂಡಾರಾಧಿಪತಿಗಳು ನ್ಯಾಯಾನ್ಯಾಯ ನಿರ್ಣಾಯಕರಾದ ಶ್ರೀ ರಾಯಸದ ಅಕ್ಕಪ್ಪನವರು ಇವರ ಸಲಹೆಗಳ ಮೇರೆಗೆ ರಾಜ್ಯವನ್ನಾಳುತ್ತ ವಿದ್ವತ್ಸಭೆಗಳನ್ನು ಏರ್ಪಡಿಸುತ್ತಾ ಪ್ರಖ್ಯಾತನಾದನು. ಈತನು ಉಂಬಳಿಗಳನ್ನು ಕೊಡುವುದೂ, ಸಂಭಾವನೆಗಳನ್ನು ಕೊಡುವುದೂ, ಸರ್ವಮತೀಯರನ್ನು ಸಮವಾಗಿ ನೋಡುವುದು, ದೇವಾಲಯಗಳನ್ನು ಕಟ್ಟಿಸುವುದೇ ಮೊದಲಾದ ಸತ್ಕಾರ್ಯಗಳನ್ನು ಮಾಡುತ್ತಾ ಇದ್ದನು. ಆತನು ಕಾಲವಾದ ನಂತರ ಪುರುಷ ಸಂತತಿ ಇಲ್ಲದಿರಲು ಆತನ ಹೆಂಡತಿ ಶ್ರೀಮತಿ ಸೋಮಮ್ಮಾಜಿ ಎಂಬ ನಾಯಕಿಯು ರಾಜ್ಯವನ್ನಾಳಿದಳು. ಈ ಸೋಮಮ್ಮಾಜಿಯು ಹರಪನಹಳ್ಳಿಯ ವೀರಭದ್ರ ಸ್ವಾಮಿಯ ದೇವಾಲಯವನ್ನು ಕಟ್ಟಿಸಿದಳು.

*

# ದೇವನ ಶ್ರೀ ಮರುಳಸಿದ್ಧಕಾವ್ಯವೂ ಶ್ರೀ ಅ. ನ. ಕೃಷ್ಣರಾಯರೂ

ಲೇಖಕರು ವೇ॥ ಕರಿಬಸವ ಶಾಸ್ತ್ರಿಗಳವರು. ಬೇಲೇರಿ ಹಿರಿಯುಮರ.

ಒಬ್ಬನ ಸ್ವಭಾವವು ಸರಳವಾಗಿದ್ದರೆ ಮತ್ತೊಬ್ಬನ ಸ್ವಭಾವವು ವಕ್ರವಾಗಿರುತ್ತದೆ. ಒಬ್ಬನು ಗೋಮುಖ ವ್ಯಾಘ್ರನಾಗಿದ್ದರೆ, ಮತ್ತೊಬ್ಬನು ವ್ಯಾಘ್ರಮುಖ ಗೋ ಆಗಿರುತ್ತಾನೆ. ಒಬ್ಬನು ಅನ್ಯಮತೀಯರನ್ನು ನಮ್ಮವರೆಂದು ಭಾವಿಸಿ ಅಮೃತವನ್ನೆರೆದರೆ, ಮತ್ತೊಬ್ಬನು ನಮ್ಮವರೆನ್ನುವಂತೆ ನಟಿಸಿ ವಿಷವನ್ನೆರೆಯುತ್ತಾನೆ. ಅಂತೆ ಪಿಂಡೇಪಿಂಡೇ ಮತಿರ್ಭಿನ್ನಾ, ಎಂಬ ಮಾತು ಯೋಗ್ಯವಾಗಿದೆ. ಇಲ್ಲವಾದರೆ ವಾದವು ಉಂಟಾಗಲಾರದು. ವಾದವುಂಟಾದರೆ ಸರಳ ಸ್ವಭಾವದರಲ್ಲಿ ಮಾತ್ರ ಗಂಭೀರದಂತಾಗಬಹುದು. ಕುಟಿಲರಲ್ಲಿ ಬಿದುರು ತಿಕ್ಕಿ ಬೆಂಕಿ ಹುಟ್ಟಿಸಿದಂತೆಯೇ ಆಗುವುದು

ಈಗ ಮುದ್ರಿತವಾಗಿರುವ ದೇವಕವಿಯ ಕಾವ್ಯದಲ್ಲಿ ನನ್ನ ಗೋತ್ರಾಧಿಪನ ವಿಷಯಕ್ಕೆ ತೋರಿಸಿದ ಅನ್ಯಾಯ ಅಸತ್ಯಗಳನ್ನು ಕಂಡು ಹೃದಯದಲ್ಲಿ ಸಂತಾಪಉಂಟಾಯಿತು. ಮತ್ತು ಪೀಠಿಕೆಯ (೫೩)ನೆಯ ಪುಟದಲ್ಲಿ "ಗದ್ದುಗೆಯ ರಾಮಿ ತಂದೆಯ ಗುರುಬೋಧೆ ಉಪಲಬ್ಧವಿಲ್ಲದಿರುವಾಗ ದೇವನ ಈ ಕಾವ್ಯವಾದರೂ ಇರುವದು ನಮ್ಮ ಭಾಗ್ಯ. ವೀರಶೈವಾಚಾರ್ಯ ಪಂಚಕರಲ್ಲಿ ಒಬ್ಬರಾದ ಮರುಳಸಿದ್ಧರ ಬಗ್ಗೆ ಇವನು ಅನೇಕ ವಿಷಯಗಳನ್ನು ಸಂಗ್ರಹಿಸಿದ್ದಾನೆ" ಎಂಬ ವಾಕ್ಯದಿಂದ ಆಚಾರ್ಯ ಪಂಚಕದಲ್ಲಿರುವ ಮರುಳಸಿದ್ಧನೇ ಈ ದೇವಕವಿಯ ಮರುಳಸಿದ್ಧನೆಂದು ತೋರಿಸಿ ಮುಂದೆ "ಈ ಮರುಳಸಿದ್ಧನೇ ಆಚಾರ್ಯರಲ್ಲಿ ಒಬ್ಬರಾದ ಮರುಳಾರಾಧ್ಯರೋ ಅಲ್ಲವೋ ? ಎಂಬ ವಿಷಯ ತೊಡಕಿನದು. ಇದರ ಚರ್ಚೆ ಅನವಶ್ಯಕ. ರೋಷಕೋಪಗಳಿಗೆ ಮೂಲವಾಗುವುದರಿಂದ ನಾವು ಅದಕ್ಕೆ ಕೈಹಾಕುವುದಿಲ್ಲ"ವೆಂದು ಪೀಠಿಕಾಕಾರರು ಬರೆದಿದ್ದಾರೆ. ಇಲ್ಲಿ ಯಾವದರ ಚರ್ಚೆ ಅವಶ್ಯಕವೋ ಅದು ಅನವಶ್ಯಕವೆಂದೂ, ಮತ್ತು ದೇವನ ಅಭಿಪ್ರಾಯವೇ ತಮ್ಮ ಅಭಿಪ್ರಾಯವೆಂಬುದನ್ನು, ತಿಳಿಸುವದಕ್ಕಾಗಿ ಜಾಣತನದಿಂದ ಅದಕ್ಕೆ ಕೈಹಾಕಿದರೆ ರೋಷಕೋಪಗಳಿಗೆ ಮೂಲವಾಗುವುದರಿಂದ ನಾವು ಅದಕ್ಕೆ ಕೈಹಾಕುವುದಿಲ್ಲವೆಂದು, ಬರೆದಿರುವ ಈ ಕುಟಿಲೋಕ್ತಿಯಿಂದ ನನ್ನ ಆ ಸಂತಾಪವು ಇಮ್ಮಡಿಯಾಯಿತು. ಅದರೂ (೫೪)ನೆಯ ಪುಟದಲ್ಲಿ:—"ಹೊಲೆಯರ ಹೊಟ್ಟೆಯಲ್ಲಿ ಮರುಳಸಿದ್ಧ ಹುಟ್ಟಿದ, ಎಂದು ನೇರವಾಗಿ ಹೇಳದೆ, ಪುಣ್ಯಸ್ತ್ರೀವೃತ್ತಾಂತ

ವನ್ನು ಕಲ್ಪಿಸಿ,ಆ ಮೂಲಕ ಪಾವಿತ್ರ್ಯವನ್ನು ಕಲ್ಪಿಸಲು ಕವಿ ಯತ್ನಿಸಿದ್ದಾನೆ. ಎಂಬ ಪೀಠಿಕಾಕಾರರ ಮಾತಿನಿಂದ ಕಲ್ಪಿತವಾದ ಮುನಿ ಕಥೆಯು ಸತ್ಯವಲ್ಲ ವೆಂದಾಗ, ಅದಕ್ಕೆ ಅಂಟಿಸಿದ ಮರುಳಸಿದ್ಧನ ಕಥೆಯೂ ಸತ್ಯವಾಗಲಾರದು. ಎಂದು ಸ್ವಲ್ಪ ಶಾಂತಿಯನ್ನು ತಾಳಿ, ದೇವನ ದುರಭಿಪ್ರಾಯಗಳನ್ನು ಸಮಗ್ರ ವಾಗಿ ಓದಿದೆ. ಅದರಲ್ಲಿರುವ ಅಗತ್ಯ ವಿಧಾನಗಳನ್ನು ನನ್ನ ಸಮಾಜದ ಮುಂದಿಡಲು ಯತ್ನಿಸಿದ್ದೇನೆ. ದೇವನು ಕವಿಪದಕ್ಕೆ ಅರ್ಹನೋ ಅಲ್ಲವೋ ಎಂಬುದನ್ನು ನಾವು ಹೆಚ್ಚಾಗಿ ವಿಚಾರಿಸುವ ಕಾರಣವಿಲ್ಲ. ಇವನ ಸ್ಪಷ್ಟವಾದ ಅಶ್ಲೀಲ, ಅಶುದ್ಧ, ಅಸಂಬದ್ಧ, ಶಾಸ್ತ್ರ ವಿರುದ್ಧ ವಿಚಾರಗಳಿಂದಲೂ ಅಸತ್ಯ ಕಥಾಕಲ್ಪನೆಯಿಂದಲೂ ಓದುಗರು ನಿಶ್ಚಯಿಸದೆ ಬಿಡರು. ಪೀಠಿಕಾಕಾರರು ಕೂಡ ದೇವನ ಯೋಗ್ಯತೆಯನ್ನು ಸ್ಪಷ್ಟವಾಗಿ ಒಪ್ಪಿದ್ದಾರೆ.

ಈ ದೇವಕವಿಯು ಮೊದಲನೆಯ ಸಂಧಿಯ (೩೯) ಸಂಖ್ಯೆಯ "ಪಿರಿದು ಫಲ ಪದವೀವ" ಎಂಬ ಶ್ಲೋಕದಲ್ಲಿ ಶಿಲಾದ ಮಹರ್ಷಿಗೆ 'ಶಿಲಾ ಧರ'ನೆಂದು ಪದಪ್ರಯೋಗಿಸಿರುವನು. ಶಿಲಾದ ಅಂದರೆ ಕಲ್ಲನ್ನು ತಿನ್ನತಕ್ಕ ವನು. ಶಿಲಾಧರನೆಂದರೆ ಕಲ್ಲನ್ನು ಧರಿಸಿದವನು, ಎಂದು ಅರ್ಥ. ಈ ಮಹರ್ಷಿಯು ಘೋರತಪಸ್ಸಿನ ಕಾಲದಲ್ಲಿ ಶಿಲೆಯನ್ನೇ ತಿಂದುದರಿಂದ, ಶಿಲಾದನೆಂಬ ಹೆಸರು ಪ್ರಸಿದ್ಧವಾಗಿದೆ. ವ್ಯಾಸ ಮಹರ್ಷಿಗಳು ಲಿಂಗಪುರಾಣ ದಲ್ಲಿ "ಗತೇಪುಣ್ಯೇಚ ವರದೇ ಸಹಸ್ರಾಕ್ಷೇ ಶಿಲಾಶನಃ" || ಮತ್ತು "ಆರಾಧ ಯನ್ ಮಹಾದೇವಂ ಸ್ತುತ್ವೋವಾಚ್ ಶಿಲಾಶನಃ"|| ಹೀಗೆ ಅನೇಕ ಶ್ಲೋಕ ಗಳಲ್ಲಿ ಶಿಲಾಶನಃ ಅಂದರೆ; ಶಿಲಾಭಕ್ಷಕನೆಂದು, ಶಿಲಾದನೆಂದು ಪದಗಳನ್ನು ಪ್ರಯೋಗಿಸಿರುವರು. ಆದರೂ ಈ ದೇವಕವಿಯು ಶಿಲಾದನಿಗೆ ಶಿಲಾಧರ ನೆಂದು (ಕಲ್ಲುಧರಿಸಿದವನೆಂದು) ಹೆಸರು ಕೊಟ್ಟಿರುವದು ಇಷ್ಟ ಲಿಂಗಧಾರಿ ಗಳಾದ ವೀರಶೈವರಿಗೆ ಹಾಸ್ಯಮಾಡುವದಕ್ಕಲ್ಲವೇ ?

ಇದನ್ನು ವಿಚಾರಿಸಿದ ವೀರಶೈವರ ಹೃದಯದಲ್ಲಿ ದೇವಕವಿಯು ಬ್ರಾಹ್ಮ ಯನ್ನಿಟ್ಟಂತಾಗಲಾರದೆ ? ಈ ದೇವಕವಿಯು ಯಾವ ಜಾತಿಯವನು, ಯಾವ ಧರ್ಮದವನೆಂದು ಹೇಳಬೇಕು ? ಶಿವನನ್ನಲ್ಲದೆ ಅನ್ಯರನ್ನು ಹೊಗಳಿ ನಾಲಿಗೆ ಯನ್ನು ಅಪವಿತ್ರಗೊಳಿಸಬಾರದೆಂದು ನುಡಿದ ಈ ಕವಿಯು ವೀರಶೈವರ ಇಷ್ಟ ಲಿಂಗಕ್ಕೆ ಕಲ್ಲೆನ್ನಬಹುದೇ ? ಶಿಲಾದನಿಗೆ ಹೆಂಡತಿಯಿದ್ದಳೆಂದಾಗಲಿ, ಸುಪ್ರಭೆಯೆಂಬ ಹೆಂಡತಿ ಇದ್ದಳೆಂದಾಗಲಿ ವ್ಯಾಸ ಪುರಾಣದಲ್ಲಿ ಹೇಳಿರುವದೇ? ಇಲ್ಲ. ಆದರೂ ದೇವಕವಿಯು ಶಿಲಾದನಿಗೆ ಸುಪ್ರಭೆಯೆಂಬ ಹೆಂಡತಿಯನ್ನು ಜೋಡಿಸಿದ್ದಾನೆ. ನಂದೀಶ್ವರನು ಶಿಲಾದನಿಗೆ ಮಗನಾದರೂ ಶಿಲಾದನ

ಹೇಳಿದ್ದಾನೆ. ಹೀಗಿದ್ದರೂ ಶಿವಪೂಜೆಯನ್ನು ಮಾಡುತ್ತಿರುವ ತನ್ನ ಸತಿ ಸುಪ್ರಭೆಯು ಮಾಸಿಕ ಋತುವಾದ ಚಿಹ್ನವನ್ನು ಕಂಡು ನಿನಗೆ ಶಿವಪೂಜೆಯ ಕಾಲದಲ್ಲಿ ಹೊಲೆಯುಂಟಾದ್ದರಿಂದ ಹೊಲೆ ಜನ್ಮದಲ್ಲಿ ಜನಿಸಿ ಕುಲವಿಲ್ಲದ ಛಲನೊಳು ಬಾಳು. ಇವನು ವೀರಶೈವನಾಗಿದ್ದರೆ (ಸಂ—೨ ಪದ್ಯ ೧೮ರಲ್ಲಿ) ಹನುಮಂತನಿಗೆ ಅವಿರಳ ಪರಬ್ರಹ್ಮ ಹನುಮಂತನುಂ ಎಂದು ಅನ್ನುತ್ತಿದ್ದನೇ ? ಸಂಧಿ ೧—ಪದ್ಯ ೪೧. ಅಂದರೆ ಹೊಲೆಯನಿಗೆ ಹೆಂಡತಿಯಾಗಿ ಬಾಳು; ಹೀಗೆ ಶಾಪಕೊಟ್ಟನೆಂದು ಹೇಳಿರುವನು.

ಶಿಲಾದ ಮಹರ್ಷಿ ಹೀಗೆ ಶಾಪಕೊಟ್ಟಿರಬಹುದೇ ? ಪುಂಡರೀಕ ಯಾಗ ದಲ್ಲಿ ದೀಕ್ಷಿತರಾಗಿ ಸತಿಪತಿಗಳು ಕುಳಿತಿರುವಾಗ ಸ್ತ್ರೀಯು ರಜಸ್ವಲೆ ಯಾದರೆ ದೋಷವಿಲ್ಲೆಂದು ಧರ್ಮಶಾಸ್ತ್ರಗಳು ಹೇಳುತ್ತಿರುವವು. ಹಾಗೇ—ಲಿಂಗ ಸಾರದಲ್ಲಿ:—ಲಿಂಗಾರ್ಚನ ರತಾನಾರೀ/ ರಜಃಸೂತಕ ಸಂಯುತಾ।

ರವಿರಗ್ನಿರ್ಯಥಾವಾಯು। ಸ್ತದ್ವತ್ಕೋಟಿ ಶುಚಿರ್ಭವೇತ್ ॥

ಲಿಂಗಾರ್ಚನದಲ್ಲಿ ತೊಡಗಿದ ಸ್ತ್ರೀಯಳು ಮುಟ್ಟಾದರೆ; ಸೂರ್ಯ ಅಗ್ನಿ ವಾಯುಗಳಂತೆ ಕೋಟಿ ಶುಚಿಯಾಗಿರುತ್ತಾಳೆ. "ಲಿಂಗವಿದ್ದೆಡೆಯಲ್ಲಿ ಹೊಲೆಯುಂಟೆ" ? ಲಿಂಗಧಾರಣಮಾಡಿದವರಿಗೆ "ರಜಸ್ಸೂತಕವಿಲ್ಲ" ಎಂಬ ಬಸವಣ್ಣನವರ ವಚನ ಮುಂತಾದ ಧರ್ಮಶಾಸ್ತ್ರವನ್ನರಿಯುವ ದೇವಕನಿಯು ದಕ್ಷನಾಗಿರಬೇಕೆಂದು ಪೀಠಿಕಾಕಾರರು ನುಡಿದಿದ್ದಾರೆ ಅದು ಯೋಗ್ಯ ವಾಗುತ್ತಿತ್ತು.

ಆದರೆ ವೀರಶೈವರ ಹೆಣ್ಣುಮಕ್ಕಳು, ಬೇರೂಪ ಹೋಲೆ ಇಷ್ಟಲಿಂಗವನ್ನು ಧರಿಸಿದಾಗ ಋತುವಾದರೆ, ಸುಪ್ರಭೆಯಂತೆ ನಾವೂ ಹೊಲೆಜನ್ಮದಲ್ಲಿ ಜನಿಸ ಬೇಕಾಗುತ್ತದೆಂಬ ಭಯದಿಂದ ಇಷ್ಟಲಿಂಗ ಧಾರಣವನ್ನು ಬಿಟ್ಟರೆ ನಾಶವು, ಶ್ರೀ ಪ್ರೋ. ದೇವಕನಿಗೂ, ಅ. ನ. ಕೃಷ್ಣರಾಯರಿಗೂ, ಪ್ರಯೋಜನವೆಂದರೆ ಹಿತ್ತಾಳೆಯದು. ಇದೇ ಸಂಧಿಯ (೪೨) ಸಂಖ್ಯೆಯ ಶ್ಲೋಕದಲ್ಲಿ, ಮುಂದೆ "ಕಲ್ಯಾಣದೊಳು ಜನಪಪಕ್ಷದ ಪ್ರಭು ಬಾಚಣ್ಣನ ಭೃತ್ಯನೆಂದೆನಿಪ ಕುಲ ಹೀನನಿಗೆ ಮಗಳಾಗು" ಘನಮಹಿಮನಿನ್ನ ತನುಮನಕೊನೆಯೊಳು ಜನಿಸು ವನು; ಆಗ ನಿನಗೆ ಶಾಪನಿವೃತ್ತಿಯೆಂದು ಹೇಳಿ,—ಮುಂದೆ ಭೃತ್ಯನೆಂದೆನಿಪ ಶಿಷ್ಯನು, ವಿರೋಧದಿಂದ ಗುರುವಿಗೆ ಪುಷ್ಪಗಳೆಂದು ಎತ್ತಿನ ಅಸ್ಥಿಯನ್ನು ತಂದು ಕೊಟ್ಟುದಕ್ಕೆ, ಮರ್ತ್ಯಕ್ಕೆ ಹೋಗಿ ಕೂಗಿ ಮಾರನೆಂಬ ಹೆಸರಿನಿಂದ ಕಗ್ಗಲ್ಲ ಪ್ರಭು ಬಾಚಣ್ಣನ ಭೃತ್ಯನಾಗಿರೆಂದು ಶಾಪಕೊಟ್ಟು ಕಳುಹಿದನು; ಎಂದು ಹೇಳಿದ್ದಾನೆ ಇಲ್ಲಿ ಶಿಷ್ಯನಾರು ? ಗುರುವಾರು ? ಹೇಳಿಲ್ಲ. ಶಿಷ್ಯನಿಗೆ ದೇವನು ಯಾವ ನಾಮವನ್ನೂ ಹೇಳದಿದ್ದರೂ, ಪೀಠಿಕಾಕಾರರು ಭೌತ್ಸನೆಂದು

ಹೇಳಿದ್ದಾರೆ. ಇದರಿಂದ ಮೂಲದಲ್ಲಿಲ್ಲದ ನಾಮವನ್ನು ಪೀಠಿಕಾಕಾರರು ಹೇಗೆ ಹೇಳಿದರೆಂಬ ಸಂಶಯವು ಸರ್ವರಿಗೂ ಉಂಟಾಗುವಂತಿದೆ. ಮತ್ತು ಈ ಕೂಗಿ ಮಾರನಿಗೆ ಮಗಳಾದ ಮೇಲೆ ಸುಪ್ರಭೆಗೆ ದೇವನು ಬೇರೆ ನಾಮವನ್ನು ಕೊಟ್ಟಿರುವುದಿಲ್ಲ. ಶಾಪ ನಿವೃತ್ತಳಾಗಿ ಪುನಃ ಶಿಲಾವನಲ್ಲಿಗೆ ಹೋಗುವವರೆವಿಗೂ ಸುಪ್ರಭೆಯೆಂದೇ ವ್ಯವಹರಿಸಿದ್ದಾನೆ.

ಮನಬಂದಂತೆ ಕಲ್ಪಿಸಿದ ದೇವಕವಿಯನ್ನು ಕೇಳುವವರಾರು ? ಶಿಷ್ಯನಿಗೆ ಭೌತ್ರನೆಂದು ನಾಮ ಕೊಟ್ಟಂತೆ, ಕೂಗಿಮಾರನಿಗೆ ಮಗಳಾದ ಮೇಲೆ ಸುಪ್ರಭೆಗೆ ಪೀಠಿಕಾಕಾರರಾದರೂ, ಬುದ್ಧಿವಂತರಾಗಿದ್ದರೆ ಬೇರೆ ನಾಮವನ್ನು ಕೊಡಬೇಕಾಗಿತ್ತು.

## ಶನೆಯ ಸಂಧಿಯ ವಿಚಾರ

ಭೃಂಗಿಯು ನರ್ತನ ಸಮಯದಲ್ಲಿ ಶಿವನಿಗೆ ಮಾಯಾಕೋಲಾಹಲನೆಂದು ನುಡಿದುದಕ್ಕೆ, ಭೃಂಗಿಗೂ, ಗಿರಿಜೆಗೂ ವಾದವು ನಡೆಯಿತು. ಆಗ "ಮರುಳ್ ಭೃಂಗಿಯೇ ನೀನು ಹೀಗೆ ನುಡಿಯಬಹುದೇ ? ಎಂದು ಗಿರಿಜೆಯು ನುಡಿಯಲು, ಗಿರಿಜೆಯ ಮನೋಭಾವವನ್ನು ತಿಳಿದು, ಎಲ್ಲರನ್ನೂ ಕಳುಹಿ ಭೃಂಗಿಯ ಗುಣವನ್ನು ವರ್ಣಿಸಲು ಗಿರಿಜೆಗೂ ಶಿವನಿಗೂ ವಾದವು ನಡೆದು ಕಡೆಗೆ ಶಿವನು ಕೋಪಗೊಂಡು ಗಿರಿಜೆಗೆ " ನೀನು ಕೊಲ್ಲಾಪುರದ ಕರಟಾಸುರನ ಹೆಂಡತಿ ಮಾಯೆಯ ಉದರದಲ್ಲಿ ಜನಿಸು. ಆಗ ನಿನ್ನ ಶ್ರೀಕಾರವನ್ನು ಕೆಡಿಸುವನೆಂದು ಹೇಳಿ ಕಳುಹಿ, ಓರ್ವ ಚರಮೂರ್ತಿಯನ್ನು ಕರೆದು, ನೀನು ಮರ್ತ್ಯದಲ್ಲಿ ಮರುಳಸಿದ್ಧೇಶನಾಗಿ ಜನಿಸಿ, ಮಾಯೆಯನ್ನು ಗೆಲ್ಲು; ಎಂದು ಹೇಳಲು, ಅವನು "ನರಲೋಕದ ಇರವು ಪುಣ್ಯದ ಬೀಡು' ಎಂದು ಮರ್ತ್ಯಕ್ಕೆ ಬಂದನು. ಇದು:—ಶನೇ ಸಂಧಿಯ ಐವತ್ತು ಶ್ಲೋಕಗಳವರೆಗೂ ಇರುವ ಕಥೆಯ ಸಾರ. ಇಲ್ಲಿ ಭೃಂಗಿಗೂ, ಗಿರಿಜೆಗೂ ವಾದವಾದರೆ, ಮರುಳಸಿದ್ಧನು ಮಾಯೆಯನ್ನು ಜಯಿಸಲಿಕ್ಕೆ ಭೂಮಿಯಲ್ಲಿ ಜನಿಸಲು ಕಾರಣವಿದ್ದಿಲ್ಲ. ಭೃಂಗಿಯೇ ಜನಿಸಬೇಕಾಗಿತ್ತು. ಹೀಗೆ ಜನಿಸಲು ಮರುಳಸಿದ್ಧನಿಗೆ ಅಪ್ಪಣೆ ಕೊಟ್ಟದು ಶಿವನ ತಪ್ಪೋ ? ಹೀಗೆ ಬರೆದಿರುವದು ದೇವಕವಿಯ ತಪ್ಪೋ ? ಯೋಗ್ಯವಿರಲಿ ಅಯೋಗ್ಯವಿರಲಿ; ಒಂದು ಪಾಪವನ್ನು ಹೊರಿಸಿ ಸುಪ್ರಭೆಯನ್ನು ಹೊಲೆಯರಲ್ಲಿ ಜನಿಸಿದಳೆಂದು ಹೇಳಿರುವನು. ಆದರೆ ಮರುಳಸಿದ್ಧನು ಹೊಲೆಯರಲ್ಲಿ ಜನಿಸಲಿಕ್ಕೆ ಯಾವ ಪಾಪವನ್ನೂ ತೋರಿಸಿರುವದಿಲ್ಲ. ಪಾಪವಿಲ್ಲದ ಮರುಳಸಿದ್ಧನಿಗೆ ಸುಪ್ರಭೆಯಂತೆ ಹೊಲೆಜನ್ಮವು ಬಂದಿತೆಂದು ಹೇಳಬಹುದೇ ? ನರಲೋಕದ ಇರವು ಪುಣ್ಯದ ಬೀಡೆಂದು ಬಂದನೆಂದರೆ ? ಇವನು ಮರ್ತ್ಯಲೋಕಕ್ಕೆ ಬಂದು, ಸುಪ್ರಭೆಯಂತೆ ಯಾವ ಪಾಪವನ್ನು

ಕಳೆದುಕೊಂಡು ಯಾವ ಯಾವ ಪುಣ್ಯವನ್ನು ಪಡೆದು ಹೋಗಬೇಕಾಗಿದೆ. ಅವನ್ನು ಹೇಳಬೇಕಾಗಿತ್ತಲ್ಲ ! ನರಲೋಕದ ಇರವು ಪುಣ್ಯದ ಬೀಡೆಂದು ಬಂದರೆ, ಕೈಲಾಸವು ಪಾಪದ ಬೀಡೆಂದು ಬಿಟ್ಟು ಬಂದನೇ ? ಭೃಂಗಿಯ ಕಥೆಯಲ್ಲಿ:- ಗಿರಿಜೆಯು ತನ್ನ ಮಾಯಾಂತವನ್ನು ಸೆಳೆದುಕೊಳ್ಳಲು, ಭೃಂಗಿಯು ಕೇವಲ ಅಸ್ಥಿ ಮಾತ್ರ ದೇಹವುಳ್ಳವನಾಗಿ ನಿಲ್ಲುವದಕ್ಕೂ ಸಹ ಅಸಮರ್ಥನಾಗಲು ಶಿವನು ಮತ್ತೊಂದು ಕಾಲನ್ನು ಕೊಟ್ಟನು. ಆಗ ಭೃಂಗಿಯು ಮುಕ್ಕಾಲು ಭೃಂಗಿಯೆನಿಸಿದನು; ಎಂದು ಮಾತ್ರವಿದೆ. ಗಿರಿಜೆಗೆ ಕೊಲ್ಲಾಪುರದ ಕರಟಾಸುರನ ಮಗಳಾಗಿ ಹುಟ್ಟೆಂದಾಗಲಿ, ಆಗ ಅವಳ ಮೂಗನ್ನು ಕೊಯ್ಯಲಿಕ್ಕೆ ಮರುಳಸಿದ್ಧನಿಗೆ ಸುಪ್ರಭೆ ಕೂಚಿಮಾರರ ಮಗನಾಗಿ ಹುಟ್ಟೆಂದಾಗಲಿ ಶಿವನ ಆಜ್ಞೆಯಾಗಿರುವದಿಲ್ಲ. ಹೀಗೆ ನಿರಾಧಾರವಾದುದನ್ನು ದೇವನು ಬರೆದರೆ, ಅದಕ್ಕೆ ಅಹುದೆಂದು ಡೊಳ್ಳುಬಾರಿಸುವದು ಸಂಪಾದಕರ ತಪ್ಪಲ್ಲವೇ ? ಮತ್ತು ಕರಟಾಸುರನ ಹೆಂಡತಿ ಮಾಯೆಯ ಉದರದಲ್ಲಿ ಗಿರಿಜೆಯು ಜನಿಸಿದ ಮೇಲೆ ಅವಳಿಗೆ ಯಾವ ನಾಮವನ್ನು ಕೊಟ್ಟಿರುವದಿಲ್ಲ. ಯಾಕೆ ? ಪೀಠಿಕಾಕಾರರಾದರೂ ಕೊಡಬಹುದಾಗಿತ್ತಲ್ಲ?

ಮರುಳಸಿದ್ಧೇಶ್ವರನು "ಜಜ್ಜುಗಂಥೆ ಬಾರಿದಂಡಗಳನು ಧರಿಸಿಬಂದು' ಮುಂದೆ:—ಪಾದುಕೆಗಳನ್ನು ಕೇಳಿ ಅವರು ಕೊಡಲು; ಅವರೀಚ್ಛೆಯಂತೆ ನಾನೇ ನಿಮಗೆ ಮಗನಾಗಿ ಬರುವೆನೆಂದು ಹೇಳಿದವನಾದರೂ, ಮೂಲ ಮರುಳಸಿದ್ಧನೇ ಇರಬಹುದು. ಮೂಲ ವಿಷ್ಣುವಿನ ಅಂಶವೇ ಶ್ರೀಕೃಷ್ಣನಾಗಿ ಹುಟ್ಟಿದಂತೆ ಮೂಲಾಚಾರ್ಯನಾದ ಮರುಳಸಿದ್ಧೇಶನ ಅಂಶವೇ ಹೊಲೆಯ ಮರುಳಸಿದ್ಧನಾದನೆಂದು ಈ ಪದ್ಯಗಳಿಂದ ಹೊಳೆಯುವದು; ಆದರೆ ಸ್ಪಷ್ಟವಾಗುವದಿಲ್ಲ. ಮುಂದೆ ನಾಲ್ಕನೇ ಸಂಧಿಯ (೧೭) ಸಂಖ್ಯೆಯ ಪದ್ಯದಲ್ಲಿ ಕೊಲ್ಲಾಪುರದ ಕರಟಾಸುರನ ಮಗಳಾಗುವದಕ್ಕೆ "ಪ್ರತಿರೂಪ ಮರ್ತ್ಯಕಂಬರಿಸಲಾಗ" ಎಂದು ಗಿರಿಜೆಯು ತನ್ನ ಪ್ರತಿರೂಪವನ್ನು ಕಳಿಸಿದಳೆಂದು ಸ್ಪಷ್ಟ ಹೇಳಿರುವಂತೆ ಮರುಳಸಿದ್ಧನಾದರೂ ಪ್ರತಿರೂಪವನ್ನು ಕಳಿಸಿದನೆಂದು ಹೇಳಿದ್ದರೆ ನಾಕಾಗಿತ್ತು. ಅದರೂ ಮರುಳಸಿದ್ಧೇಶನ ವಿಷಯದಲ್ಲಿ ಅಸತ್ಯ ಕಥೆಯನ್ನು ಕಲ್ಪಿಸುವಾಗ ದೇವನ ಹೃದಯವು ಪಾಪಭಯದಿಂದ ನಡಗಿ ಇಷ್ಟಾದರೂ ಸತ್ಯಾಂಶವು ಹೊರಬಿದ್ದಿರುವದು ನಮ್ಮ ಭಾಗ್ಯ. ಮೊದಲನೇ ಸಂಧಿಯಲ್ಲಿ ಕಗ್ಗಲ್ಲಪುರದ ಬಾಚಣ್ಣಗೌಡನ ಭೃತ್ಯ ಕೂಗಿಮಾರನಿಗೆ ಸುಪ್ರಭೆಯು ಮಗಳಾಗಿ ಜನಿಸಿದಳೆಂದು ಹೇಳಿದ್ದಾನಷ್ಟೆ ? ಈ ಎರಡನೆಯ ಸಂಧಿಯ ( ೫೧ ) ( ೫೨ )ನೇ ಪದ್ಯಗಳಿಂದ ಕಗ್ಗಲ್ಲಪುರ ಒಡೆಯ ಬಾಚಿಗೌಡನ ಅದೇ ಭೃತ್ಯ ಕೂಚಿಮಾರನಿಗೆ ಸುಪ್ರಭೆಯು ಹೆಂಡತಿಯೆಂದು ಹೇಳಿದ್ದಾನೆ. ಕೂಗಿಮಾರನು ಬೇರೆ ? ಕೂಚಿಮಾರನು ಬೇರೆ ? ಎಂದು ಮೂಲದಲ್ಲಿ ಹೇಳಿರುವದೇ

ಇಲ್ಲ. ಕೂಗಿ—ಕೂಚಿ ಎಂಬ ವರ್ಣಗಳು ಮಾತ್ರ ಭಿನ್ನ. ವ್ಯಕ್ತಿಯು ಒಂದೇ ಇರುವದು. ಇದರಂತೆ: – ಕರುಗಲ್ಲು, ಕಗ್ಗಲ್ಲು ಒಂದೇ. ಮತ್ತು ಬಾಚಣ ಗೌಡ, ಬಾಚಿಗೌಡ ಒಬ್ಬನೇ. ಇದನ್ನು ಮೂಲದಲ್ಲಿಯೂ, ಮತ್ತು ಪೀಠಿಕೆಯ ೨೭ರಿಂದ ೩೯ ಪುಟದವರೆವಿಗೂ ನೋಡಿ ವಾಚಕರು ನಿಶ್ಚಯಿಸಿಕೊಳ್ಳಬೇಕು. ಮುಂದೆ ೬೫—೬೬—೬೭ ಪದ್ಯಗಳಿಂದ:—

ಮೋಲಿಸೆವ ಸಹಸ್ರದಳಪದ್ಮದೊಳು ನಿಂದಾಗ । ಸಾಲು ಪಶ್ಚಿಮ
ದ್ವಾರಗ್ರಂಥಿಗಳ ಸುಚ್ಚಳಿಸಿ । ಕಾಲಹರ ಬಾಲಲೀಲೆಯ
ನಟಿಸುತಂ ನಲಿದು ಬಾಲೆಗೆ ಪ್ರಸನ್ನನಾಗಿ........ ॥ ೬೫ ॥
ಮನದ ಕೊನೆಯೊಳುದಿಸೆದೆ ಸುಪ್ರಭಾದೇವಿ ಕುಮಾರನಂ ।
ಸತ್ಪಥದೊಳಿರಿಸುತಾಗ । ಶಾಪಮಂಕಳೆದು । ಶಿಲಾದನ
ಹೊರಗೆಯ್ದುತಿರೆ । ತರುಣಿಯುಂ ಸಂತೈಸಿ ಮುನ್ನಿನಾವಾಸದೊಳ್।
ಗಿರಿಸಿಯೆ ಶಿಲಾದಮುನಿ ವರತಪದೊಳಿರುತಿರ್ದ ಶಿಖರದ
ಗ್ರದೊಳಗೆ ॥ ೬೭ ॥

ಎಂದು ಸುಪ್ರಭೆಯ ಕಥೆಯನ್ನು ಮುಗಿಸಿದ್ದಾನೆ. ಇಲ್ಲಿ ಸುಪ್ರಭೆಯು ಯೋಗದಿಂದ ಸಹಸ್ರದಳ ಪದ್ಮದಲ್ಲಿ ನಿಂತಿರುವಾಗ, ಆಕೆಯ ಪಶ್ಚಿಮ ಚಕ್ರ ದ್ವಾರದ ಗ್ರಂಥಿಯನ್ನುಚ್ಚಳಿಸಿ ಕಾಲಹರನು ಬಾಲೆಗೆ ಪ್ರಸನ್ನನಾಗಿ; ಅವಳ ಮನದ ಕೊನೆಯೊಳುದಿಸಿದನೆಂದು ಹೇಳಿರುವನು. ಆದರೆ ಅವಳ ಗರ್ಭದಿಂದ ಜನಿಸಿದನೆಂದು ಹೇಳಿರುವದಿಲ್ಲ. ಇಷ್ಟು ಮಾತ್ರ ನಮಗೆ ಉಪಕಾರ ಮಾಡಿದ್ದಾನೆ. ಮುಂದೆ ಸುಪ್ರಭೆ ಕುಮಾರನನ್ನು ಸತ್ಪಥದಲ್ಲಿರಿಸಿ ಶಿಲಾದನಲ್ಲಿಗೆ ಹೋದಳೆಂದಿರುವನು. ಸತ್ಪಥವೆಂದರೆ? ಉತ್ತಮ ಮಾರ್ಗ-ಪಂಡಿತ ಮಾರ್ಗ-ಸಜ್ಜನಮಾರ್ಗ—ನಕ್ಷತ್ರಮಾರ್ಗ ಹೀಗೆ ನಾಲ್ಕು ಮಾರ್ಗಗಳೆಂದು ಅರ್ಥವಾಗುವದು. ಆದರೆ ಯಾವ ಮಾರ್ಗದಲ್ಲಿರಿಸಿ ಹೋದಳು ಸ್ಪಷ್ಟವಾಗುವದಿಲ್ಲ. ಇರಲಿ. ಕೂಚಿಮಾರನು ಏನಾದನು ? ಭಿನ್ನನಾಗಿ ಪುನಃ ಹೋದನೋ ? ಇಲ್ಲವೊ ? ಹೇಳಿರುವದಿಲ್ಲ.

ಸುಪ್ರಭೆಯು ಮಾತ್ರ ಶಿಲಾದನಲ್ಲಿಗೆ ಹೋದಳೆಂದು ಹೇಳಿದ್ದಾನೆ. ಆದರೆ ಯಾವ ದೇಹವನ್ನು ಧರಿಸಿಕೊಂಡು ಹೋದಳೆಂದು ಹೇಳಿಲ್ಲ. ಮತ್ತು ಬಾಲಕನಿಗೆ ಯಾವ ನಾಮವನ್ನಿಟ್ಟರು ? ಯಾರಿಟ್ಟರು ? ಎಂಬುದನ್ನೂ ಕವಿಯು ಹೇಳಿರುವದಿಲ್ಲ. ಆದರೆ ಮುರುಳಸಿದ್ಧನೆಂದು ಕವಿಯು ತಾನೇ ನಾಮವನ್ನಿಟ್ಟನೋ ? ಹಾಗಾದರೆ ಎರಡನೆಯ ಸಂಧಿಯ (೧೭) ನೇ ಪದ್ಯದಲ್ಲಿ “ ಶಿದ್ಧಲಿಂಗ ಚಾರಿತ್ರವದೇಳ್ವೆನಿಂತಿದನು ” ಎಂದೇಕೆ ಹೇಳಿದನು ?

ಮರುಳಸಿದ್ಧನ ಚರಿತ್ರವನು ಪೇಳ್ವೆನೆಂದು ಹೇಳಬೇಕಾಗಿತ್ತು ? ಈ ಸಿದ್ಧಲಿಂಗ ನಾಮವನ್ನಾದರೂ ಯಾರು ಕೊಟ್ಟರು ? ಸಿದ್ಧಲಿಂಗನ ಚರಿತ್ರವನ್ನು ಬರೆಯುತ್ತೇನೆಂದು ಹೇಳಿ, ಮರುಳಸಿದ್ಧನ ಕಾವ್ಯವೆಂದು ಬರೆದುದು ತಪ್ಪಲ್ಲವೇ ?

## ನಾಲ್ಕನೆಯ ಸಂಧಿಯ ವಿಚಾರ

ಮರುಳಸಿದ್ಧನು ಆರು ಸಾವಿರ ವರ್ಷ ದೇಶದಲ್ಲಿ ಸಂಚರಿಸಿ ಗುರು ಕಾರುಣ್ಯವ ಪಡೆಯಬೇಕೆಂದು ಗುರುವಿನಲ್ಲಿ ಹೋಗಲು; ಗುರುವು ಚತುರ್ದಿಕ್ಕಿನಾಚಾರ್ಯರ ಕಲಶವನ್ನಿಟ್ಟು ತನ್ನ ಗುರುಕಲಶವನ್ನು ಮಧ್ಯದಲ್ಲಿ ಸ್ಥಾಪಿಸಿದನೆಂದು, ನಾಲ್ಕನೇ ಸಂಧಿಯ ೧೦ನೇ ಪದ್ಯದಲ್ಲಿ ಕವಿಯು ಹೇಳಿರುವನು. ಇಲ್ಲಿ ಚತುರ್ದಿಕ್ಕಿನ ಆಚಾರ್ಯರ ಕಲಶಗಳಲ್ಲಿ ಮರುಳಾಚಾರ್ಯರ ಕಲಶ ಬಂದಿರಬೇಕಲ್ಲವೇ ? ಆ ಮರುಳಸಿದ್ಧನಾರು ? ದೀಕ್ಷೆಹೊಂದುವ, ಈ ಮರುಳಸಿದ್ಧನಾರು ? ಸತ್ಯಾಂಶವನ್ನು ಮುಚ್ಚಹೋದರೂ ಅದು ಹೊರಬೀಳದೆ ಹೋಗದು. ಮತ್ತು ಪೀಠಿಕೆಯ (೧೦) ಪುಟದಲ್ಲಿ ಪ್ರಬಲ ಪ್ರಮಾಣಗಳು ದೊರೆತಿರುವದರಿಂದ ಆ ಕಾಲವನ್ನು ( ೧೨ನೇ ಶತಮಾನವನ್ನು ) ಈಗ ಒಪ್ಪಿಕೊಳ್ಳಬಹುದು. ಮರುಳಸಿದ್ಧನು ರೇವಣನ ಕಿರಿಯ ಸಮಕಾಲೀನನೆಂದು ಸ್ಪಷ್ಟ ಸಿದ್ಧವಾಗುತ್ತದೆ. ಎಂದು ಪೀಠಿಕಾಕಾರರು ಬರೆದಿದ್ದಾರೆ.

ಇಲ್ಲಿ ದೇವನ ದ್ವಾಪರದ ಮರುಳಸಿದ್ಧ ರೇವಣಾರು ಬೇರೆ. ೧೨ನೇ ಶತಮಾನದ ಮರುಳಸಿದ್ಧ ರೇವಣಾರು ಬೇರೆ; ಎಂದು ಹೇಳಬೇಕಾಯಿತು. ದೇವನ ಮರುಳಸಿದ್ಧ ರೇವಣಾರು ದ್ವಾಪರದವರೆಂಬುವದನ್ನು ೫ನೇ ಸಂಧಿಯ ೧೦, ೧೧, ೧೨ನೇ ಸಂಧಿಯ ಪದ್ಯಗಳಲ್ಲಿ ನೋಡಿಕೊಳ್ಳಬಹುದು. ಆದರೆ ದ್ವಾಪರದ ಕಡೆ ಕಲಿಯುಗದ ಆದಿಯಲ್ಲಿ ಆರು ಸಾವಿರ ವರ್ಷ ಬಾಳಿ ಮರುಳಸಿದ್ಧನು ಮಹಿಮಶಾಲಿಯಾಗಿದ್ದರೆ ಆ ಸಮಯದಲ್ಲಿದ್ದ ವ್ಯಾಸಮಹರ್ಷಿಯು ಈ ಮರುಳಸಿದ್ಧ ಚಾರಿತ್ರವನ್ನು ಬರೆಯದೇ ಬಿಡುತ್ತಿದ್ದಿಲ್ಲ. ಆ ಕಾಲದಿಂದ ಯಾರೂ ಬರೆಯದೇ ಇದ್ದ ಚರಿತ್ರವನ್ನು ಈ ದೇವಕವಿಯು ಯಾವ ಆಧಾರದಿಂದ ಬರೆದನು. ಪೀಠಿಕಾಕಾರರು ಒಪ್ಪಿರುವಂತೆ ಮರುಳಸಿದ್ಧನ ಗದ್ದುಗೆ ಹಾಕುತ್ತಿದ್ದ ರಾಮತಂದೆ ಬರೆದ "ಗುರುಬೋಧೆ" ಎಂಬ ಗ್ರಂಥಾಧಾರದಿಂದ ಎಂದು ಹೇಳಬಹುದು. ಆ ಗುರು ಬೋಧೆಯು ಆ ಕಾಲದ ಕನ್ನಡ ಭಾಷೆಯಲ್ಲಿ ಕಲಿಯುಗದಾದಿಯಲ್ಲಿಯೇ ಹುಟ್ಟಿರಬೇಕು. ಅದು ಹುಟ್ಟಿದ್ದರೆ ದೇವನ ಹಿಂದಿನ ಮತ್ತು ಮುಂದಿನ ಕವಿಗಳು ತಮ್ಮ ಕಾವ್ಯಗಳಲ್ಲಿ ಅದನ್ನು ಕಾಣಿಸದೆ ಬಿಡುತ್ತಿದ್ದಿಲ್ಲ. ಈ ಉಭಯ ಕವಿಗಳು ಮುಖ್ಯವಾಗಿ ಇದ್ದರೆಂಬುದೇ ನಿಶ್ಚಯವಿಲ್ಲದಿರುವಾಗ ಇವರ ಕಾವ್ಯಗಳು ವಿಶ್ವಾಸಾರ್ಹವಾದ

ಯಿಲ್ಲದ ಕೆಲ ವೀರಶೈವರಿಗಾದರೂ ಇಷ್ಟಲಿಂಗದಲ್ಲಿ ಕಲ್ಲೆಂಬ ಭಾವನೆಯನ್ನು ಹುಟ್ಟಿಸಿ ಕ್ರಮೇಣ ಅದರಲ್ಲಿ ಭಕ್ತಿಯನ್ನು ಕಡಿಮೆಮಾಡಿಸಿ ಲಿಂಗಧಾರಣವನ್ನು ಬಿಡಿಸುವದು. (೨) ವೀರಶೈವ ಸ್ತ್ರೀಯರಿಗೆ ಋತುಭಯಹಾಕಿ ಅವರಿಗೆ ಪುರುಷರಂತೆ ಇಷ್ಟಲಿಂಗಧಾರಣ ಪೂಜಾದಿಕರ್ಮಗಳಲ್ಲಿರುವ ಸಮಾನವಾದ ಹಕ್ಕು ಇಲ್ಲೆಂದು ತೋರಿಸುವದು, (೩) ಹೊಲೆಯನೇ ಪೀಠಾಚಾರ್ಯನಾಗಿದ್ದಾನೆಂದ ಮೇಲೆ ವೀರಶೈವರನ್ನು ಕುಲಗೇಡಿಗಳೆನುವದು (೪) ಮರುಳಸಿದ್ಧನು ಹೊಲೆಯರಲ್ಲಿ ಹುಟ್ಟಿ ಗುರುವಾದನೆಂದು ಬರೆದು, ಗುರುವಿರಕ್ತರಲ್ಲಿ ಕಲಹವನ್ನೆಬ್ಬಿಸಿ, ಮಾಹೇಶ್ವರ ಪಂಥವನ್ನೇ ನಾಶಪಡಿಸುವದು. ಇವೇ ಮುಖ್ಯವಾಗಿವೆ. ಇನ್ನಾದರೂ ನಮ್ಮ ಸಮಾಜದವರು ಈ ಸಂಪಾದಕರ ಸಮಾಚಾರವನ್ನು, ಸಮೀಕ್ಷಿಸುವರೋ ?



# ಬೆಳಗಾವಿ ಬಳಿ ಕಾಕತಿ ಗ್ರಾಮದಲ್ಲಿ ಕಾಣುವ ಮರುಳಸಿದ್ಧನ ನೆನಹು

ಲೇ|| ಕಾವ್ಯತೀರ್ಥ, ಆಯುರ್ವೇದಾಚಾರ್ಯ, ಶ್ರೀ ವೃಷಭ ಲಿಂಗ
ಶಿವಾಚಾರ್ಯರು, ಹುಣಸಿಕಟ್ಟೆ ಬೃಹನ್ಮಠ.

ಬೆಳಗಾಂವಿಯಿಂದ ೬ ಮೈಲಿನ ಮೇಲೆ ಕಾಗತಿ ಎಂಬದೊಂದು ಗ್ರಾಮವದೆ. ಆ ಊರಲ್ಲಿ ಸಿದ್ಧೇಶ್ವರ ದೇವಾಲಯವು ಇದ್ದು, ಆ ದೇವಾಲಯದ ಒಳಗೆ ಶಿವಲಿಂಗಮೂರ್ತಿಯು ವಿರಾಜಮಾನವಾಗಿದೆ. ಆ ಶಿವಲಿಂಗ ಮೂರ್ತಿಯ ಮುಂದೆ ಒಂದು ಕಲ್ಲಿನ ದುಂಡನಾದ ದೊಡ್ಡ ಪರಿಸಿ ಇದೆ. ಅದಕ್ಕೆ ಈಗಲೂ ವಿಷಕಾರಿದ ಕಲ್ಲು ಎಂದು ಜನರು ಭಾವಿಸಿ ಪೂಜಿಸುವ ಸಂಪ್ರದಾಯವಿದೆ. ಆ ದೇವಾಲಯದ ದೇವರ ಗರ್ಭಗುಡಿಯ ಮುಂಭಾಗದಲ್ಲಿ ಒಂದು ದೇವಿಯ ಮೂರ್ತಿಯದೆ. ಅದಕ್ಕೆ ದೇವಿಯಂತಲೂ ಲಕುಮವ್ವ ಎಂತಲೂ ಅನ್ನುವ ಸಂಪ್ರದಾಯವದೆ. ಇದೇ ಊರ ಮೇಲಿಂದ ಬೆಳಗಾಂವಿಯ ಲೈನು ಮಾರ್ಗ ಕೊಲ್ಹಾಪೂರಕ್ಕೆ ಹೋಗಿದೆ. ಕೊಲ್ಹಾಪೂರದಲ್ಲಿ ಮಾಯೆಯ ಗರ್ವಭಂಗಮಾಡುವದಕ್ಕೆ ಹೋದ ಮರುಳಸಿದ್ಧ ಮಹಾಶಿವಯೋಗಿಗಳು ಆಕೆಕೊಟ್ಟ ವಿಷಕೊಡವನ್ನು ಕುಡಿಯಲು ಲಕ್ಷ್ಮಿಯು ಮನಮೆಚ್ಚಿ ಹಿಂಬಾಲಿಸಿದಳೆಂದೂ ಆಕೆಗೆ ಜಗದ್ಗುರುಗಳ ಅನೇಕ ರೀತಿಯಿಂದ ಹೇಳಿದರೂ ಕೇಳಲಿಲ್ಲವಾದಕಾರಣ ಹಾಗೆಯೇ ಶಿವಯೋಗಿಗಳು ಕಾಗತಿಗೆ ಬಂದು ಮಾಯೆಗೆ ಈಗೋ ನೀನು ಕುಡಿಯಲು ಕೊಟ್ಟ ವಿಷವನ್ನು ಕಕ್ಕಿ ಬಿಡುವೆನೆಂದು ಹೇಳಿ ಕಕ್ಕಿದರೆಂದೂ ಆ ವಿಷವು ಆ ಕಲ್ಲು ಮೇಲೆ ಬಿದ್ದಿರುವದರಿಂದ ಈಗಲೂ ಅದಕ್ಕೆ ವಿಷಕಾರಿದ ಕಲ್ಲೆಂದು ಹೇಳುವ ರೂಢಿಬಿದ್ದಿದೆ. ಆಗ್ಗೆ ಮಾಯೆಯು ವಿಷಕೊಡವನ್ನು ಕುಡಿದವರನ್ನು ನಾನು ಲಗ್ನವಾಗುವೆನೆಂದು ನನ್ನ ಪಣವಿದ್ದಕಾರಣ ನಿಮ್ಮನ್ನು ನಾನು ಲಗ್ನವಾಗುವೆನೆಂದು ಹಟತೊಡಲಾಗಿ ಗುರುಗಳು ಮೆಚ್ಚದೆ ನಾನು ನಿನ್ನ ಕೂಡ ವಿವಾಹವಾಗಲು ಸಮರ್ಥನಲ್ಲ. ನೀನು ಎಷ್ಟೋ ಯತಿಗಳನ್ನು ಈಪಣದಿಂದ ವಿಷಕುಡಿಸಿ ಕೊಂದು ಬಿಟ್ಟಿರುವೆ. ಆ ಮೂಲಕ ನಿನ್ನಕೂಡ ವಿವಾಹ ಮಾಡಿಕೊಳ್ಳಲು ಬಂದವನಲ್ಲ. ಆ ವಿಷಕೊಡದಿಂದ ಯತಿಗಳ ನಾಶವಾಗುವದರ ಉದ್ದೇಶವಾಗಿ ನಿನ್ನ ಗರ್ಭನಾಶಮಾಡಲು ಆ ವಿಷಕೊಡವನ್ನು ಕುಡಿದಿರುತ್ತೇನೆ. ಇಗೋ ನಾನು ಜಿತೇಂದ್ರಿಯನು. ಆ ಮೂಲಕ ನನ್ನ ವ್ರತಭಂಗವಾಗುತ್ತೆ ಹೋಗೆಂದು ಹೇಳಿದರೂ ಆಕೆಯು ಕೇಳಲಿಲ್ಲ ಆಗ್ಗೆ ಆಕೆಯು ನನ್ನ ಲಗ್ನವಾಗದಿದ್ದರೆ ನನ್ನ ಗತಿ ಏನು. ಓರಂಗಲ್ಲಿನ ಕಾಗತಿವಂಶದವರು ಮೊದಲು ಈ[illegible] ಗ್ರಾಮದಿಂದ

ಹೋಗಿರಬೇಕೆ ? ಎಂದು ಊಹಿಸುವಂತಿದೆ. (ಕಾಗತಿಃ) ಎಂದು ಕೇಳಿದ್ದ ಕ್ಕಾಗಿ ಕಾಗತಿ ಎಂಬ ಹೆಸರು ಆ ಊರಿಗೆ ಬಿತ್ತೆಂತಲೂ ಆ ಊರ ಜನರೂ ಹೇಳುವ ರೂಢಿ ಇದೆ. ಮುಂದೆ ಜಗದ್ಗುರುಗಳು ಹಾಗೆಯೇ ಮುಂದಕ್ಕೆ ಬೆಳಗಾಂವಿಯ ಪಶ್ಚಿಮಕ್ಕೆ ೧೦ ಮೈಲಿನ ಮೇಲೆ ವೆಂಗುರ್ಲಾ ರಸ್ತೆಗೆ ಹತ್ತಿ ವೈಜನಾಥ ವೆಂಬ ದೇವಾಲಯದ ಸ್ಥಾನಕ್ಕೆ ತೆರಳಿದರು. ಅಲ್ಲಿ ಒಂದು ಶಿವ ಲಿಂಗಮೂರ್ತಿಯೂ ಇದ್ದು ದೇವಾಲಯ ಕಲ್ಲಿನಿಂದ ಭದ್ರವಾಗಿ ಕಟ್ಟಡ ಮಾಡಲಾಗಿದೆ. ಆ ದೇವಾಲಯದ ಎಡಗಡೆ ಒಂದು ದೇವಿಯ ದೇವಾಲಯವೂ ಕಲ್ಲಿನಿಂದ ನಿರ್ಮಿತವಾಗಿದೆ. ಒಳಗೆ ದೇವಿಯ ಮೂರ್ತಿಯೂ ಇದೆ. ಆಗ್ಗೆ ಮಾಯೆಯು ಮತ್ತೆ ಆ ಗುರುಗಳಿಗೆ ಪೀಡಿಸಲಾಗಿ ನಿತ್ಯ ಶಿವಾರ್ಚನೆಯನ್ನು ತೀರಿಸಿಕೊಂಡು ಕುಳಿತಿರಲು ಒಮ್ಮಿಂದೊಮ್ಮೆಲೆ ರೊಚ್ಚಿಗೆದ್ದು ನನ್ನನ್ನು ಪೀಡಿಸುವದಾದರೆ ನಿನಗೆ ತಕ್ಕಶಾಸನವನ್ನು ಕೊಡುತ್ತೇನೆಂದು ಹೇಳಿ ಆ ಮಾಯೆಯ ಕಿವಿ ಮೂಗು ಮೊಲೆಗಳನ್ನು ಕೊಯ್ದು ಬಿಟ್ಟರೆಂತಲೂ ವದಂತಿ ಇದೆ. ಈಗ್ಗೂ ಆ ದೇವಿಯ ಮೂರ್ತಿಯು ಮೂಗು ಮೊಲೆಗಳು ಕೊಯ್ದಂತೆಯೇ ಕಾಣುತ್ತವೆ. ಆಗ್ಗೆ ಆ ದೇವಿಯು ಪಶ್ಚಾತ್ತಾಪಬಟ್ಟು, ನಾನು ಅಪರಾಧಿಯಾದ ಕಾರಣ ನನ್ನ ಅಪರಾಧವನ್ನು ಕ್ಷಮಿಸೆಂದು ಕೇಳಲು ಗುರುಗಳು ಕ್ಷಮಿಸಿ ಅಲ್ಲಿರುವ ವನಸ್ಪತಿಗಳನ್ನು ತಂದು ಅರೆದುಆಕೆಯ ಮೊಲೆ ಮೂಗುಗಳಿಗೆ ಹಚ್ಚಿ ಮಾಯಿಸಿದರೆಂದೂ ವದಂತಿ ಇದೆ. ಆ ದೇವ ರಿಗೂ ಅದಕ್ಕಾಗಿ ವೈದ್ಯನಾಥನೆಂಬ ಹೆಸರು ಬಂದಿದೆಯೆಂದೂ ಹೇಳುತ್ತಾರೆ. ಅದಕ್ಕೆ ರೂಢಿಯಲ್ಲಿ ವೈಜನಾಥ ಎನ್ನುವ ಸಂಪ್ರದಾಯ ಬಿದ್ದಿದೆ. ಆ ಮೇಲೆ ದೇವಿಯು ತನ್ನ ಅಪರಾಧಕ್ಕಾಗಿ ಮತ್ತೆ ನನಗೆ ತಾವುಗಳು ಉಪದೇಶ ಮಾಡ ಬೇಕೆಂದು ಕೇಳಲಾಗಿ ಗುರುಗಳು ಸಂತೋಷಭರಿತರಾಗಿ ಆಕೆಯನ್ನು ಕೊಲ್ಹಾ ಪೂರಕ್ಕೆ ಕಳಿಸಿ ತಾವು ಆಕಾಶಮಾರ್ಗದಿಂದ ಕೊಲ್ಹಾಪೂರಕ್ಕೆ ಹೋಗಿ ಆಕೆಗೆ ಲಿಂಗಧಾರಣ ಮಂತ್ರೋಪದೇಶವನ್ನು ಮಾಡಿದರೆಂದು ಈಗಲೂ ಹೇಳುತ್ತೇವೆ.

---

# ಪ್ರೂವಲ್ಲೀ ಪಂಚವಣ್ಣಿಗೆ ನಂದೀಶ ಶಿವಕವಿ ರಚಿತಂ

## ಶ್ರೀ ಮರುಳಾರಾಧ್ಯ ವಿಜಯ ಚರಿತಂ.

ಗದ್ಯಾನುವಾದಕರು:— ಪಂಡಿತ ಕವಲಿ ಚೆನ್ನಬಸಪ್ಪನವರು

### ಒಂದನೆಯ ಸಂಧಿ

ಈ ಸೃಷ್ಟಿ ಹೇಗಾಯಿತು ?

**ಪೀಠಿಕೆ**

ಕವಿಯು ಗ್ರಂಥಾರಂಭದ ಪ್ರಥಮ ಪದ್ಯದಲ್ಲಿಯೇ ತನ್ನ ಗುರುವಾದ ಶ್ರೀ ಸಿದ್ಧನಂಜೇಶ್ವರನನ್ನು 'ಅನುಪಮೋಧವು, ಸುಗುಣಾರಾಮ,ನಿರ್ಜಿತರಾಮ ....... ಪೊರೆಗೆ ' ಮುಂತಾಗಿ ನಮನಪೂರ್ವಕವಾಗಿ ಹೊಗಳುತ್ತಾನೆ. ಬಳಿಕ 'ಹಿಮಗಿರಿಜೇಶ ಚಂದ್ರನಾನಂದವನು ಕುಡುಗೆ' ಎಂದು ಶಿವನನ್ನು ಸ್ತುತಿಸುತ್ತಾನೆ. ಹಾಗೆಯೇ 'ಪರಶಿವೆಯ ಸ್ಮಿತ ಚಂದ್ರಿಕೆಯು ಪರಮಾನಂದವನು ಕುಡುಗೆ' ಎಂದು ಪಾರ್ವತಿಯನ್ನೂ, 'ಕರಿವದನ ರವಿಯಮಗೆ ಜ್ಞಾನ ಜ್ಯೋತಿಯನು ಕುಡುಗೆ 'ಎಂದು ಗಣಪತಿಯನ್ನು, 'ಕೃತಿಗೆ ಮಂಗಲ ಕುಡುಗೆ ' ಎಂದು ಸರಸ್ವತಿಯನ್ನೂ 'ಕೃತಿಗೆ ಮಂಗಲವಿತ್ತು ಪಾಲಿಪುದು' ಎಂದು ವೀರನಂದಿ ಮೊದಲಾದ ವೀರಶೈವ ಗೋತ್ರ ಪುರುಷರನ್ನೂ, ಪಂಚಕಲಶಾಧೀಶನಾದ ಜಗದ್ಗುರು ಪಂಚಪೀಠಾಧೀಶರನ್ನೂ ಸ್ತುತಿಸಿದ್ದಾನೆ.

ಮುಂದೆ, ಶ್ರೀ ಸಿದ್ಧನಂಜನು ತನ್ನ ಪ್ರಿಯಸತಿ ಚೆನ್ನವೀರಾಂಬಿಕೆಗೆ ಬೋಧಿಸಿದ " ಮರುಳಾರಾಧ್ಯರ ಚರಿತೆಯನ್ನು ತಾನು ಕಾವ್ಯರೂಪದಲ್ಲಿ ಬರೆದಿರುವುದಾಗಿ ತಿಳಿಸುತ್ತಾನೆ; ಮತ್ತು ಈ ಕಾವ್ಯ ಗುರುಪ್ರಸಾದದಿಂದ ಬಂದ ಸತ್ಯಸಂಗತಿಯೆಂಬುದನ್ನು ಭಕ್ತರಿಗೂ ಭಾವುಕರಿಗೂ ಆದೇಯ ಚರಿತ್ರವೆಂಬುದನ್ನು ದೃಢಪಡಿಸುತ್ತಾನೆ. ಇದು ವ್ಯುತ್ಪನ್ನ ಕವಿಯ ಕೃತಿಯಾಗಿರುವುದರಿಂದ ಸಕಲರಿಂದಲೂ ಮನ್ನಣೆ ಪಡೆಯುವುದೆಂದು ಕವಿಯ ದೃಢವಿಶ್ವಾಸವಿದೆ. ಈ ಕಾವ್ಯದ ಮುಖ್ಯ ಹೃದಯವೆಂದರೆ, ಪರಶಿವನು ಪಾರ್ವತಿಗೆ ಹೇಳಿದ ಪಾಶುಪತ ತಂತ್ರದಲ್ಲಿಯ ಸುಪ್ರಬೋಧಗಮುದ ಮರುಳಾರಾಧ್ಯ ಚಾರಿತ್ರ ಅದನ್ನೇ ನರಸ ಲಕ್ಷಣ ಸಹಿತವಾದ ಕಾವ್ಯರೂಪದಲ್ಲಿ ತಾನು ಹೆಣೆದಿರುವುದಾಗಿ ಕವಿ ಹೇಳಿಕೊಳ್ಳುತ್ತಾನೆ. ಆದರೆ ಇದರಲ್ಲಿ ಮುಖ್ಯವಾಗಿ ಹೇಳಬೇಕಾಗಿರುವುದು ಉಜ್ಜಯಿನೀ ಪೀಠಾಚಾರ್ಯನಾದ ಜಗದ್ಗುರು ಮರುಳಸಿದ್ಧರ ಚರಿತ್ರ. ಆದರೆ ಅದನ್ನು 'ಕಲಿಯುಗದ ಪ್ರಥಮಪಾದದೆ ವಳವೃಕ್ಷ ಮೂಲಸ್ಥಳದೆ ರಾಜಿಪ ಸಿದ್ಧಲಿಂಗದೆ ಜನನವೆತ್ತಿರುವ ಮರುಳಾರಾಧ್ಯ ಚರಿತ'ದಿಂದ ಆರಂಭಮಾಡುತ್ತಾನೆ.

## ಕಥಾರಂಭ

ಪರಮ ಶಿವನು ಒಮ್ಮೆ ಚಿದಚಿಚ್ಛಕ್ತಿಯುಕ್ತನಾದ ಸಮಯದಲ್ಲಿ ವಿಶ್ವವನ್ನು ಸೃಷ್ಟಿಸಬೇಕೆಂದು ಆತನ ಇಚ್ಛೆಯಾಯಿತು. ಕೂಡಲೆ ಆತ ಬ್ರಹ್ಮನನ್ನು ಹುಟ್ಟಿಸಿದ; ಮತ್ತು ಆತನಿಗೆ ಜಗನ್ನಿರ್ಮಾಣ ಕಾರ್ಯವನ್ನು ಒಪ್ಪಿಸಿದ. ಶಿವನ ಇಚ್ಛೆಯಂತೆ ಬ್ರಹ್ಮ ಮೊದಲು ಕಲ್ಲು ಮೊದಲಾದ ಸಕಲ ಜಡಸೃಷ್ಟಿಯನ್ನು ಒಳಿಕ ವನಸ್ಪತಿಗಳನ್ನು ತಿರ್ಯಕ್ ಜಂತುಗಳನ್ನು ಹುಟ್ಟಿಸಿದ. ಆದರೆ ಅವುಗಳಲ್ಲಿ ಜೀವಕಳೆಯನ್ನು ತುಂಬುವ ಕಲೆ ಆತನಿಗೆ ತಿಳಿದಿರಲಿಲ್ಲ. ಬ್ರಹ್ಮನ ಬೇಡಿಕೆಯಂತೆ ಶಿವ ಅದನ್ನು ತಿಳಿಸಿಕೊಡುತ್ತಾನೆ. ಮುಂದೆ ಇದೇ ತತ್ತ್ವದಂತೆ ಪಕ್ಷಿ ಪಶು ಮೊದಲಾಗಿ ಬ್ರಹ್ಮ ಸೃಷ್ಟಿಯಾಗುವುದು ಮಾನುಷ್ಯ ಸೃಷ್ಟಿಯನ್ನು ಮಾಡುವುದು ಬ್ರಹ್ಮನಿಗೆ ಗೊತ್ತಿರಲಿಲ್ಲ. ಅದಕ್ಕಾಗಿ ಆತ ಶಿವನನ್ನು ಪ್ರಾರ್ಥಿಸಿದ. ಆಗ ಪರಶಿವ ತನ್ನ ಶಿವಗಣಗಳ ಮಾದರಿಯನ್ನು ತೋರಿಸಿ ತನ್ನ ಪಂಚಮುಖದಿಂದ ಐವರು ಆಚಾರ್ಯರ ಅಪ್ರಾಕೃತ ಸೃಷ್ಟಿಯನ್ನು ಮಾಡಿದ. ಇವರೇ ಜಗದ್ಗುರು ಪಂಚಾಚಾರ್ಯರು. ಆ ಮೇಲೆ ಮುಖ್ಯದಿಂದ ಬ್ರಾಹ್ಮಣರನ್ನೂ, ಬಾಹುಗಳಿಂದ ಕ್ಷತ್ರಿಯರನ್ನೂ, ತೊಡೆಗಳಿಂದ ವೈಶ್ಯರನ್ನೂ, ಪಾದಗಳಿಂದ ಶೂದ್ರರನ್ನೂ, ಮಾನಸ ಸೃಷ್ಟಿಯಲ್ಲಿ ಮೂಡಿಸಿದ. ಅದರಂತೆ ತನ್ನ ಕಣ್ಣು ಮನಸ್ಸು ಮೊದಲಾದವುಗಳಿಂದ ಸೂರ್ಯ ಚಂದ್ರ ಮೊದಲಾದವರನ್ನೂ ಪಂಚಮಹಾಭೂತಗಳನ್ನೂ ಕಲ್ಪಿಸಿದ. ಬ್ರಹ್ಮಸೃಷ್ಟಿಗೆ ಇದೆಲ್ಲ ಮಾರ್ಗದರ್ಶಿಯಾಯಿತು. ಆ ಮೇಲೆ ಪರಶಿವನು ಕಾಲರುದ್ರನನ್ನು ಕರೆದು ವೇದ ವೇದಾಂಗ ಸಾಹಿತ್ಯವನ್ನು ನಿರ್ಮಿಸುವ ಗುಟ್ಟನ್ನು ಅರುಹಿದನು.

ಪರಶಿವನ ಇಚ್ಛೆಯಂತೆ ಬ್ರಹ್ಮನಿಂದ ಪ್ರಾಕೃತ ಸೃಷ್ಟಿಯಾಯಿತು. ಆ ಸೃಷ್ಟಿಯ ಉನ್ನತಿಗೆ ತಕ್ಕ ಸಾಹಿತ್ಯವೆಲ್ಲ ಸಿದ್ಧವಾಯಿತು ಪರಶಿವ ಇದನ್ನೆಲ್ಲ ನೋಡಿದ. ಆತನಿಗೆ ಅತ್ಯಾನಂದವಾಯಿತು. ಅದರ ಸುಸ್ಥಿರತೆಯ ಸಂರಕ್ಷಣದ ಕಾರ್ಯವನ್ನು ಆತ ವಿಷ್ಣುವಿಗೊಪ್ಪಿಸಿದ. ತಾನು ಬಂಧ ಮೋಕ್ಷ ಕಾರ್ಯಗಳನ್ನಿಟ್ಟುಕೊಂಡ. ಸೃಷ್ಟಿಯ ಸಕಲ ಕರ್ಮ ಸಾಕ್ಷಿಯೂ ತಾನೇ ಆದ. ಹೀಗೆ ಕ್ಷಣದಲ್ಲಿ ಪ್ರಾಕೃತ ಸೃಷ್ಟಿಯೂ ಅದರ ಸಂರಕ್ಷಣಾದಿಗಳ ವ್ಯವಸ್ಥೆಯೂ ಆಯಿತು. ಈ ಬಗೆಗೆ ಅನೇಕಾನೇಕ ಶಾಸ್ತ್ರಗಳೂ ಪುರಾಣಗಳೂ ಆಧಾರವಾಗಿವೆ.

## ಎರಡನೆಯ ಸಂಧಿ

## ದೇವತೆಗಳ ಅವತಾರ

ಬ್ರಹ್ಮ ಸೃಷ್ಟಿಯಲ್ಲಿ ಮೊದಲನೆಯದೆಂದರೆ ಜಲಸೃಷ್ಟಿ. ಅದುವೆ ಮಹಾಸಾಗರ. ಆ ಕ್ಷೀರಸಾಗರ ಸಕಲ ವೈಭವ ಪೂರ್ಣವಾಗಿ 'ಸಾಂಬನ ವಿಶದ ರೂಪವ ಧರಿಸಿ' ಮೆರೆವುದು. ಆ ಮಹಾಸಾಗರದ ಉತ್ತರ ದಿಕ್ಕಿನಲ್ಲಿ ವಿಬುಧರಾನು

ವಾವ ಹೇಮಕೂಟ ಪರ್ವತ ಮೆರೆಯುತ್ತಿದೆ. ಅದುವೆ ಪರಶಿವನ ರಾಜಧಾನಿ. ಆ ಹೇಮಕೂಟದ ಆದ್ಯಂತಗಳನ್ನು ಅರಿಯುವುದು ಅಜಹರಿಗಳಿಗೂ ಅಸಾಧ್ಯ. ಆ ಗಿರಿಯಲ್ಲಿಯೇ ಪತಿತಪಾವನೆಯಾದ ಸುರಗಂಗೆ ಪ್ರವಹಿಸುತ್ತಿದ್ದಾಳೆ. ಆ ಸರಿತ್ತನ್ನು ನೋಡಿದರೆ, ತ್ರಿಪುರವನ್ನು ನಾಶಮಾಡುವಾಗ ಪರಮೇಶ್ವರನು ಮೇರುಪರ್ವತವೆಂಬ ಬಿಲ್ಲಿಗೆ ಕಟ್ಟಿದ ಹೆದೆಯಂತೆ ಕಂಗೊಳಿಸುತ್ತಿದೆ. ಆ ಸುರಗಂಗೆಯ ಸಮೀಪದಲ್ಲಿಯೇ ಅರಗಿಳಿಗಳ ಅಭ್ಯಾಸ ಸ್ಥಳ, ಅಂಚೆಗಳ ಆಟದ ಬಯಲು, ನವಿಲುಗಳ ನರ್ತನ ಶಾಲೆಯಂತಿರ್ಪ ಮಾಧವನ ವನವಿದೆ.

ಆ ವನದಿಂದ ತುಸು ಮುಂದೆ ಹೋದರೆ, ದೇವಮಂದಿರಗಳ ದೊಡ್ಡಿತೆಯಿಂದಲೂ ಶಿವಭಕ್ತರ ಸೌಧಗಳಿಂದಲೂ ಸಮೃದ್ಧವಾಗಿ ಮುಕ್ತಿಕಾಮಿನಿಯ ಮುಖ್ಯ ಮಂದಿರದಂತೆ ಶಿವರಾಜಧಾನಿ ಶೋಭಿಸುತ್ತಿದ್ದಿತು. ಆ ಶಿವನಗರವನ್ನು ಕೈಲಾಸಪರ್ವತದ ವದನ ಶ್ರೀನಿಧಿಯ ಸದನವೆಂದು ಹೇಳಬಹುದು. ವೈಭವದ ವಿಚಾರದಲ್ಲಿಯೂ ಶಿವನಗರದ ಶ್ರೇಷ್ಠತೆ ಅತ್ಯಧಿಕ. ಸಿರಿಗೆ ನೆಲೆಯು ಸರೋಜ; ಸರೋಜದ ಸದನ ಜಲ; ಜಲಕ್ಕೆ ಜನ್ಮಸ್ಥಾನ ಜಾಹ್ನವಿ. ಜಾಹ್ನವಿ ಜನಿಸಿದುದು ಮೇರುಗಿರಿಯಿಂದ; ಮೇರುಗಿರಿಯ ಸಮ್ರಾಟ ಶಿವ, ಶಿವನಿಗೆ ಅಧಿಷ್ಠಾನ ಶಿವನಗರ! ಎಂದ ಮೇಲೆ ಸಿರಿಗಿಂತ ಶಿವನಗರ ಅದೆಷ್ಟು ಅಧಿಕವಾಯಿತು!

ಆ ಶಿವನಗರಕ್ಕೆ ನಾಲ್ದೆಸೆಗಳಲ್ಲಿ ನಾಲ್ಕು ಮಹಾದ್ವಾರಗಳಿವೆ. ಅಲ್ಲಿಂದ ಒಳಗಡೆ ಚಂದ್ರಕಾಂತ ಶಿಲಾನಿರ್ಮಿತ ಶಿವಮಂದಿರ. ಅದರ ನಡುವೆ ನವರತ್ನ ಖಚಿತವಾದ ಮಂಗಲ ಮಂಚಕ. ಅದರ ಮೇಲೆ ತುಂಗವಿಕ್ರಮನೂ ಗಂಗಾಧರನೂ ಅನಂಗಭಂಗನೂ ಆದ ಮಹೇಶ ಮಂಡಿಸಿದ್ದಾನೆ. ಪಾರ್ವತಿ ಆತನ ವಾಮಭಾಗವನ್ನಾಲಂಕರಿಸಿದ್ದಳು. ಎಡಬಲಗಳಲ್ಲಿ ಗಣಪತಿ ಷಣ್ಮುಖ ವೀರಭದ್ರ ಮುಂತಾಗಿ ಸಕಲ ದೇವಗಣವಿದೆ. ಶ್ರೀ ವಿಷ್ಣು ಮೊದಲಾದ ದೇವತಾ ಪರಿವಾರವೂ ಸಭೆಯನ್ನಲಂಕರಿಸಿದ್ದಳು. ಎಲ್ಲರೂ ಗಾನ ನರ್ತನಾದಿಗಳಿಂದ ಬಗೆ ಬಗೆಯ ಸೇವೆಗಳಿಂದ ಶಿವನಿಗೆ ತಮ್ಮ ಉತ್ಕಟ ಭಕ್ತಿಯನ್ನು ಮೆರೆಸುತ್ತಿದ್ದರು.

ಪರಶಿವನಿಗೆ ಪರಮಾನಂದವಾಯಿತು. ನಲಿವ ನೇತ್ರಗಳಿಂದ ಆತ ನಾಲ್ಕು ದಿಕ್ಕಿಗೂ ನೋಡಿದ. ತಮ್ಮ ಮೇಲೆ ಕೃಪಾವರ್ಷದ ಕಟಾಕ್ಷ ಬಿದ್ದಿತಲ್ಲ ಎಂದು ಎಲ್ಲರೂ ಆನಂದತುಂದಿಲರಾದರು. ಆ ಮೇಲೆ ಎಲ್ಲರ ಕಾರ್ಯಗಳ ಮೇಲ್ವಿಚಾರಣೆ ನಡೆಯಿತು. ಬ್ರಹ್ಮ, ವಿಷ್ಣು, ರುದ್ರ, ದಿಕ್ಪಾಲಕರೆಲ್ಲ ತಮ್ಮ ತಮ್ಮ ವರದಿಯನ್ನು ಒಪ್ಪಿಸಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ದಕ್ಷತೆಯಿಂದ ಸಾಗಿಸಿದ್ದರು. ಅದನ್ನು ಕೇಳಿ ಪರಶಿವನಿಗೆ ಪರಮಾನಂದವಾಯಿತು. ಆತ್ಮಜ್ಞಾನ ದೃಷ್ಟಿಯಿಂದಲೇ ಸಕಲರ ಯೋಗ್ಯ

ತೆಗೆ ತಕ್ಕಂತೆ ಶಿವ ಅನುಗ್ರಹವಿತ್ತ; ಮತ್ತು ಅವರ ಮುಂದಿನ ಕಾರ್ಯಕ್ಕೆ ಬೇಕಾದ ಜ್ಞಾನಾದಿ ಸಲಕರಣೆಗಳನ್ನು ಒದವಿಸಿದ. ಎಲ್ಲರೂ ಹಿಗ್ಗಿನಿಂದ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

## ಮೂರನೆಯ ಸಂಧಿ

## ಕೆಲಸವನ್ನು ಕೈಕೊಂಡುದು

ಹೀಗೆಯೇ ಒಂದು ದಿನ ಶಿವನು ಸರ್ವಜ್ಞಾನ ದೃಷ್ಟಿಯಿಂದಲೂ ಸರ್ವಾತ್ಮ ಭಾವದಿಂದಲೂ ಸಾಮಗಾನವನ್ನು ಕೇಳುತ್ತ ಸಂತೋಷ ಭರಿತನಾಗಿ ಸಭೆಯಲ್ಲಿ ಕುಳಿತಿದ್ದ. ಆ ಹೊತ್ತಿಗೆ ಬ್ರಹ್ಮನ ಮಾನಸ ಪುತ್ರನಾದ ನಾರದನು ಬಂದನು. ನಾರದನ ಮುಖ್ಯ ಕಾರ್ಯ ತ್ರಿಲೋಕ ಸಂಚಾರ; ಮತ್ತು ಆ ಸಂಚಾರದಲ್ಲಿ ತಮಗೆ ದೊರೆತ ಸಂಗತಿಗಳನ್ನು ಶಿವನಿಗೆ ಒಪ್ಪಿಸುವುದು. ದೇವ ಮುನಿಯನ್ನು ಕಂಡು ಶಿವನಿಗೆ ಸಂತೋಷವಾಯಿತು. ನಾರದನು ಶಿವನಿಗೆ ತನ್ನ ವರದಿಯನ್ನು ಒಪ್ಪಿಸುತ್ತ—

ಭೂತೇಶನೇ, ಭೂಲೋಕದಲ್ಲಿ ಜ್ಞಾನಮಾರ್ಗವೂ ಇಲ್ಲ, ಕ್ರಿಯಾ ಮಾರ್ಗವೂ ಇಲ್ಲ, ಭಕ್ತಿ ಮಾರ್ಗವೂ ಇಲ್ಲ. ಪಾಪ ಪುಣ್ಯಗಳ ಪರಿವೆಯಿಲ್ಲದೆ ಹಿಂಸಾಮಯ ಯಜ್ಞಗಳು ಹೇರಳವಾಗಿ ಹೆಜ್ಜೆ ಹೆಜ್ಜೆಗೆ ನಡೆದಿವೆ. ಶಿವನ ಹೆಸರಿನಿಂದ ಪಶುಗಳನ್ನು ಶಿಶುಗಳನ್ನು ಹೆಂಗುಸರನ್ನು ಗಂಡುಸರನ್ನು ಸಿಕ್ಕಂತೆ ಬಲಿಕೊಡಲಾಗುತ್ತಿದೆ. ಆ ಕಾಲದಲ್ಲಿ ಉಣಿಸು ತಿನಿಸು ಕುಡಿತಗಳು ಕೇಳುವುದಕ್ಕೆ ಹೇಸಿಕೆ ಬರುವಂತಿವೆ. ಕೆಲವು ವೈದಿಕರು ಯಾಗಗಳ ನೆಪದಿಂದ ತಮ್ಮ ಅರಸನ ಸುಂದರ ಸತಿಯೊಡನೆ ಸಂಭೋಗ ಹೊಂದುವರು! ವಿಷ್ಣುವಿನ ಪೂಜೆಯೂ ಹೀಗೆಯೇ ಅಸಹ್ಯಕರವಾದುದಾಗಿದೆ. ಹತ್ತವತಾರಗಳ ಹಿರಿಮೆಯನ್ನು ಮರೆತಿದ್ದಾರೆ; ಮತ್ತೆ ಅವನಿಗೆ ನರಬಲಿಯ ನೈವೇದ್ಯವನ್ನು ನೀಡುತ್ತಾರೆ. ಕೃಷ್ಣನ ಪೂಜಾ ಆರಂಭವಾದುದೆಂದರೆ ಸಿಕ್ಕ ಸಿಕ್ಕಲ್ಲಿ ಕಳವು; ಪರವಗಿತೆಯರ ಪಾತಿವ್ರತ್ಯನಾಶ! ಜ್ಞಾನಪ್ರಾಪ್ತಿವರ ಗತಿಯೇ ಹೀಗೆ? ಅಜ್ಞಾನಿಗಳನ್ನು ಏನು ಕೇಳುವುದು! ಮಾರಿ ಮಸಣಿ ದುರುಗವ್ವ ಮರಿಯವ್ವ ಮುಂತಾದವುಗಳ ಹೆಸರಿನಿಂದ ರಕ್ತದ ಮಡುವು ನಿಲ್ಲುವಷ್ಟು ಪ್ರಾಣಿಗಳ ವಧೆಯಾಗುತ್ತಿದೆ! ಆ ಕುಡಿತದಲ್ಲಿ ಅವರಿಗೆ ಹಿಡಿತವೇ ಇರುವುದಿಲ್ಲ. ಮುಂದೆ ಅವಿವೇಕ ಅನಾಚಾರಗಳಿಗೆ ತಡೆಯೇ? ದೇವಾ ಈಗ ನೀನು ಹೀಗೆಯೇ ಕೈಬಿಟ್ಟರೆ ಭೂಲೋಕವೆಲ್ಲ ಭೀಭತ್ಸರಸದ ಮಹಾಸರೋವರವಾಗುವುದು. ಪೃಥ್ವಿಯೆಲ್ಲ ಪಾಪದ ಕುಂಡವಾಗುವುದು. ಅದಕ್ಕಾಗಿ ತಾವು ಬೇಗನೆ ಭೂಲೋಕವನ್ನು ಉದ್ಧರಿಸಲೇಬೇಕೆಂದು ಪ್ರಾರ್ಥಿಸಿದನು.

ಆಗ ಶಿವನು— ದೇವಾಧಿದೇವತೆಗಳೇ ಭೂಲೋಕದ ಬವಣೆಯನು ಕೇಳಿದಿರಲ್ಲವೇ! ಈಗ ಪ್ರಥ್ವಿಯೆಲ್ಲ ಪಶುಮಯವಾಗಿದೆ. ಅದನ್ನು ಉದ್ಧರಿಸುವುದು ನನ್ನ ನಿಮ್ಮ ಕರ್ತವ್ಯ. ಭೂಲೋಕದಲ್ಲಿ ಭಕ್ತಿಯ ಬೀಜವನ್ನು ಬಿತ್ತಬೇಕು; ಅಹಿಂಸಾಮಯವಾದ ಶ್ರೇಷ್ಠ ಶೈವ ತತ್ವವನ್ನು ನೆಲೆಗೊಳಿಸಬೇಕು. ಪಂಚಾಚಾರ್ಯರೇ! ಈ ಮೊದಲು ನೀವು ಭೂಮಿಗೆ ಹೋಗಿ ವೀರಶೈವ ಮತವನ್ನು ಸ್ಥಾಪಿಸಿದಿರಿ. ಈಗ ಅದನ್ನು ಉದ್ಧರಿಸುವುದಕ್ಕೆ ಬೇರೆ ಬೇರೆ ಕಡೆಗಳಲ್ಲಿ ಅಪ್ರಾಕೃತ ಶರೀರಿಗಳಾಗಿಯೇ ಲಿಂಗದಿಂದ ಉದ್ಭವಿಸಬೇಕು; ಶೈವ ಮತದ ಶಾಶ್ವತತೆಯನ್ನು ಸ್ಥಿರಗೊಳಿಸಬೇಕು. ವಿಷ್ಣುವೇ! ನೀನು ವೈಷ್ಣವ ಮತೋದ್ಧಾರಕ್ಕಾಗಿ ಬುದ್ಧನಾಮದಿಂದ ಭೂಮಿಯಲ್ಲಿ ಅವತರಿಸಬೇಕು; ಕೇವಲ ಅಹಿಂಸಾಮಾರ್ಗವನ್ನು ಉಪದೇಶಿಸಬೇಕು. ಶುದ್ಧ ವೈದಿಕ ಧರ್ಮದಲ್ಲಿ ಹಿಂಸೆಗೆ ಒಪ್ಪಿಗೆಯಿಲ್ಲ. ಉಳಿದ ಗಣ ಪುಂಗವರೇ! ನೀವು ಈ ಕಾರ್ಯದಲ್ಲಿ ಪಂಚಾಚಾರ್ಯರಿಗೂ ವಿಷ್ಣುವಿಗೂ ಸಾಹಾಯ್ಯಕರಾಗಿ ಅವರು ಹೇಳಿದಲ್ಲಿ ಕೆಲಸ ಮಾಡತಕ್ಕದ್ದು. ಉಳಿದವರಿಗಂತೂ ಈ ಮೊದಲು ಬೇರೆ ಬೇರೆ ಕೆಲಸಗಳನ್ನು ನಿಯಮಿಸಿದೆ ಎಲ್ಲರೂ ನಿಮ್ಮ ನಿಮ್ಮ ಕೆಲಸಗಳಲ್ಲಿ ತತ್ಪರರಾಗಿರಬೇಕು ಎಂದು ಆಜ್ಞೆ ಕೊಡಿಸಿದರು. ಸಭೆಯೆಲ್ಲ ಒಕ್ಕೊರಲಿನಿಂದ ಒಪ್ಪಿಗೆಯನ್ನು ಸೂಚಿಸಿತು.

## ನಾಲ್ಕನೆಯ ಸಂಧಿ

## ಪಂಚಾಚಾರ್ಯರು ಪೃಥ್ವಿಯಲ್ಲಿ

ಚೀನ ಪ್ರದೇಶದ ಮೇರೆಯಿಂದ ಕಾಶ್ಮೀರದವರೆಗೂ ಮೇರುಗಿರಿಯ ದಕ್ಷಿಣದಿಂದ ಕನ್ಯಾಕುಮಾರಿಯವರೆಗೂ ಸಮುದ್ರ ಪರ್ಯಂತವಾದ ಭರತ ದೇಶದ ವಿಸ್ತಾರ ಸ್ವತಂತ್ರ, ಖಂಡವೆನಿಸುವ ಸ್ಥಿತಿ. ಈ ದೇಶದಲ್ಲಿ ಹಿಮಗಿರಿ, ವಿಂಧ್ಯಾಚಲ, ಸಹ್ಯಪರ್ವತ, ಶ್ರೀಶೈಲ ಮೊದಲಾಗಿ ದೇವತಾವಿಲಾಸೋಪಯೋಗಿಯಾದ ಮಹಾ ಪರ್ವತಗಳಿವೆ. ಪತಿತಪಾವನೆಯರಾದ ಗಂಗಾ, ಯಮುನಾ, ಗೋದಾವರೀ, ಕೃಷ್ಣಾ, ತುಂಗಭದ್ರಾ, ಕಾವೇರಿ ಮೊದಲಾದ ನದನದಿಗಳು ದೇಶಪರ್ಯಂತ ಪ್ರವಹಿಸುತ್ತಿವೆ. ಇಲ್ಲಿ ನದಿ ತೀರಗಳಲ್ಲಿ ಪರಮ ಪವಿತ್ರ, ಮತ್ತು ರಮಣೀಯವಾದ ಪುಣ್ಯಕ್ಷೇತ್ರಗಳಿವೆ ಮತ್ತು ಸಸ್ಯ ಸಂಪತ್ತು ಖನಿಜ ಸಂಪತ್ತಿನಿಂದಲೂ ಪರಿಪೂರ್ಣತೆಯಿದೆ.

ಈ ಅಖಂಡ ಭಾರತದಲ್ಲಿ ಮೊದಲಕಾಲದೊಳಗೆ ಅಂಗ, ವಂಗ, ಕಳಿಂಗ, ಸೌರಾಷ್ಟ್ರ, ಮೈಥಿಲ, ಕೋಶ, ಚೇರ, ಕಾಶ್ಮೀರ, ಕುಂತಳ, ಮೊದಲಾಗಿ ಛಪ್ಪನ್ನ ಪೂರ್ಣವಾದ ಸಣ್ಣ ದೊಡ್ಡ ರಾಷ್ಟ್ರಗಳಿದ್ದವು. ಅವುಗಳಲ್ಲಿ ಕುಂತಳ ಕರ್ನಾಟಕ ಭಾರತೀ ದೇವಿಯ ಸೌಭಾಗ್ಯ ಚಂದ್ರದಂತೆ ಮೆ[illegible]ಯುತ್ತಿದೆ. ಇಲ್ಲಿಯ ನವರತ್ನ ಸಿಧಿಯೋ ಭಂಡೇಲಿಗೆ ವಸುಮತಿಯೆಂಬ ನಾ[illegible]ಸ್ಥ ಕೊಟ್ಟಿದೆ.

ಈ ಭಾರತದೇವಿಯ ಸ್ಥಾವರ ಸಂಪತ್ತನ್ನು ಎಷ್ಟು ಬಣ್ಣಿಸಿದರೂ ಕಡಮೆಯೇ. ಭವ್ಯ ಜ್ಯೋತಿರ್ಲಿಂಗಗಳು, ನದೀ—ನದ—ಸರೋವರಗಳು—ವಿಚಿತ್ರ ರಾಗರಂಜಿತ ತರುಲತೆಗಳು ಹೆಜ್ಜೆ ಹೆಜ್ಜೆಗೆ ಕಂಗೊಳಿಸುತ್ತಿವೆ.

ಈ ನಿಸರ್ಗದ ನಿಧಾನಕ್ಕೆ ತಕ್ಕಂತೆ ಮಾನವ ನಿರ್ಮಿತ ಸೌಂದರ್ಯಕ್ಕೂ ಕೊರತೆಯಿಲ್ಲ. ಊರೂರಿಗೆ ಸ್ವರ್ಗವನ್ನು ಮುದ್ದಾಡುವ ಶಿವ ಮಂದಿರಗಳು, ಜನಾಕೀರ್ಣವಾದ ಪತ್ತನಗಳು, ಭವ್ಯ ರಾಜಧಾನಿಗಳು, ತಸ್ತ್ರಶಾಲೆ, ಶಾಸ್ತ್ರಶಾಲೆ, ಕಲಾನಿಲಯ, ಗಾನಮಂದಿರ, ಅನ್ನಸತ್ರ, ಅರವಟ್ಟಿಗೆ, ವೇದಶಾಲೆ ವೇಧಶಾಲೆಗಳು ಕಂಗೊಳಿಸುತ್ತಿವೆ.

ಇಂತು ಪರಮ ಪವಿತ್ರವೆನಿಸಿದ ಭರತಖಂಡದಲ್ಲಿ ದೇವತೆಗಳು ಅತ್ಯಾನಂದದಿಂದ ಅವತರಿಸುತ್ತಿದ್ದರು. ಈಗ ಪರಶಿವನ ಆಜ್ಞೆಯಿಂದ ಕೊಲ್ಲಿಪಾಕಿ ಕ್ಷೇತ್ರದಲ್ಲಿಯ ಸೋಮನಾಥ ಲಿಂಗದಿಂದ ಶ್ರೀ ರೇನುಕರು ಉದಿಸಿದರು. ಇವರಿಗೆ ಏಕಾಕ್ಷರ, ಏಕವಕ್ತ್ರ, ರೇನುಕ, ರೇವಣಸಿದ್ಧ ಹೀಗೆ ನಾಲ್ಕು ಯುಗಗಳಲ್ಲಿಯೂ ಬೇರೆ ಬೇರೆ ಹೆಸರುಗಳಿವೆ.

ಸರ್ವಸಿದ್ಧಿ ಸಂಗತ ಶ್ರೀಗಿರಿಯ ಮಲ್ಲಿಕಾರ್ಜುನ ಲಿಂಗದಲ್ಲಿ ಶ್ರೀಧೇನುಕರ್ಣನು ಸರ್ವ ಗುರುಲಕ್ಷಣ ಸಮೇತರಾಗಿ ತೋರಿಬಂದರು. ಅವರಿಗೆ ಚತುರಕ್ಷರ, ಚತುರಾನನ, ಧೇನುಕರ್ಣ, ಶ್ರೀ ಪಂಡಿತ ದೇಶಿಕ ಎಂದು ಬೇರೆ ಬೇರೆ ಯುಗಗಳಲ್ಲಿ ಹೆಸರುಗಳುಂಟು.

ಶ್ರೀ ಕಾಶಿಯ ವಿಶ್ವೇಶ್ವರ ಲಿಂಗದಲ್ಲಿ ವಿಶ್ವಕರ್ಣರು ಬರಮಾಡಿದರು. ಇವರಿಗೆ ಪಂಚಾಕ್ಷರ, ಪಂಚಾನನ, ವಿಶ್ವಕರ್ಣ, ವಿಶ್ವಾರಾಧ್ಯರೆಂದು ಯುಗಪ್ರಭೇದ ನಾಮಗಳುಂಟು.

ಹಿಮಗಿರಿ ತಟದಲ್ಲಿರುವ ದ್ರಾಕ್ಷಾರಾಮ ಕ್ಷೇತ್ರದ ರಾಮಲಿಂಗ ಮೂರ್ತಿಯಿಂದ ಘಂಟಾಕರ್ಣರು ಆವಿರ್ಭವಿಸಿದರು. ಇವರಿಗೆ ತ್ರ್ಯಕ್ಷರ, ತ್ರಿವಕ್ತ್ರ, ಘಂಟಾಕರ್ಣ, ಏಕೋರಾಮ ಮುಂತಾಗಿ ಯುಗಭೇದ ನಾಮಗಳುಂಟು.

ಇಲ್ಲಿಗೆ ನಾಲ್ವರು ಆಚಾರ್ಯರ ಉತ್ಪತ್ತಿಯಾಯಿತು. ಐದನೆಯ ಆಚಾರ್ಯನನ್ನು ಅವಲಂಬಿಸಿಯೇ ಕಾವ್ಯವನ್ನು ಕಟ್ಟಬೇಕಾಗಿದೆ. ಅದಕ್ಕೆ ಸ್ವತಂತ್ರವಾದ ಹಿನ್ನೆಲೆಯನ್ನೇ ಕಲ್ಪಿಸುತ್ತಾನೆ ಕವಿ.

ಧಾರಿಣೀ ದೇವತೆಯ ಮುಖಕಮಲದಂತೊಪ್ಪುತ್ತಿದೆ ಭರತಖಂಡ. ಆ ಮನೋಹರದ ಮುಖದಲ್ಲಿ ತಿಲಕದಂತಿದೆ ಮಾಳವದೇಶ. ಆ ದೇಶ ಸಕಲ ಕಲಾ ಭೋಗ ಭಾಗ್ಯ ವೈಭವ ಪರಿಪೂರ್ಣವಾಗಿತ್ತು. ಆ ಸಿರಿಸೊಬಗುಗಳಿಗೆಲ್ಲ ಮೂಲ ಅಲ್ಲಿಯ ಶ್ರೀ ಮಹಾಕಾಲೇಶ್ವರ ಲಿಂಗ.

ಈ ಮಧ್ಯಭಾರತದ ಮಾಳವ ದೇಶದಲ್ಲಿ 'ಮಿಂದವರ ಪಾಪವನ್ನು ಕ್ಷಿಪ್ರದಲ್ಲಿಯೇ ಕ್ಷಯಿಸುವ' ಕ್ಷಿಪ್ರನದಿಯಿದೆ. ಆ ನದೀ ತೀರದ ಮೋಹಕ ಶೃಂಗಾರ

ಸಾಗರ, ಸುರಕ್ಷದ ನಿಧಿಯೆನಿಸಿದ ಉಜ್ಜಯಿನೀ ಪಟ್ಟಣವಿದೆ. ಇದೇ ಮಾಳವ ದೇಶದ ರಾಜಧಾನಿ ಆ ಮಹಾರಾಜಧಾನಿಯ ಮಧ್ಯದಲ್ಲಿ ಮಹಾಕಾಳೇಶ್ವರನ ಮಂದಿರ. ಇದು ತಳದಿಂದ ತುದಿಯವರೆಗೆ ಚಂದ್ರಕಾಂತಶಿಲಾ ನಿರ್ಮಿತವಾಗಿದೆ. ಮುಂದಿರದ ಮಹಾದ್ವಾರ ಇಂದ್ರನ ಐರಾವತದಂತೆ ಎದ್ದು ನಿಂತಂತಿದೆ. ತುದಿಯಲ್ಲಿಯ ಕನ್ನಡಿಯಲ್ಲಿ ಪೂರ್ಣಚಂದ್ರಬಿಂಬ ಪ್ರತಿಫಲಿಸಿದಾಗ ಮಹಾಕಾಳೇಶ್ವರ ಚಂದ್ರಮೌಳಿಯೆಂಬುದರ ಪ್ರತೀತಿಯನ್ನು ಕೊಡುತ್ತಿದೆ ಆ ಮಹಾಕಾಳೇಶ್ವರನ ಸೋಮಸೂರ್ಯ ಬೀದಿಯಲ್ಲಿ ಮಹಾಕಾಳೀದೇವಿಯ ದೇವಾಲಯ. ಅದರಿದಿರಿಗೆ ಪವಿತ್ರ ತೀರ್ಥಗಳು; ರಮ್ಯವಾದ ಕಮಲ ಕಾಸಾರಗಳು, ನೆರೆಯಲ್ಲಿಯೇ ವಟವೃಕ್ಷ. ಭಕ್ತರ ಶಿವಭಕ್ತಿಯೆಂಬ ಬೀಜ ಸತ್ಕರ್ಮ ಜಲಸೇಚನೆಯಿಂದ ಮೊಳೆತು ಶಿವನಾಮ ಸ್ಮರಣೆಯಿಂದ ಪಲ್ಲವಿಸಿ ಶಿವಪೂಜಾ ಪುರಸ್ಕಾರಗಳಿಂದ ಹೂತು ಕಾತು ಹೆಮ್ಮರವಾದಂತೆ ತೋರುತ್ತಿದೆ. ಅದರ ಮಹಿಮೆ ಅಗಾಧವಾದುದು ಭಕ್ತಿ ಬೀಜದಿಂದ ಬೆಳೆದ ಮುಕ್ತಿವೃಕ್ಷವೋ, ಸತ್ಕರ್ಮದೊಡಹುಟ್ಟಿದ ಆತ್ಮಜ್ಞಾನದ್ರುಮವೋ, ಪುಣ್ಯಕರ್ಮ ಸಂಗತವಾದ ಕಲ್ಪವೃಕ್ಷವೋ ಎನ್ನುವಂತಿದೆ.

ಈ ಪರಮಪವಿತ್ರ ವಟವೃಕ್ಷದಡಿಯಲ್ಲಿ ಮಹಾಕಾಳೇಶ್ವರ ಲಿಂಗವಿದೆ. ಅದರಿಂದ ಸಕಲರ ಇಷ್ಟಾರ್ಥ ಸಿದ್ಧಿಯಾಗುತ್ತಿದ್ದುದರಿಂದ ಅದನ್ನು ಸಿದ್ಧೇಶ್ವರ ಲಿಂಗವೆಂದೂ ಕರೆಯುತ್ತಾರೆ ಅದರಿಂದ ಭಕ್ತರೆಲ್ಲ ಅನನ್ಯಶರಣಾಗತಿಯಿಂದ ಮಹಾಕಾಳೇಶ್ವರ ಲಿಂಗವನ್ನು ಪೊರೆಹೊಕ್ಕಿದ್ದರು. ಇದರಿಂದ ರಾಜನಿಂದ ರಂಕನವರೆಗೂ ಎಲ್ಲರಲ್ಲಿಯೂ ಶಿವಭಕ್ತಿ ಶಿವಸಂಪ್ರದಾಯಗಳು ತಾನೇ ತಾನಾಗಿದ್ದವು.

## ಒಂಬತ್ತನೆಯ ಸಂಧಿ

### [illegible]ರ-ವಾಣಿ

ಇಂತಹ ಶೈವಸಾಮ್ರಾಜ್ಯಕ್ಕೆ -- ಶ್ರುತಪಾಲ ಸಮ್ರಾಟ. ಆತನು ಸಿರಿಯಲ್ಲಿ ಶ್ರೀಪತಿ, ವಿದ್ಯೆಯಲ್ಲಿ ವಾಕ್ಪತಿ, ರೂಪದಲ್ಲಿ ರತಿಪತಿ, ಶೌರ್ಯದಲ್ಲಿ ಕಮಲಿನೀಪತಿ, ಶಾಂತಿಯಲ್ಲಿ ನಕ್ಷತ್ರಪತಿ, ಗಾಂಭೀರ್ಯದಲ್ಲಿ ನದೀಪತಿ, ! ಆತನ ಧರ್ಮಪತ್ನಿ ಭಾನುಮತಿ ರಾಣಿ ! ಅವರ ಅನ್ಯೋನ್ಯ ದಾಂಪತ್ಯ ಸಕಲರಿಗೂ ಆದರ್ಶವಾಗಿದ್ದಿತು.

ಶ್ರುತಪಾಲನಲ್ಲಿ ಸಕಲ ಸದ್ಗುಣಗಳಿದ್ದರೂ ಚಂದ್ರನಲ್ಲಿ ಕಳಂಕವಿರುವಂತೆ ಅವನಲ್ಲಿ ಬ್ರಾಹ್ಮಣರ ಬಗೆಗೆ ಮೂಢಭಕ್ತಿಯಿದ್ದಿತು. ಆ ಬ್ರಾಹ್ಮಣರಾದರೋ ಮಹಾಸ್ವಾರ್ಥಿಗಳು, ಕುಹಕರು. ಒಮ್ಮೆ ಆ ಕುಹಕರು ರಾಣಿಯ ರತಿರೂಪವನ್ನು ನೋಡಿದರು. ಅವಳನ್ನು ಭೋಗಿಸುವ ಲಾಲಸೆ ಹುಟ್ಟಿತು ಆ ಕುಹಕರಿಗೆ. ಆಗ ಅವರೆಲ್ಲ ರಾಜನನ್ನು ತಮ್ಮ ಕುಟಿಲ ನೀತಿಯ

ಬಲಿಯಲ್ಲಿ ಎಳೆದರು; ಅಶ್ವಮೇಧ ಯಜ್ಞ ಮಾಡಹಚ್ಚಿದರು. ಆ ಯಜ್ಞದ ಫಲವಾಗಿ ಸ್ವರ್ಗ ಸಿಂಹಾಸನ ಸಿಕ್ಕುವುದೆಂದು ಶಾಸ್ತ್ರಾಧಾರ ತೋರಿಸಿದರು. ಅದರಂತೆ ಶಾಬರ ಭಾಷ್ಯದ ಪ್ರಕಾರ ಈ ಯಜ್ಞಕಾಲಕ್ಕೆ ರಾಜನ ಪತ್ನಿಯನ್ನು ಬ್ರಾಹ್ಮಣರು ಭೋಗಿಸಬಹುದೆಂಬುದನ್ನೂ ಒಪ್ಪಿಸಿದರು.

ಯಜ್ಞದ ಸಿದ್ಧತೆಯ ಬಗ್ಗೆ ರಾಜ್ಯದಲ್ಲೆಲ್ಲ ಡಂಗುರ ಹೊಯಿಸಿದರು. ರಾಣಿಗೆ ಈ ಯಜ್ಞದ ಕಾರಣ ಮೊದಮೊದಲು ತಿಳಿಯಲೇ ಇಲ್ಲ. ಆ ಯಜ್ಞದಲ್ಲಿ ತನ್ನ ಪಾತಿವ್ರತ್ಯವನ್ನು ಬಲಿಕೊಡಬೇಕಾಗುವುದೆಂದು ತಿಳಿಯುತ್ತಲೇ ಆಕೆಗೆ ಸಿಡಿಲು ಬಡಿದಂತಾಯಿತು. ಆದರೆ ಹಾರುವರ ಹಿರಿತನಕ್ಕೆ ಬಹಿರಂಗವಾಗಿ ಏನನ್ನೂ ಮಾಡುವಂತಿರಲಿಲ್ಲ. ಅಂತೂ ಗಂಡನ ಒಪ್ಪಿಗೆಯನ್ನು ಪಡೆದು ವಿದ್ವಾಂಸರ ಸಭೆ ಕೂಡಿಸಿದಳು. ಅವರು ಅವರ ಭಾಷ್ಯವನ್ನು ಖಂಡಿಸಿ ಪಾತಿವ್ರತ್ಯಪಾತದ ಪ್ರಸಂಗವನ್ನು ತಪ್ಪಿಸಿದರು; ಆದರೆ ಕುಹಕಿಗಳಾದ ಹಾರುವರು ಹಟವನ್ನು ಬಿಡಲಿಲ್ಲ. ಆ ಯಜ್ಞಕಾಲಕ್ಕೆ ಯಾವ ದುರಾಚಾರಕ್ಕೂ ಪಾಪಲೇಪವಿಲ್ಲವೆಂದು ವಾದಿಸಿದರು. ಅರಸನಿಗೆ ಸ್ವರ್ಗದ ಹುಚ್ಚು ಹೆಚ್ಚಿತ್ತು. ಅವನೂ ಇವರಂತೆ ಕುಣಿದಾಡತೊಡಗಿದ. ರಾಣಿಗೆ ಮತ್ತೆ ಸಂಕಟಕ್ಕಿಟ್ಟುಕೊಂಡಿತು

ಆಕೆಗೆ ಇನ್ನುಳಿದುದು ಒಂದೇ ಉಪಾಯ; ಅನನ್ಯ ಭಕ್ತಿಯಿಂದ ವಟವೃಕ್ಷ ಸಿದ್ಧೇಶ್ವರನನ್ನು ಶರಣುಹೊಗುವುದು. ಅದಕ್ಕಾಗಿ ಆಕೆ ತನ್ನ ದಾಸದಾಸಿಯರಿಂದ ಪೂಜಾನೈವೇದ್ಯ ಸಾಮಗ್ರಿಗಳನ್ನು ಸಿದ್ಧಮಾಡಿಸಿದಳು. ಶುಭಮುಹೂರ್ತದಲ್ಲಿ ತನ್ನ ಪತಿದೇವನೊಡನೆ ದೇವನ ಪೂಜೆಗೆ ಹೊರಟಳು.

ರಾಣಿಯ ಅಪ್ಪಣೆಯಂತೆ ದೇವಮಂದಿರವೆಲ್ಲ ಸಾರಣೆಕಾರಣೆಗಳಿಂದ ಝಗಝಗಿಸುತ್ತಿತ್ತು; ವಿತಾನ ಲಂಬಣಗಳಿಂದ ಲಕಲಕಿಸುತ್ತಿತ್ತು. ಅದನ್ನು ನೋಡಿದಾಗಲೇ ರಾಣಿಗೆ ದೇವನ ಪ್ರಸನ್ನತೆಯನ್ನು ಕಂಡಂತಾಯಿತು; ತನ್ನ ಪಾತಿವ್ರತ್ಯ ಸಂರಕ್ಷಣಕ್ಕೆ ಬಲವಾದ ಕೋಟೆಯನ್ನು ನೋಡಿದಂತಾಯಿತು. ಆಗ ಅವಳ ಸಹಜ ಮನೋಹರ ಸೌಂದರ್ಯಕ್ಕೆ ಭಕ್ತಿಯ ಸಾತ್ತ್ವಿಕ ಕಳೆ ಏರಿತುದರಿಂದ ಆಕೆ ಪಾರ್ವತೀದೇವಿಯಂತೆ ಪರಿಶೋಭಿಸುತ್ತಿದ್ದಳು.

## ಆರನೆಯ ಸಂಧಿ

ಭಾನುಮತೀದೇವಿ ಈ ಮೊದಲೇ ಭಕ್ತಿ-ಪೂಜಾ ವಿಧಾನಗಳ ಫಲವನ್ನು ವೈದಿಕರಿಂದ ಕೇಳಿಕೊಂಡಿದ್ದಳು. ವಟವೃಕ್ಷಸಿದ್ಧೇಶ್ವರನ ಮಹಿಮೆಯಂತೂ ಅವಳಿಗೆ ಪೂರಾ ಮನವರಿಕೆಯಾಗಿದ್ದಿತು.

ಭಾನುಮತೀದೇವಿ ಅರ್ಘ್ಯಪಾದ್ಯಾದಿಗಳಿಂದ ಶಿವಪೂಜೆಯನ್ನು ಆರಂಭಿಸಿದಳು. ಪ್ರತಿನಿಮಿಷಕ್ಕೂ ಅವಳ ಭಕ್ತಿಯ ಕಡಲಿಗೆ ಭರತಿ ಬರುತ್ತಿತ್ತು.

ಸಂಧ್ಯಾಸಮಯವರೆಗೂ ಪೂಜೆ ಹಾಗೆಯೇ ಸಾಗಿತ್ತು. ಆಕೆಯ ಭಕ್ತಿಯನ್ನು ಮೆಚ್ಚಿ ದೇವತೆಗಳು ಹೂಮಳೆಗರೆದಂತೆ ನೀಲಾಕಾಶದಲ್ಲಿ ಚಿಕ್ಕೆ ಮಲ್ಲಿಗೆಗಳು ಮೂಡಿದುವು. ಶತ್ರುಗಳನ್ನು ಸಂಹರಿಸುವ ತ್ರಿಶೂಲಾಯುಧದಂತೆ ತದಿಗೆಯ ಚಂದ್ರ ಉದಯಿಸಿದ. ರಾಣಿ ದೇವನನ್ನು ಹಾಡಿ ಪಾಡಿ ಅವನಿಗೆ ಮಂಗಲಾರತಿ ಮಾಡಿದಳು; ಕೈಮುಗಿದು ಕಣ್ಣುಮುಚ್ಚಿ ನಿಂತಳು.

'ದೇವಾ ಸಿದ್ಧಲಿಂಗೇಶಾ, ನೀನು ದೀನಜನ ದುಃಖಹರಣ; ಶರಣಜನಾನಂದಕರಣ; ಸದಮಲಾಂತಃಕರಣ; ಸುರಗಣವಿನತಚರಣ! ಹಿಂದೆ ದಕ್ಷಯಜ್ಞದಲ್ಲಿ ದಾಕ್ಷಾಯಿಣಿಗಾದ ಅವಮಾನದ ಸೇಡಿಗಾಗಿ ದಕ್ಷನನ್ನು ಶಿಕ್ಷಿಸಿದೆ. ಈಗ ಅಂತಹದೇ ಯಜ್ಞದಲ್ಲಿ ಈ ನಿನ್ನ ಮುದ್ದುಮಗಳ ಪಾತಿವ್ರತ್ಯ ನಷ್ಟವಾಗುತ್ತಿದೆ. ಮಗಳನ್ನು ಮೋಹಿಸಿದುದಕ್ಕಾಗಿ ಬ್ರಹ್ಮನ ಶಿರವನ್ನು ತರಿದೆ; ಮಾರ್ಕಂಡೇಯನ ಯಮಸಾಶವನ್ನು ತಪ್ಪಿಸಿದೆ; ಬಾಹುಬಲದಿಂದ ಕೊಬ್ಬಿದ ತ್ರಿಪುರನನ್ನು ಕ್ಷಣಾರ್ಧದಲ್ಲಿ ಕಾಣದಂತೆ ಮಾಡಿದೆ; ಅಜೇಯನೆಂದು ಮೆರೆದ ನರಸಿಂಹನನ್ನು ಶರಭನಾಗಿ ಸೀಳಿದೆ. ಹೀಗೆ ಅನ್ಯಾಯಗಳನ್ನು ಆಗಿಂದಾಗಲೇ ಅಡಗಿಸಬಲ್ಲ ನಿನಗೆ ಈ ಬಡತೋರಿನ ಕರುಣದ ಕೂಗು ಕೇಳುವುದಿಲ್ಲವೇ ತಂದೇ! ದೇವಾ, ನಾನು ದೀನರಿಗಿಂತಲೂ ಮಹಾದೀನಳು; ನೀನು ದಾನಿಗಳಲ್ಲಿಯೂ ಮಹಾದಾನಿ! ನಾನು ಭಕ್ತಳು, ನೀನು ಭಕ್ತವತ್ಸಲ! ನಾನು ರೋಗಿ, ನೀನು ವೈದ್ಯ! ನಿನ್ನಿಂದಲೇ ನನ್ನ ಉದ್ಧಾರವಾಗಬೇಕು. ನನ್ನ ಪತಿ ದುರ್ಮತಿಗಳ ದುರ್ಬೋಧವನ್ನು ನಂಬಿ ಯಜ್ಞವನ್ನು ಆರಂಭಿಸಿದ್ದಾನೆ. ಸ್ವರ್ಗಾದಿ ಭೋಗ ಸಂಪ್ರಾಪ್ತಿಯ ಇಚ್ಛೆಗೆ ಆತನಿಗೆ ಸ್ವಂತ ಸತಿಯ ಶೀಲಭ್ರಷ್ಟತೆ ಕಾಣಲೊಲ್ಲದು. ಸಿದ್ಧನಾಗರಾ, ದಯೆದೋರು! ಪ್ರತ್ಯಕ್ಷನಾಗು! ನನ್ನ ಪತಿಗೆ ಸದ್ಬುದ್ಧಿಯನ್ನು ನೀಡು! ಈ ಪಾಮರಳನ್ನು ಪಾವನಮಾಡು!'' ಇದ್ದಕ್ಕಿದ್ದಂತೆಯೇ ಮೈಮರೆತು ಲಿಂಗದ ಚರಣತಲದಲ್ಲಿ ಬಿದ್ದುಬಿಟ್ಟಳು!

ಒಮ್ಮಿಂದೊಮ್ಮೆಲೆ ಗುಡಿಯಲ್ಲಿ ಗುಡುಗುಡಿಸಿದಿಲುಗಳ ಸದ್ದಾಯಿತು. ಲಿಂಗದಿಂದ ಮಿಂಚು ಹೊಳೆಯಿತು. ಎಲ್ಲರೂ 'ಇದೇನಾಶ್ಚರ್ಯ' ಎನುವಷ್ಟರಲ್ಲಿ ಅಶರೀರವಾಣಿ ಕೇಳತೊಡಗಿತು "ಮಗಳೇ, ಬೆದರಬೇಡ. ಇದೇ ಪಂಚಮಿಯಂದು ದಿನ. ಈ ಶಿವಲಿಂಗದಿಂದ ದಾರು ಶಿವಗಣಗಳು ಅವತರಿಸುವರು; ಈ ದುಷ್ಟರ ದರ್ಪವನ್ನೂ ಯಜ್ಞವನ್ನೂ ಧ್ವಂಸಮಾಡುವರು. ನೀನು ಮಾನವತಿಯಾಗಿ ಬಾಳುವೆ. ನಿನ್ನ ಗಂಡ ಪರಮ ಶಿವಭಕ್ತನಾಗುವ. ಇನ್ನು ನಿನ್ನ ದುಃಖದ ದಿನಗಳು ದೂರವಾದುವು. ಶಾಂತಚಿತ್ತದಿಂದಿರು.''

ರಾಣಿಗೆ ಪರಮಾನಂದವಾಯಿತು. ರಾಜನಿಗೆ ಇನ್ನಿಲ್ಲದ ಆಶ್ಚರ್ಯವಾಯಿತು. ಪರಿವಾರವೆಲ್ಲ ಮೂಗುವಟ್ಟಿತು. ಎಲ್ಲರೂ ಮತ್ತೊಮ್ಮೆ ಮಂಗ

ಲಾರತಿ ಮಾಡಿದರು; ಶ್ರೀ ಸಿದ್ಧೇಶ್ವರ ಲಿಂಗದ ಮಹಿಮೆಯನ್ನು ಹೊಗಳುತ್ತ ಸ್ವಸ್ಥಾನಗಳಿಗೆ ಮರಳಿದರು.

## ಏಳನೆಯ ಸಂಧಿ

### ಮರುಳಾರಾಧ್ಯರು ಮೈದೋರಿದುದು.

ಶ್ರೌತಪಾಲನಿಗೆ ಚೌತಿಯ ದಿನವೊಂದನ್ನು ಕಳೆಯುವುದು ಯುಗದಂತೆ ತೋರಿತು. ಯಾವಾಗ ಪವಿತ್ರ ಗುರುದೇವನ ದರ್ಶನವಾದೀತೋ ಎಂದು ಆತನ ಹೃದಯ ಹಂಬಲಿಸುತ್ತಿತ್ತು. ಅಂತೂ ಕೊನೆಗೊಮ್ಮೆ ರಾಜನ ಭವಿಷ್ಯತ್ತಿನ ಭಾಗ್ಯದ ಬೆಳ್ಳಿಯ ಚಿಕ್ಕೆ ಮೂಡಿತು. ಪ್ರದೋಷಕಾಲದ ಮಂಗಲ ವಾದ್ಯಗಳು ಮೊಳಗತೊಡಗಿದುವು. ಜನರೆಲ್ಲರೂ ದೇವಾಧಿದೇವನೆದುರು ಕೈಮುಗಿದುಕೊಂಡು ನಿಂತರು. ಶ್ರೋತ್ರಿಗಳು ಉಚ್ಚ ಸ್ವರದಿಂದ ಮಂತ್ರಗಳನ್ನು ಪಠಿಸುತ್ತಿದ್ದರು. ಪೂಜೆ ಮುಗಿಯುತ್ತ ಬಂದಂತೆ ಗರ್ಭ ಗುಡಿಯಿಂದ ದಿವ್ಯ ಪ್ರಭೆ ಹೊರಹೊಮ್ಮಿತು. ಲಿಂಗ ಮುಖದಿಂದ ಕರ್ಣಮಧುರ ನಾದ ಚಿಮ್ಮಿತು. ಮೊದಮೊದಲು ದೇದೀಪ್ಯಮಾನವಾದ ತೇಜೋರಾಶಿ; ಅದರಲ್ಲಿ ದಿವ್ಯವಾದ ತೇಜಸ್ವಿ ಪುರುಷಾಕಾರದ ಉತ್ಪತ್ತಿಯಾಯಿತು! ಅದೆಂತಹ ಮಂಗಲಮಯ ಮನೋಹರಮೂರ್ತಿ; ಮಂದಹಾಸದ ಮುಖ, ಕಮನೀಯವಾದ ಕೆಂಜೆಡೆ, ಮೃದುಮಧುರ ವಾಣಿ, ಕಂಗೊಳಿಸುವ ಕಡೆಗಣ್ಣು, ಆಜಾನುಬಾಹು, ಹಸ್ತದಲ್ಲಿ ಮಣಿಕಮಂಡಲು, ಕಾಲಲ್ಲಿ ಸ್ವರ್ಣಮಯ ಪಾದುಕೆಗಳು, ಆ ಕೆಂಜೆಡೆಯ ಭವ್ಯ ಲಲಾಟದಲ್ಲಿ ಭಸ್ಮದ ತ್ರಿವಳಿ, ಅಲ್ಲಿಯೇ ಇಷ್ಟಲಿಂಗ, ಮೈಮೇಲೆ ಕಲ್ಯಾಣಮಯ ಕಂಥೆ, ರುದ್ರಾಕ್ಷಿಯ ಕರ್ಣಕುಂಡಲಿಗಳು, ಎದೆಯ ಮೇಲೆ ಪವಿತ್ರವಾದ ಶಿವಸೂತ್ರ! ಇಂತಹ ದಿವ್ಯಮೂರ್ತಿ ಲಿಂಗದಿಂದುದ್ಭವಿಸಿ ಲಿಂಗದಿದಿರಿಗೆ ನಿಂತಿತು. ಭಕ್ತಿಭಾವದಿಂದ ಸರ್ವರ ತಲೆಗಳೂ ತಂತಾವೇ ಬಾಗಿದವು. ಆಗ ಆ ಪವಿತ್ರಾತ್ಮ ಅಭಯ ಹಸ್ತವನ್ನೆತ್ತಿ – 'ಭಕ್ತರೇ ಭಯ ಪಡಬೇಡಿರಿ. ನಾನು ದಾರುಕನೆಂಬ ಗಣವರ. ಭಾನುಮತಿಯ ಭಕ್ತಿಗೆ ಮೆಚ್ಚಿ ಶಿವನ ಆಜ್ಞೆಯಂತೆ ಭೂಮಿಗೆ ಬಂದಿರುವೆ. ಈ ಕಲಿಯುಗದಲ್ಲಿ ನನಗೆ ಮರುಳಾರಾಧ್ಯ ಎಂದು ಹೆಸರು. ಈಗ ಭೂಲೋಕದಲ್ಲಿ ಬೆಳೆಯುತ್ತಿರುವ ಅವೈದಿಕ ಯಜ್ಞಯಾಗಾದಿ ಅನಾಚಾರಗಳನ್ನು ನಿಲ್ಲಿಸುವುದು, ಶೈವ ಧರ್ಮವನ್ನು ಬೆಳೆಸುವುದು, ಶಿಷ್ಯರನ್ನು ಸಂರಕ್ಷಿಸುವುದು, ದುರಾತ್ಮರನ್ನು ದಂಡಿಸುವುದು ನನ್ನ ಉದ್ದೇಶ. ನಿಮ್ಮ ಬಯಕೆಗಳನ್ನು ಬೆದರಿಕೆ ಇಲ್ಲದೆ ಬೇಡಿಕೊಳ್ಳಿರಿ; ಆದರೆ ಅದರಿಂದ ಹೆರವರಿಗೆ ಅಹಿತವಾಗಬಾರದು. ನೀವೆಲ್ಲರೂ ಸದ್ವೈವಶಿವಭಕ್ತರಾಗಿ ಇಹಪರಗಳನ್ನು ಸಾಧಿಸತಕ್ಕದ್ದು" ಎಂದು ಅಮೃತ ವಾಣಿಯನ್ನುಣಿಸಿದರು.

ಶ್ವೇತಪರಾಜನ ಹಿಗ್ಗಿಗಂತೂ ಸೀಮೆಯೇ ಉಳಿಯಲಿಲ್ಲ. ಆತನು ತನ್ನ ಅರಮನೆಗೆ ದಯಮಾಡಿಸಬೇಕೆಂದು ಗುರುವನ್ನು ಬಿನ್ನವಿಸಿಕೊಂಡನು. ವಾದ್ಯಗಳು ದಿಕ್ಕುಟ ಬಿರಿಯುವಂತೆ ಭೋರ್ಗರೆಯುತ್ತಿದ್ದುವು. ಗುರುಗಳು ಮಂಗಲಮಯ ಆಂದೋಲಿಕೆಯನ್ನೇರಿದರು. ಮೆರವಣಿಗೆ ಸೋಮಪುರದ ಬೀದಿಯಲ್ಲಿ ಹೊರಟಿತು. ಅರಮನೆಯ ಸಿಂಹಾಸನದ ಎದುರಾಸನದಲ್ಲಿ ಗುರುಗಳು ಮಂಡಿಸಿದರು. ರಾಜನೂ ರಾಣಿಯೂ ಜಗದ್ಗುರು ಮರುಳಾರಾಧ್ಯ ಗುರುವನ್ನು ಷೋಡಶೋಪಚಾರದಿಂದ ಪೂಜಿಸಿದರು; ಮತ್ತು ಕೈಮುಗಿದುಕೊಂಡು ನಿಂತು-"ದೇವಾ, ನಾವು ನೀತಿಹೀನರು, ಬುದ್ಧಿಹೀನರು, ಶಕ್ತಿಹೀನರು; ನೀವು ನೀತಿನಿಧಾನರು ಸರ್ವಜ್ಞರು, ಸರ್ವಶಕ್ತಿವಂತರು. ಈಗ ಅವೈದಿಕ ಪುಂಡರು ಶಾಸ್ತ್ರಗಳಿಗೆ ಅನರ್ಥಮಾಡಿ ತಿಳಿಯದವರನ್ನು ಅಡ್ಡಹಾದಿಗೆಳೆಯುತ್ತಿದ್ದಾರೆ. ನೀವು ನಿಜವಾದ ವೈದಿಕ ಧರ್ಮದ ಮಾರ್ಗವನ್ನು ಅರುಹಬೇಕು; ಈ ಬಡಭಕ್ತರನ್ನು ಬದುಕಿಸಬೇಕು" ಎಂದು ಬೇಡಿಕೊಂಡನು.

ಗುರುಗಳು ಅತ್ಯಾನಂದದಿಂದ ಉಪದೇಶಮಾಡಿದರು: ಈ ಜಗತ್ತಿನಲ್ಲಿ ಬೇಕಾದಷ್ಟು ಧರ್ಮಗಳಿರಬಹುದು ಆದರೆ ಮುಕ್ತಿಗೆ ಕಾರಣವಾದುದು ಧರ್ಮವಲ್ಲ. ಮುಕ್ತಿಗೆ ಮೂಲವಾದುದು ದಯೆ. ಹಿಂಸಾಮೂಲಕ ಯಜ್ಞಯಾಗಾದಿಗಳು ಕೇವಲ ಅಪ್ರಯೋಜಕ, ಅಧರ್ಮ! ವ್ಯಭಿಚಾರ, ಮಾಂಸಭಕ್ಷಣ ಸುರಾಪಾನಗಳು ಕೇವಲ ನರಕದ ಹಾದಿಗಳು ಈ ಅವಿವೇಕಗಳನ್ನೆಲ್ಲ ಅಡಗಿಸಿ ಬಿಡಿರಿ; ಪವಿತ್ರವಾದ ವೀರಶೈವ ಧರ್ಮದಂತೆ ನಡೆಯಿರಿ ಶ್ರೀ ಶಿವನಲ್ಲಿ ಸರ್ವಾರ್ಪಣ ಬುದ್ಧಿಯಿರಲಿ. ಅದರಿಂದಲೇ ನಿಮಗೆ ಇಹ ಪರಲೋಕಗಳು ಸಾಧಿಸುವವು. ಕರ್ಮ-ಭಕ್ತಿ-ಜ್ಞಾನ ಈ ಮೂರು ಮಾರ್ಗದಿಂದಲೂ ಧರ್ಮವನ್ನು ಆಚರಿಸಬಹುದು. ಬರಿಯ ಬುದ್ಧಿ ಬಲಿತ ವಿಮರ್ಶೆ ಉಪಯೋಗವಿಲ್ಲ ಯಮನಿಯಮಾದಿಗಳನ್ನು ಅನುಷ್ಠಾನ ಮಾಡುತ್ತ ನಿಷ್ಕಾಮ ಕರ್ಮವನ್ನು ಮಾಡುತ್ತಿರಬೇಕು. ಸರ್ವಂ ಶಿವಮಯಂ ಜಗತ್ ಎಂಬುದನ್ನು ಮರೆಯಬೇಡಿರಿ.

ಗುರುವಿನ ಅಮೃತವಾಣಿಯಿಂದ ಅರಸು ಅರಸಿಯರೂ ಸಕಲ ಪರಿವಾರವೂ ಪುನೀತವಾಯಿತು. ಮುಂದೆ ಅವರೆಲ್ಲರ ಇಚ್ಛೆಯಂತೆ ಮರುಳಾರಾಧ್ಯರು ಅವರಿಗೆ ಶಿವದೀಕ್ಷೆಕೊಟ್ಟರು; ಮತ್ತು ಅವರಿಗೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ವಿಚಾರವನ್ನು ವಿವರವಾಗಿ ತಿಳಿಸಿದರು; ಕೊನೆಗೆ ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಶಿವಜೀವೈಕ್ಯ ತತ್ತ್ವವನ್ನೂ ಮನಗಾಣಿಸಿದರು.

ಸಕಲಪರಿವಾರವೂ ಪುನರ್ಜನ್ಮವನ್ನು ಹೊಂದಿದಂತಾಯಿತು. ಯಜ್ಞವಿಚಾರ ಅಲ್ಲಿಗೇ ನಿಂತು ಹೋಯಿತು. ರಾಣಿಗೆ ಹಿಡಿಸಲಾರದಷ್ಟು ಹಿಗ್ಗಾಯಿತು!

## ಎಂಟನೆಯ ಸಂಧಿ

### ಅಷ್ಟಾವರಣ—ಪಂಚಾಚಾರಗಳು

ಶ್ರೀ ಮರುಳಾರಾಧ್ಯ ಸದ್ಗುರುಗಳು ಶ್ರೌತಪಸಿಗೆ ಅಷ್ಟಾವರಣದ ದೀಕ್ಷೆಯನ್ನು ಕೊಟ್ಟರಷ್ಟೇ. ಈಗ ಶಿವಮತದ ಸಾರವನ್ನು ತಿಳಿಯಲು ಆತನಲ್ಲಿ ಹಿರಿಯ ಹಂಬಲವುಂಟಾಗಿದ್ದಿತು. ರಾಜ ಅಷ್ಟಾವರಣದ ಅಂತರಂಗವನ್ನು ವಿವರಿಸಲು ಕೇಳಿದ. ಶ್ರೀ ಮರುಳಾರಾಧ್ಯ ಗುರುಗಳು ಆನಂದದಿಂದ ಅಮರವಾಣಿಯ ಮಳೆಗರೆಯತೊಡಗಿದರು.

ರಾಜನೇ, ವೀರಶೈವ ಧರ್ಮದ ಆಳವನ್ನು ಎಷ್ಟು ಅಳೆದರೂ ಅಂತ ಸಿಕ್ಕುವಂತಿಲ್ಲ. ಅಂತಹ ಧರ್ಮ ಅವಿವೇಕ ಆಚರಣೆಗಳ ದರಿಯಲ್ಲಿ ಧುಮ್ಮಿಕ್ಕುತಿದೆ ಅದನ್ನು ಉದ್ಧರಿಸುವ ಕೆಲಸವನ್ನು ನೀನು ಮಾಡಬೇಕು. ಇದಕ್ಕಾಗಿ ಅಷ್ಟಾವರಣ ಪಂಚಾಚಾರ ವಿಚಾರಗಳನ್ನು ಸರಿಯಾಗಿ ತಿಳಿದುಕೋ.

ಧರ್ಮದಲ್ಲಿ ಪಶುಧರ್ಮ ಪತಿಧರ್ಮ ಎಂದು ಇಬ್ಬಗೆಯಿದೆ. ಪಶುಧರ್ಮವನ್ನು ಪಿಪೀಲಿಕಾ ಮಾರ್ಗದಿಂದ ಸಾಧಿಸಬೇಕಾಗುವುದು; ಪತಿಧರ್ಮವನ್ನು ಸತ್ಕರ್ಮಾಚರಣಗಳಿಂದ ಕೈಗೂಡಿಸಿಕೊಳ್ಳಬೇಕಾಗವುದು. ಇವೆರಡು ಮಾರ್ಗಗಳಲ್ಲಿ ಪತಿಧರ್ಮ ಶ್ರೇಷ್ಠವಾದುದೂ ಶೀಘ್ರಫಲಕಾರಿಯಾದುದೂ ಆಗಿದೆ. ನಿನಗೆ ಅದನ್ನೇ ಸಾರರೂಪವಾಗಿ ತಿಳಿಸುವೆ.

ಶಿಷ್ಟೋಕ್ತವಾ, ಯಜ್ಞಯಾಗಾದಿಗಳು ಕಾಮ್ಯಕರ್ಮಗಳು. ಅತ್ರವ ಅವುಗಳಿಂದ ಸಿಕ್ಕುವ ಫಲ ನಿಷ್ಫಲ. ಆಗಮೋಕ್ತ ವಿಚಾರಪೂರ್ಣವಾದ ಶಿವಯೋಗಬಲದಿಂದ ಶಾಶ್ವತ ಫಲ ಸಿಕ್ಕುವುದು. ಅದರಿಂದಲೇ ಪತಿಧರ್ಮವೇ ಶ್ರೇಷ್ಠವಾಗಿದೆ. ಈ ಪತಿಧರ್ಮದಲ್ಲಿ ನಿಷ್ಕಾಮ ಕರ್ಮವೇ ಪ್ರಧಾನ.

ಗುರು-ಲಿಂಗ-ಜಂಗಮ-ತೀರ್ಥ--ಪ್ರಸಾದ-ಭಸ್ಮ--ರುದ್ರಾಕ್ಷ--ಮಂತ್ರ ಇವೆ ಅಷ್ಟಾವರಣಗಳು. ಇವರಲ್ಲಿ ಗುರುವಿಗೆ ಎಲ್ಲಕ್ಕೂ ಹೆಚ್ಚು ಮಹತ್ವ. ಆತನು ವೀರಮಾಹೇಶ್ವರನೂ ಸದ್ವಂಶಜಾತನೂ ಸ್ಥಿರಪಟ್ಟಾಭಿಷಿಕ್ತನೂ ಆಗಿರಬೇಕು. ಇವರಲ್ಲಿ ಕೂಡ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ಮೂರು ಬಗೆಯಿದೆ. ಆದರೆ ಒಬ್ಬನೇ ಗುರುವೂ ಈ ಎಲ್ಲ ಕಾರ್ಯಗಳನ್ನು ನಡೆಸಬಹುದು.

ಅಷ್ಟಾವರಣಗಳಲ್ಲಿ ಲಿಂಗದ ಸ್ಥಾನ ದ್ವಿತೀಯವಾದುದು. ಇದು ವೀರಶೈವ ಧರ್ಮದ ಪರಮಪವಿತ್ರ ಚಿಹ್ನೆ. ಈ ಲಿಂಗವೇ ಶಿವರೂಪ. ಅದನ್ನು ಆತ್ಮಲಿಂಗರೂಪವಾಗಿ ಸರ್ವನ ಹೃದಯಸ್ಥಾನದಲ್ಲಿ ಧರಿಸತಕ್ಕದ್ದು.

ಇನ್ನು ಮೂರನೆಯದಾದ ಜಂಗಮ. ಪರಶಿವನು ಲೋಕೋದ್ಧಾರಾರ್ಥವಾಗಿ ಪರಮಮಾಹೇಶ್ವರ ವಂಶದಲ್ಲಿ ಜನಿಸಿ ಚರಪಟ್ಟಾಧಿಕಾರಿಯೆನಿಸಿ

ಜಂಗಮರೂಪದಿಂದ ಮೆರೆಯುವನು. ಜಂಗಮ ಸೇವೆ ಮಾಡಿದರೆ ಲಿಂಗಪೂಜೆ-ಶಿವಪೂಜೆ ಮಾಡಿದ ಫಲ ಬರುವುದು.

ಹೀಗೆ ಪರಶಿವ ಸ್ವರೂಪಗಳಾದ ಗುರು-ಲಿಂಗ-ಜಂಗಮರ ಸೇವೆ ಮಾಡಿ ಅವರ ಪಾದತೀರ್ಥವನ್ನು ತಕ್ಕೊಳ್ಳುವುದು ನಾಲ್ಕನೆಯದು. ಆ ಮೇಲೆ ಪ್ರಸಾದ ಸ್ಥಾನ· ಇಷ್ಟಲಿಂಗಕ್ಕರ್ಪಿತವಲ್ಲದ ಪ್ರಸಾದವನ್ನು ಮುಟ್ಟಲೇ ಕೂಡದು. ತರುವಾಯ ಭಸ್ಮದ ಮಹತ್ತ್ವ. ವಿರಶೈವನಿಗೆ ಇದು ಪರಮ ಪವಿತ್ರವಾದ ಲಾಂಛನ. ಪೂಜಾ ಸಮಯದಲ್ಲಂತೂ ಇದನ್ನ ಅವಶ್ಯವಾಗಿ ಧರಿಸಲೇಬೇಕು. ಭಸ್ಮದಂತೆ ರುದ್ರಾಕ್ಷಿಯೂ ಪವಿತ್ರವಾದುದು. ಹಿಂದಕ್ಕೆ ತ್ರಿಪುರಸಂಹಾರ ಕಾಲಕ್ಕೆ ಹರನು ಹರಿಶಿರವನ್ನು ಒಕ್ಕಣ್ಣಿನಿಂದ, ಗುರಿಯಿಟ್ಟು ನೋಡುತ್ತಿರುವಾಗ ಉದಿರಿದ ಜಲ ಬಿಂದುವೇ ರುದ್ರಾಕ್ಷಿಯಾಯಿತಂತೆ. ಕೊನೆಯದಾಗಿ ಮಂತ್ರದ ಮಹತ್ತ್ವವನ್ನು ಎಷ್ಟು ಹೊಗಳಿದರೂ ಸ್ವಲ್ಪವೇ. ಶಿವಪಂಚಾಕ್ಷರೀ ಮಂತ್ರವೊಂದೇ ಭವರೋಗ ನಿವಾರಕ ತಂತ್ರ. ಅದರ ಮಹಿಮೆಯನ್ನು ಪುರಾಣಗಳೆಲ್ಲ ಸಾರಿ ಸಾರಿ ಹೇಳುತ್ತಿವೆ.

ಅಷ್ಟಾವರಣಗಳಂತೆ ಪಂಚಾಚಾರವೂ ಮಹತ್ತ್ವವುಳ್ಳುದೇ **ಲಿಂಗಾಚಾರ ಸದಾಚಾರ, ಶಿವಾಚಾರ, ಭೃತ್ಯಾಚಾರ,** ಗಣಾಚಾರ, ಇವೇ **ಪಂಚಾಚಾರಗಳು.**

**ಲಿಂಗಾಚಾರ** – ಗುರುಕೊಟ್ಟಲಿಂಗವೇ ಪರದೈವವೆಂದು ಅನುಸಂಧಾನ ಮಾಡುವುದು ಲಿಂಗಾಚಾರವೆನಿಸುವುದು.

**ಸದಾಚಾರ**—ಪರಶಿವನಲ್ಲಿ ಭಕ್ತಿ ಭಾವದಿಂದ ಸದ್ದ್ರವ್ಯಗಳನ್ನು ಸಂಪಾದಿಸುವುದೂ ಶಿವಮತದುನ್ನತಿಗೆ ಮನಸಾ ಪ್ರಯತ್ನಿಸುವುದೂ ಶಿವಮತ ಸದಾಚಾರ.

**ಶಿವಾಚಾರ**—ಶಿವನೇ ಸರ್ವೋತ್ತಮನೆಂದು ಸದೈವ ಆತನ ಭಜನೆಯಲ್ಲಿರುವುದು ಅನನ್ಯ ಶರಣಭಾವದಿಂದ ಶಿವನನ್ನು ಸೇವಿಸುವುದು ಶಿವಾಚಾರ

**ಭೃತ್ಯಾಚಾರ**—ಶಂಕರನ ಕಿಂಕರತ್ವವನ್ನು ವಹಿಸಿ ದಾಸೋಹಂ ಭಾವದಿಂದ ಶಿವನನ್ನೂ ಶಿವಶರಣರನ್ನೂ ಸೇವಿಸುತ್ತಿರುವುದೇ ಭೃತ್ಯಾಚಾರ.

**ಗಣಾಚಾರ**—ಹೊಗಳು ತೆಗಳುಗಳಿಗೆ ಹಿಗ್ಗದೆ ಕುಗ್ಗದೆ, ಶಿವನ ಮತ್ತು ಶಿವಭಕ್ತರ ನಿಂದೆಯನ್ನು ಸೈರಿಸದೆ, ಶಿವನನ್ನು ಧ್ಯಾನಿಸುತ್ತ ಪರಹಿಂಸೆ ಮಾಡದೆ ತಂದೆ ತಾಯ್ ಗುರು ಹಿರಿಯರನ್ನು ಸನ್ಮಾನಿಸುತ್ತಿರುವುದೇ ಗಣಾಚಾರ.

ರಾಜನೇ, ಈ ರೀತಿಯಾಗಿ ಪ್ರತಿಯೊಬ್ಬ ವಿರಶೈವನ ಗುರು ಮುಖದಿಂದ ಈ ವಿಚಾರಗಳನ್ನು ತಿಳಿದುಕೊಳ್ಳಬೇಕು, ಮತ್ತು ಅದರಂತೆ ಆಚರಣೆ

ಯನ್ನಿಡಬೇಕು. ಈ ತತ್ತ್ವದಂತೆ ನಡೆದರೆ ಶಿವಸಾಯುಜ್ಯ ಸ್ವತಃ ಸಿದ್ಧ ! ಅದರಿದಿರಿಗೆ ಸ್ವರ್ಗಾದಿಭೋಗಗಳು ಎಷ್ಟರವು ? ರಾಜಾ, ಈ ಪತಿಧರ್ಮವನ್ನು ಮರೆಯದೆ ಆಚರಿಸು; ಯಾವಜ್ಜೀವ ಸುಖದಿಂದ ಬಾಳು !

ಶ್ರೀಮರುಳಾರಾಧ್ಯಗುರುಗಳು ಮತ್ತೊಮ್ಮೆ ಶ್ರೋತೃಗಳನ್ನೆಲ್ಲ ಹರಸಿದರು; ಆ ಮೇಲೆ ದಾರುಕವನದಲ್ಲಿರುವ ಮುನಿಗಳ ಉದ್ಧಾರಕ್ಕಾಗಿ ಗಗನ ಮಾರ್ಗದಿಂದ ಗಮಿಸಿದರು.

## ಒಂಬತ್ತನೆಯ ಸಂಧಿ

## (ದಾರುಕ ವನದಲ್ಲಿ ಮುನಿಗಳಿಗೆ ಶಿವಸಿದ್ಧಾಂತವನ್ನುಪದೇಶ ಮಾಡುವಿಕೆ)

ಹಿಮಾಲಯದಲ್ಲಿ ಪವಿತ್ರವಾದ ಗಂಗೆ--ಯಮುನೆಗಳ ಮಧ್ಯದಲ್ಲಿ ವಿಶಾಲವಾದ ದಾರುಕವನವು ಸಿದ್ಧಾಶ್ರಮಗಳಿಂದ ಮೆರೆಯುತ್ತಿದೆ. ತಾಪಸ ಕುಮಾರರು ತಮ್ಮ ವ್ರತ ನಿಯಮಗಳಿಗಾಗಿ ಹಣ್ಣು-ಹೂವು-ಕಟ್ಟಿಗೆ ಮುಂತಾದವುಗಳನ್ನು ಸಂಪಾದಿಸುತ್ತ ಅಲ್ಲಿ ಸಂಚರಿಸುತ್ತಿದ್ದಾರೆ. ಋಷಿಪತ್ನಿಯರು ಪತಿಸೇವಾ ಸಕ್ತರಾಗಿ ಬರುವ ಅತಿಥಿಗಳನ್ನು ಆಶ್ರಮೋಚಿತವಾಗಿ ಉಪಚರಿಸುವುದರಲ್ಲಿ ತೊಡಗಿರುವರು. ಮತ್ತು ತಮ್ಮ ಹಸು ಮಕ್ಕಳನ್ನು ಕಾಪಾಡುವುದರಲ್ಲಿ ಅವರಿಗೆ ಶಿಕ್ಷಣ ಕೊಡುವುದರಲ್ಲಿ ವಿಶೇಷ ಶ್ರದ್ಧೆವಹಿಸಿರುವರು

ಆ ದಾರುಕ ವನದಲ್ಲಿ ತ್ಯಾಗಿಗಳೂ, ವೇದೋಕ್ತ ಕರ್ಮದಲ್ಲಿ ಅನುರಾಗಿಗಳೂ, ವಿಷಯಸುಖಭೋಗಿಗಳೂ, ವರ್ಣಾಶ್ರಮ ಸಮ್ಮತರಾದ ನಿಯೋಗಿಗಳೂ, ಸತ್ಕರ್ಮದಲ್ಲಿ ಭಾಗಿಗಳೂ, ಶಿವಯೋಗಿಗಳೂ, ಧನಕನಕಾದಿ ವಿಷಯ ವಿರಾಗಿಗಳೂ ಆದವರನೇಕರು ವಾಸವಾಗಿದ್ದಾರೆ. ಕೆಲವರು ಶಿವಪೂಜಾ ನಿಯಮದಲ್ಲಿಯೂ, ಕೆಲವರು ಶಿವಮಂತ್ರ ಜಪಾನುಸಂಧಾನದಲ್ಲಿಯೂ, ಕೆಲವರು ಶಿವಮಂದಿರಗಳನ್ನು ಜೀರ್ಣೋದ್ಧಾರ ಮಾಡುವ ಕಾರ್ಯದಲ್ಲಿಯೂ, ಕೆಲವರು ವೇದಾಗಮ ವಿಚಾರದಲ್ಲಿಯೂ, ಕೆಲವರು ಷಡ್‌ದರ್ಶನ ಶಾಸ್ತ್ರವಿನೋದದಲ್ಲಿಯೂ, ಕೆಲವರು ಅತಿಥಿಗಳಿಗೆ ಅನ್ನ ಧಾನ ಮಾಡುವುದರಲ್ಲಿಯೂ, ಕೆಲವರು ಧರ್ಮಾಚಾರಗಳನ್ನು ಆಚರಿಸುವುದರಲ್ಲಿಯೂ, ಕೆಲವರು ಕಾವ್ಯ ವಿಲಾಸ ಶೃಂಗಾರಾನುಭವದಲ್ಲಿಯೂ, ಕೆಲವರು ಪುರಾಣಗಳನ್ನು ಹೇಳುವುದು ಕೇಳುವುದರಲ್ಲಿಯೂ, ಕೆಲವರು ಸಂಗೀತ ನೃತ್ಯ ಮೊದಲಾದ ಕಲೆಗಳಲ್ಲಿಯೂ ತಲ್ಲೀನರಾಗಿದ್ದಾರೆ.

ಮತ್ತಲ್ಲಿ ಕೆಲವರು ಉಪವಾಸಿಗಳಾಗಿಯೂ, ಕೆಲವರು ಅರ್ಧೋಪವಾಸಿಗಳಾಗಿಯೂ, ಕೆಲವರು ತಮ್ಮ ಬಾಳಿನ ಅರ್ಧಾಯುಷ್ಯದಲ್ಲಿ ಫಲಾಹಾರಿಗಳಾಗಿಯೂ, ಅರ್ಧಾಯುಷ್ಯ ಅನ್ನಾಹಾರಿಗಳಾಗಿಯೂ, ಕೆಲವರು ಕ್ಷೀರಾ

ಹಾರ, ಕೆಲವರು ಸಾತ್ತ್ವಿಕಾಹಾರ ಕೆಲವರು ಪರ್ಣಾಹಾರ, ಕೆಲವರು ವಾಯ್ವಾಹಾರಿಗಳುಳ್ಳವರಾಗಿಯೂ ಬಾಳುತ್ತಿದ್ದಾರೆ. ಇನ್ನು ಕೆಲವರು ನಡುನೀರಿನಲ್ಲಿಯೂ, ಕೆಲವರು ಪಂಚಾಗ್ನಿ ಮಧ್ಯದಲ್ಲಿಯೂ, ಕೆಲವರು ಹೆಬ್ಬೆರಳಿನ ಮೇಲೂ, ಕೆಲವರು ಒಂದೇ ಕಾಲ ಮೇಲೂ, ಕೆಲವರು ತಲೆಯ ಮೇಲೂ ಕೆಲವರು ಗಿಡಗಳ ಟೊಂಗೆಗಳ ಮೇಲೂ ಹಿಂತು ತಪಸ್ಸು ಮಾಡುತ್ತಿದ್ದಾರೆ.

ಈ ದಾರುಕ ವನದಲ್ಲಿ ಚಿಗರೆಗಳು ಹುಲಿಯೊಡನೆಯೂ, ಆನೆ ಮರಿಗಳು ಸಿಂಹನೊಡನೆಯೂ, ಹಾವುಗಳು ಗರುಡನೊಡನೆಯೂ ನವಿಲುಗಳೊಡನೆಯೂ ಶತ್ರುತ್ವವಿಲ್ಲದೆ ನಿರ್ಭಯವಾಗಿ ಸಡಗರದಿಂದ ಆಡುತ್ತಿವೆ.

ಇಂತಹ ಪವಿತ್ರವಾದ ದಾರುಕ ವನದಲ್ಲಿ ಹಿಂದೊಮ್ಮೆ ಪರಶಿವನು ದಕ್ಷಿಣಾಮೂರ್ತಿ ಲೀಲೆಯನ್ನು ಮಾಡಿ ತಾಪಸರಿಗೆ ವೇದಾಂತವನ್ನು ಬೋಧಿಸಿದ ಜ್ಞಾಪಕಾರ್ಥವಾಗಿ ಅಲ್ಲಿದ್ದ ದಾರುಕಾಚಾರ್ಯನು ದಕ್ಷಿಣಾಮೂರ್ತಿ ಎಂಬ ಶಿವಲಿಂಗವನ್ನು ಸ್ಥಾಪಿಸಿದನು. ಆ ದಿವ್ಯ ಶಿವಲಿಂಗವನ್ನು ಅಲ್ಲಿರುವ ಋಷೀಶ್ವರರೆಲ್ಲರೂ ಭಕ್ತಿಯಿಂದ ಸೇವಿಸುತ್ತಿರುವರು. ಹೀಗಿರಲೊಂದು ದಿನ ಶ್ರಾವಣಮಾಸದ ಸೋಮವಾರ ಪ್ರದೋಷ ಕಾಲದಲ್ಲಿ ಎಲ್ಲ ಋಷಿಗಳೂ ಒಂದೆಡೆ ನೇರಿ ದಕ್ಷಿಣಾಮೂರ್ತಿಯ ಪೂಜೆಗೆ ಪ್ರಾರಂಭಿಸುವುದರಲ್ಲಿದ್ದಾರೆ. ಆಕಾಶದಲ್ಲಿ ದೇದೀಪ್ಯಮಾನವಾದೊಂದು ಮೂರ್ತಿ ತೋರಿಯಿತು. ಕೆಂಜಡೆಯಲ್ಲಿ ಶಿವಲಿಂಗ, ಕೊರಳಲ್ಲಿ ರುದ್ರಾಕ್ಷ ಮಾಲೆ ಕೈಗಳಲ್ಲಿ ದಂಡಕಮಂಡಲುಗಳು. ಎದೆ ಬಳಿಯಲ್ಲಿ ಯಜ್ಞೋಪವೀತ, ದೇಹಕ್ಕೆ ಕೆಂಪು ಬಟ್ಟೆಯ ಉಡಿಗೆ, ಪಾದಗಳಲ್ಲಿ ಮಣಿಮಯ ಪಾವುಗೆಗಳುಳ್ಳ ಆ ಮೂರ್ತಿ ಗಗನದಿಂದ ಕೆಳಗಿಳಿವುದು ಋಷಿಗಳಿಗೆಲ್ಲಾ ಕಂಡಿತು. ದುಷ್ಟರನ್ನು ಶಿಕ್ಷಿಸುವುದಕ್ಕೂ ಶಿಷ್ಟರನ್ನು ರಕ್ಷಿಸುವುದಕ್ಕೂ ಮುನಿಜನದ ವೃತ್ತಿಯನ್ನು ಈಕ್ಷಿಸಿ ಸತ್ಫಲವನ್ನು ಕರುಣಿಸುವುದಕ್ಕೂ ಬಂದ ಈ ಗುರುವರನು ದಕ್ಷಿಣಾಮೂರ್ತಿಯ ಅವತಾರವೋ ಎಂಬಂತೆ ಶೋಭಿಸಿದನು. ಹಸನ್ಮುಖಿಯಾದ ಈ ಮೂರ್ತಿ ಕೆಳಗಿಳಿಯುತ್ತಲೇ ಪೀಠವನ್ನಲಂಕರಿಸಿರುವುದನ್ನು ಕಂಡು ಋಷಿಗಳೆಲ್ಲರೂ ಸಾಷ್ಟಾಂಗವೆರಗಿದರು. ಈ ದಿವ್ಯ ಮೂರ್ತಿ ಜಗದ್ಗುರು ಮರುಳಾರಾಧ್ಯನೆಂದು ಅರಿವರು, ಕೈ ಮುಗಿದು ಭಕ್ತಿಪರವಶರಾಗಿ ಸ್ತೋತ್ರ ಮಾಡಿದರು;- ಆತ್ಮೋಪದೇಶಕ್ಕಾಗಿ ಬೇಡಿದರು.

ಜಗದ್ಗುರು ಮರುಳಾರಾಧ್ಯರು ಇವರ ಇಂಗಿತವನ್ನರಿತು ಶಿವಸಿದ್ಧಾಂತವನ್ನೂ ಅದಕ್ಕೆ ಅನುಕೂಲವಾದ ಷಟ್‌ಸ್ಥಲ ಮಾರ್ಗವನ್ನೂ ಬೋಧಿಸಿದನು. ಈ ಸದ್ಬೋಧೆಯಿಂದ ಸರ್ವ ಋಷಿಗಳೂ ಆನಂದ ತುಂದಿಲರಾ

ದರು. ಈ ಆನಂದ ಸಮಯದಲ್ಲಿಯೇ ಜಗದ್ಗುರು ಮರುಳಾರಾಧ್ಯನು ಆ ದಾರುಕವನದಿಂದ ಆಕಾಶ ಮಾರ್ಗದಲ್ಲಿ ಹೊರಟು ಕಾಶಿಗೆ ಬಂದನು.

## ಹತ್ತನೆಯ ಸಂಧಿ
## ಗುರುವಿನ ಶಿವಯೋಗ ಸಮಾಧಿ

ಪರಶಿವಸ್ವರೂಪ ದಾರುಕಾಚಾರ್ಯರು ದಾರುಕವನದಿಂದ ಗಗನಮಾರ್ಗ ದಿಂದ ಹೊರಟು ಕಾಶೀಪಟ್ಟಣದಲ್ಲಿ ಶಿವಯೋಗನಿರತರಾದರು. ಆ ಕಾಶೀ ರಾಜ್ಯ ಹಿಮಾಚಲದಿಂದ ವಿಂಧ್ಯಗಿರಿಯ ವರೆಗೂ ಪೂರ್ವ ಪಶ್ಚಿಮಗಳಲ್ಲಿ ಸಮುದ್ರಗಳ ವರೆಗೂ ವಿಸ್ತಾರವಾಗಿತ್ತು. ಈ ರಾಜ್ಯದಲ್ಲಿಯೂ ಗಂಗಾ ಯಮುನಾ ಸರಸ್ವತೀ ನದಿಗಳ ತ್ರಿವೇಣೀಸಂಗಮ ಅಂದಿಗೂ ಪವಿತ್ರ ವಾಗಿಯೇ ಇದ್ದಿತು. ಆ ಗಂಗಾನದಿ ತನ್ನ ವೈಶಾಲ್ಯದಿಂದಲೂ ಜಲದ ಧವಲತೆಯಿಂದಲೂ ಹಿಮಗಿರಿಯಿಂದ ಸಾಗರದ ವರೆಗೆ ಹಾಕಿದ ಚಂದ್ರಶಿಲಾ ಮಯ ರಾಜಮಾರ್ಗದಂತೆ ರಂಜಿಸುತ್ತಿದೆ. ಅದರ ದಂಡೆಯ ಮೇಲಿನ ಸಂಪ ತ್ಪೂರ್ಣವಾದ ಭೂಪ್ರದೇಶಗಳೂ ಪವಿತ್ರತೀರ್ಥ ಕ್ಷೇತ್ರಗಳೂ ಸೃಷ್ಟಿ ಸೌಂದರ್ಯ ಮಯ ಸ್ಥಾನಗಳೂ ಎಂದಿಗೂ ಜನಾದರಣೀಯವಾಗಿವೆ

ಈ ಕಾಶೀಪವಿತ್ರಕ್ಷೇತ್ರವನ್ನು ವಾರಣಾಸಿ-ವಾರಾಣಸಿ ಎಂದು ಹೇಳು ವರು. ಇದನ್ನು ನೋಡಿದರೆ ಶ್ರೀ ಶಿವನಕೈಲಾಸವನ್ನು ಕಂಡಂತಾಗುವುದು.

ಆ ಗಂಗಾನದಿಯ ದಂಡೆಯ ಮೇಲೆ ಅಲ್ಲಲ್ಲಿ ಮನೋಹರ ಉದ್ಯಾನಗಳಿ ದ್ದವು. ಅಲ್ಲಿಯ ಮಲ್ಲಿಕಾ--ಮಾಲತೀ ವಲ್ಲರೀ ಕುಸುಮಗಳ ಮಧುರಸವನ್ನು ಸೇವಿಸಲು ಭ್ರಮರಗಳು ಗುಂಜಾರವಗೈಯುತ್ತ ತಿರುಗುವುವು. ಮಂದ ಮಾರುತನು ಆ ಸುಮನಗಳ ಸುಗಂಧವನ್ನು ಹೊತ್ತುಕೊಂಡು ಮೆಲ್ಲ ಮೆಲ್ಲನೆ ಮುಂದಾಗುತ್ತಿರುವನು. ಅಲ್ಲಿರುವ ಮಾಕಂದ-ಅಶೋಕ ಮೊದಲಾದ ವೃಕ್ಷ ಗಳ ಚಿಗುರು ತಿನ್ನಲು ಶುಕ-ಪಿಕ-ಸಾರಿಕೆಗಳು ಮೃದುಮಧುರ ಧ್ವನಿಗೈಯುತ್ತ ನಲಿಯುತ್ತ ಒಲಿಯುತ್ತ ಬರುವುವು. ಇಂತಹ ಶೃಂಗಾರರಸ ಪ್ರವಾಹ ದಲ್ಲಿ ಮನವಾರೆ ಮೀಯಲು ನಲ್ಲನಲ್ಲೆಯರು ತಂಡತಂಡವಾಗಿ ನೆರೆಯುತ್ತ ಲಿದ್ದರೆಂದು ಬೇರೆಯಾಗಿ ಹೇಳಬೇಕೇ ?

ಇಂತಹ ಮನೋಹರ ಉದ್ಯಾನಗಳ ನೆರೆಯಲ್ಲಿಯೇ ಸ್ನಾನಕ್ಕಾಗಿ ಗಂಗಾನದಿಯಲ್ಲಿ ಹಲವಾರು ಘಟ್ಟಗಳಿದ್ದವು. ಅಲ್ಲಿ ಸ್ನಾನಕ್ಕೆಂದು ಭಕ್ತಿ ಯಿಂದ ಬರುವ ಭಕ್ತರೆಷ್ಟೋ ! ಶೃಂಗಾರ ಸ್ವಾದವನ್ನು ಸವಿಯಲು ಬರುವ ಸುಂದರ ಸುಂದರಿಯರೆಷ್ಟೋ ! ಪರಪುರುಷರ ಮನೋಮೃಗವನ್ನು ಬೇಟೆ ಯಾಡಲು ಬರುವ ಬೆಡಗಿಯರೆಷ್ಟೋ ! ಕಾಮನ ಕುಸುಮ ಬಾಣಗಳಂತೆ

ಬಳುಕುವ ಬಡನಡುವಿನ ಬಾಲೆಯರೆಷ್ಟೋ! ನವತಾರುಣ್ಯದಿಂದ ತರಳತೆಯಾಂತ ತರುಣಿಯರೆಷ್ಟೋ! ಆದರೂ ಇಂತಹ ವಿಲಾಸದ ಕಿಂಕಿಣಿಯಲ್ಲಿಯೂ ಭಕ್ತರು ಭಗವಂತನಲ್ಲಿ ನಟ್ಟದೃಷ್ಟಿಯನ್ನಿಟ್ಟು ಗಂಗಾಸ್ನಾನ ಮಾಡುತ್ತಿದ್ದರು; ನೇರವಾಗಿ ಶ್ರೀ ವಿಶ್ವೇಶ್ವರನ ದರ್ಶನವನ್ನು ಪಡೆದು ನಿಜಾನಂದವನ್ನು ಹೊಂದುತ್ತಿದ್ದರು. ಕೆಲವರು ಅರ್ಘ್ಯ-ಪಾದ್ಯ-ಧೂಪ-ದೀಪ-ನೈವೇದ್ಯಾದಿಗಳಿಂದ ಪರಶಿವ ಮೂರ್ತಿಯನ್ನು ಪೂಜಿಸುತ್ತಿದ್ದರು. ಮತ್ತೆ ಕೆಲವರು ಶಿವಮಂತ್ರ ಜಪ-ತಪ ಅನುಷ್ಠಾನ-ಅಭಿಷೇಕಗಳನ್ನು ಎಸಗುತ್ತಿದ್ದರು. ಬೇರೆ ಕೆಲವರು ಶಿವಭಕ್ತಿ ಶಿವಮತ ಪ್ರಸಾರಕ್ಕಾಗಿ ಅಲ್ಲಲ್ಲಿ ಶಿವದೇವಾಲಯಗಳನ್ನು ಕಟ್ಟಿಸುತ್ತಿದ್ದರು; ಶಿವಲಿಂಗಗಳನ್ನು ಸ್ಥಾಪಿಸುತ್ತಿದ್ದರು; ಇನ್ನು ಹಲವರು ಅಲ್ಲಲ್ಲಿ ಶಿವಮಹೋತ್ಸವ-ಶಿವಪುರಾಣ-ಶಿವಕೀರ್ತನ ಮಾಡಿ ತಮ್ಮ ಜನ್ಮವನ್ನೂ ಕೇಳುವವರ ಜನ್ಮವನ್ನೂ ಸಾರ್ಥಕಗೊಳಿಸುತ್ತಿದ್ದರು. ಹೀಗೆ ಶಿವಭಕ್ತಿ ವಿಶೇಷದಿಂದ ಕಾಶೀಪಟ್ಟಣ ಭೂಕೈಲಾಸವೆಂದು ಕಂಗೊಳಿಸುತ್ತಿತ್ತು!

ಆ ಗಂಗಾನದಿಯ ಮತ್ತೊಂದು ದಂಡೆಯ ಮೇಲೆ ರಾಮಣೀಯಕವಾದ ನೈಸರ್ಗಿಕ ಉಪವನವಿದ್ದಿತು. ಆ ಮಹೋದ್ಯಾನದಲ್ಲಿ ಅಗರು-ಚಂದನ ಮೊದಲಾದ ಸುಗಂಧ ವೃಕ್ಷಗಳು ಮುಗಿಲು ಮುಟ್ಟುವಂತೆ ಬೆಳೆದಿವೆ. ಕುಸುಮಿತ ಲತೆಗಳು ಆ ವೃಕ್ಷಗಳನ್ನು ನಲ್ಲೆಯರಂತೆ ಬಿಗಿದಪ್ಪಿಕೊಂಡಿವೆ. ಎಂದ ಮೇಲೆ ಆ ಉಪವನದೊಳಗಿನ ಸುರಭಿ-ಸುರಮ್ಯ ಪವನದ ಶೀತಲ ಸ್ಪರ್ಶವನ್ನು ಹೆಚ್ಚಾಗಿ ಬಣ್ಣಿಸಬೇಕೇ!

ಹೀಗೆ ವಿಲಾಸಿಗಳಿಗೆ ಲೀಲಾಸದನವೂ ಭಕ್ತರಿಗೆ ಮುಕ್ತಿಮಂದಿರವೂ ಎನಿಸಿದ ಕಾಶೀಪಟ್ಟಣ ಸರ್ವರಿಗೂ ಸಮನಾಗಿಯೇ ಆದೇಯವಾಗಿದ್ದಿತು. ಇಲ್ಲಿಯೇ ಭಕ್ತ ಕಾಮಿತ ಕಾಮಧೇನುವೆನಿಸುವ ಶ್ರೀ ವಿಶ್ವನಾಥನ ದಿವ್ಯವಾದ ಮಂದಿರವಿದೆ ಆ ಶಿವಸನ್ನಿಧಿಯಲ್ಲಿ ಯಾವಾಗಲೂ ಶಿವಪುರಾಣ-ಶಿವಕಥಾ ಶ್ರವಣ-ಶಿವತತ್ತ್ವಪ್ರಸಂಗ-ಶಿವಭಜನ ಮುಂತಾದುವುಗಳಿಂದ ಕೈಲಾಸವೇ ಇಲ್ಲಿ ಇಳಿದಿದೆಯೇನೋ ಎನಿಸುತ್ತಿತ್ತು.

ಇಂತು ಮುಕ್ತಿಮಂದಿರವೆನಿಸಿದ ಕಾಶೀಕ್ಷೇತ್ರದಲ್ಲಿ, ಮಣಿಕರ್ಣಿಕಾತೀರ್ಥ, ಅನ್ನಪೂರ್ಣಾಂಬಾತೀರ್ಥ, ಅಮಲತೀರ್ಥ ಮೊದಲಾದುವು ಗಂಗಾದೇವಿಯ ಅಪರಾವತಾರವಂತೆ ಆಹ್ಲಾದದಾಯಕವಾಗಿರುವುವು. ಶ್ರೀ ವಿಶ್ವೇಶ್ವರನು ಆತ್ಮಾರಾಮರೂಪ ಲಿಂಗರೂಪದಲ್ಲಿ ಆ ತೀರ್ಥಗಳ ನೆರೆಯಲ್ಲಿಯೇ ವಿರಾಜಮಾನನಾಗಿದ್ದಾನೆ. ಆತನ ಸುತ್ತಲು ನವಭೈರವರು ನವಕಾಲಿಯರು ನವದುರ್ಗೆಯರು, ಉದ್ದಂಡ ಪಂಡಿತ ಢುಂಡಿರಾಜ ಗಣಾವರ, ಶಿವಸರ್ವೋತ್ತಮ ತತ್ತ್ವವನ್ನು

ಒಮ್ಮೆ ಅಜ್ಞಾನವಾಸಿಯ ವಿಸ್ತಾರವಾದ ಬೈಲಿನಲ್ಲಿ ವೈದಿಕ ವಿದ್ವಾಂಸರೆಲ್ಲ ಕೂಡಿದರು. ಆ ಸಮಯಕ್ಕೆ ಸರಿಯಾಗಿ ಸುಜ್ಞಾನ ಸಿಂಹಾಸನಾಧೀಶ್ವರ ಜಗದ್ಗುರು ವಿಶ್ವಾರಾಧ್ಯರು ಶ್ರೀ ಜಂಗಮವಾಟಿಕೆಯಿಂದ ವಿಶ್ವಮುನಿರೂಪನಿಂದ ಆ ವಾದಭೂಮಿಗೆ ದಯಮಾಡಿಸಿದರು. ಆ ಮೇಲೆ ಯಜ್ಞದಲ್ಲಿ ಪಶುವಧೆ-ಮಾಂಸಭಕ್ಷಣ ಮೊದಲಾದವುಗಳ ಬಗೆಗೆ ತೀವ್ರ ಚರ್ಚೆ ನಡೆಯಿತು. ಅಷ್ಟರಲ್ಲಿ ಗಗನ ಮಾರ್ಗದಲ್ಲಿ ಝಗ್ಗನೆ ದಿವ್ಯ ಪ್ರಭೆಯು ಕೋಲ್ಮಿಂಚು ಹೊಳೆದಂತಾಯಿತು; ಕೂಡಲೆ ಪಂಚಮುದ್ರಾಂಕಿತ ಪರಶಿವರೂಪಿ ಮರುಳಾರಾಧ್ಯರು ಅವತರಿಸಿ ಮಾತನಾಡತೊಡಗಿದರು:

ಪಂಡಿತರೇ, ವೇದ ವಿಹಿತವಾದ ಯಾವದೇ ಆಚಾರವಾಗಲಿ ಅದು ಸಾಧುವರ್ತನದ ತಳಗಟ್ಟಿನ ಮೇಲೆಯೇ ನಿಂತಿರಬೇಕು. ಹಿಂಸಾಚಾರವು ಎಂದೆಂದಿಗೂ ಬಾಧಕವೇ. ಆದುದರಿಂದ ಶ್ರುತಿಮತದ ಸಾರವನ್ನು ತೆಗೆದು ಸತ್ಯ-ಸಾತ್ವಿಕ-ಆಚಾರ ವಿಚಾರಗಳ ತಳಹದಿಯ ಮೇಲೆ ನಿಂತಿರುವ ಶೈವ-ಶ್ರುತಿಮತ ತತ್ವಗಳೇ ಆದೇಯವಾಗಿವೆ. ಕರ್ಮ-ಭಕ್ತಿ-ಜ್ಞಾನಗಳ ಮರ್ಮವನ್ನು ಮನಗಾಣಿಸುವ ಈ ಶೈವ ಮತದಲ್ಲಿ ಹಿಂಸಾಚಾರಗಳಿಗೆ ಸ್ಥಾನವಿಲ್ಲ. ಯಜ್ಞ ಮೊದಲಾದುವು ಕಾಮ್ಯ ಕರ್ಮಗಳು. ಅವುಗಳಿಂದ ಇಹವೂ ಇಲ್ಲ, ಪರವೂ ಇಲ್ಲ, ತನಗೂ ಸುಖವಿಲ್ಲ, ಅನ್ಯರಿಗೂ ಆನಂದವಿಲ್ಲ! ಇದರಿಂದ ನೈಷ್ಕರ್ಮ್ಯಸಿದ್ಧಿ ಹೇಗೆ ಸಂಭವಿಸುವುದು? ನೈಷ್ಕರ್ಮ್ಯಸಿದ್ಧಿಯಿಂದಲೇ ಪರಮಾತ್ಮ ಸಾಕ್ಷಾತ್ಕಾರವೆಂಬುದನ್ನು ಮರೆಯಬೇಡಿರಿ. ಈ ನೈಷ್ಕರ್ಮ್ಯಸಿದ್ಧಿಯೇ ವೇದದ ತಿರುಳು ತಿಳಿವು.,

ಈ ರೀತಿಯಾಗಿ ಗುರುಗಳು ಅಮೃತದ ಮಳೆಗರೆದು ವಿರಾಮ ಪಡೆದರು. ಈ ಶೈವಮತಸ್ವೀಕಾರದಿಂದಲೇ ತಮ್ಮ ಸರ್ವಾರ್ಥಸಿದ್ಧಿಯಾಗುವುದೆಂದು ಸ್ಪಷ್ಟವಾಯಿತು. ಅದರಿಂದ ಅವರೆಲ್ಲ ಆ ಗುರುವಿನ ಅಮೃತಹಸ್ತದಿಂದಲೇ ಶಿವದೀಕ್ಷೆಯನ್ನು ಪಡೆದರು.

ಆಗ ಗುರುವರನು ಅಲ್ಲಿಯೇ ಆ ವಿದ್ವಾಂಸರಿಗಾಗಿ ಗುರುಕುಲವನ್ನು ಸ್ಥಾಪಿಸಿದರು; ಪ್ರಥಮ ಪಾಠವಾಗಿ ಅವರೆಲ್ಲರಿಗೂ ಶಿವಜೀವೈಕ್ಯ ರಹಸ್ಯವನ್ನು ತಿಳಿಸಿದರು; ಆ ಮೇಲೆ ಎಲ್ಲರಿಗೂ ಆಶೀರ್ವದಿಸಿ ವಿಶ್ವಾರಾಧ್ಯಪೀಠಕ್ಕೆ ನಾಗಿದರು. ಅಲ್ಲಿ ಶ್ರೀ ವಿಶ್ವಮುನಿವರರಿಗೆ ತನ್ನ ಸರ್ವವೃತ್ತಾಂತವನ್ನು ತಿಳಿಸಿ ಲೌಕಿಕ ವಿಷಯ ನಿವೃತ್ತರಾಗಿ ಯೋಗನಿದ್ರಾರೂಢರಾದರು!

## ಹನ್ನೊಂದನೆಯ ಸಂಧಿ

## ಮುಕ್ತಿ ಮುನಿಗಳು

ಶ್ರೀ ಮರುಳಾರಾಧ್ಯ ಗುರುಗಳು ನಾಲ್ಕುನೂರು ವರುಷಗಳ ವರೆಗೆ ಯೋಗನಿದ್ರಾಸಕ್ತರಾಗಿದ್ದರು ಕೊನೆಯ ಸಮಯದಲ್ಲಿ ಶ್ರೀ ವೇದವ್ಯಾಸ

ಋಷಿಗಳು ಅವರ ಹತ್ತಿರ ಹೋದರು. ಆದರೆ ಆ ಮಹಾಮಹಿಮರನ್ನು ಯೋಗನಿದ್ರೆಯಿಂದ ಎಚ್ಚರಿಸುವುದು ಹೇಗೆ ? ಅದಕ್ಕಾಗಿ ಶ್ರೀ ವ್ಯಾಸರು ಗುರುಸ್ತವನವನ್ನು ಆರಂಭಿಸಿದರು.

ರೇಣುಕಾಚಾರ್ಯರು ಮಂದಸ್ಮಿತಪೂರ್ವಕವಾಗಿ ಕಣ್ತೆರೆದರು; ಮತ್ತು ವಾತ್ಸಲ್ಯಪೂರ್ಣ ಹೃದಯದಿಂದ ಶಿಷ್ಯನನ್ನು ಕೇಳಿದರು - ನಿನ್ನ ಮನದ ಬಯಕೆಯೇನು ?

ವ್ಯಾಸರು—ಪರಮಗುರುವೇ, ತಮ್ಮ ವಚೋಮೃತದಿಂದ ನನ್ನ ಅಂತ ರಾತ್ಮ ಆನಂದಭರಿತವಾಗಿದೆ ನನ್ನ ವೇದಾಂತ ಸೂತ್ರಗಳಿಗೆ ಗುರುವಿನ ಅಮೃತಹಸ್ತದಿಂದ ಭಾಷ್ಯವನ್ನು ಬರೆಯುವುದಾಗಬೇಕು.

ಆಗ ಗುರುಗಳು ಮನದಲ್ಲಿ ಪರಶಿವನನ್ನು ಧ್ಯಾನಿಸುತ್ತ ಹೇಳಿದರು- ಮುನಿಯೇ, ನಿನ್ನ ವೇದಾಂತ ಸೂತ್ರಗಳಿಗೆ ಭಾಷ್ಯವನ್ನು ಬರೆಯುವುದು ಆ ಪರಶಿವನಿಗೊಬ್ಬನಿಗೇ ಸಾಧ್ಯ ಅದಕ್ಕಾಗಿ ನೀನು ಆತನ ಕೃಪೆಯನ್ನು ಕೋರು, ಎಂದರೆ ನಿನ್ನ ಕೆಲಸವಾಗುವುದು. ಆತನನ್ನು ಬಿಟ್ಟರೆ ಬೇರೆ ಗುರು ಗಳಾಗಲಿ ಶಿವಗಣಗಳಾಗಲಿ ಯಾರೂ ಭಾಷ್ಯವನ್ನು ಬರೆಯಲಾರರು.

ಗುರುವಿನ ಮಾತು ವೇದವ್ಯಾಸ ಋಷಿಗೆ ಅಹುದೆನಿಸಿತು. ಕೂಡಲೆ ಆತನು ದಿವ್ಯ ಶರೀರದಿಂದ ಕೈಲಾಸಕ್ಕೆ ಪಯಣ ಬೆಳೆಸಿದನು. ಅಲ್ಲಿ ಪರಶಿವ ತನ್ನೋಲಗವನ್ನು ನೆರೆಯಿಸಿದ್ದನು. ಆತನು ಮುನಿಗೆ ತತ್ತ್ವವನ್ನು ತಿಳಿಸಿ ಮತ್ತೆ ವರವನ್ನು ಕೊಟ್ಟನು: ಮುನಿಯೇ, ನಿನ್ನ ಕೆಲಸ ಪರಮ ಪವಿತ್ರ ವಾದುದು, ಲೋಕ ಕಲ್ಯಾಣಕರವಾದುದು. ಆದರೆ ಆ ಕೆಲಸ ಭೂಲೋಕ ದಲ್ಲಿಯೇ ಆಗಬೇಕು. ಆದುದರಿಂದ ನಾನು ನೀಲಕಂಠ ಶಿವಾಚಾರ್ಯ ನಾಮ ದಿಂದ ಅವತರಿಸಿ ವೇದಾಗಮ ಸಮ್ಮತವಾಗಿ ನಿನ್ನ ಸೂತ್ರಕ್ಕೆ ಭಾಷ್ಯವನ್ನು ಬರೆಯುವೆ ನಿನಗೆ ಯಾವ ಸಂಶಯವೂ ಬೇಡ - ಆ ಕಾಲದಲ್ಲಿ ನೀನು ಬದರಿ ಕಾಶ್ರಮದಲ್ಲಿ ವಾಸಮಾಡು; ಮತ್ತು ಶಿವಮತ ಪ್ರಸಾರ-ಪ್ರಚಾರ ಕಾರ್ಯ ಗಳನ್ನು ಕೈಕೊಳ್ಳು. ಶ್ರೀ ವೀರಶೈವ ಸಿದ್ಧಾಂತಕ್ಕೆ ಅನುಸಾರವಾಗಿ ಸೃಷ್ಟ್ಯಾ ದಿಪ್ರವೃತ್ತಿಗೂ ನಿನ್ನ ಸೂತ್ರಗಳನ್ನು ಭಕ್ತರಿಗೆ ಬೋಧಿಸುತ್ತಿರು.

ಶಿವನಿಂದ ಅಪ್ಪಣೆಯನ್ನು ಪಡೆದು ವ್ಯಾಸಋಷಿ ಹಿಮಗಿರಿತಟದಲ್ಲಿರುವ ಬದರಿಕಾಶ್ರಮದಲ್ಲಿ ವಾಸಮಾಡಿದನು; ಮತ್ತು ಅಲ್ಲಿ ನಿತ್ಯವೂ ಶಿವಾನುಷ್ಠಾನ ಗೈಯುತ್ತ ಶಿವಮತಪ್ರಸಾರ ಮಾಡುತ್ತ ಅನೇಕ ಬಗೆಯ ಪುರಾಣಗಳನ್ನು ರಚಿಸತೊಡಗಿದನು.

ಇತ್ತ ಶ್ರೀ ಮರುಳಾರಾಧ್ಯರು ಶ್ರೀ ಕಾಶೀವಿಶ್ವೇಶ್ವರ ಲಿಂಗದ ಅಪ್ಪಣೆಯನ್ನು ಪಡೆದು ಶ್ರೀಶೈಲ ಮಲ್ಲಿಕಾರ್ಜುನಲಿಂಗದರ್ಶನಕ್ಕೆ ದಯಮಾಡಿಸಿದರು. ಅಲ್ಲಿರುವ ಪವಿತ್ರ ಪಾತಾಳಗಂಗೆಯಲ್ಲಿ ಮಿಂದು ಶ್ರೀ ಮಲ್ಲಿಕಾರ್ಜುನ ಮಹಾಲಿಂಗಪೂಜೆಯನ್ನು ಮುಗಿಸಿದರು. ಮುಂದೆ ಶ್ರೀಶೈಲ ಗುರುಗಳಾದ ಪಂಡಿತಾರ್ಯರೂ ಶ್ರೀ ಮರುಳಾರಾಧ್ಯರೂ ವೇದಾಗಮಸಮ್ಮತ ಶ್ರೀ ವೀರಶೈವ ಮತವನ್ನು ಹೇಗೆ ಪ್ರಸಾರ ಮಾಡಬೇಕೆಂದು ಯೋಚಿಸಿದರು.

ಮುಂದೆ ಶ್ರೀ ಮರುಳಾಧ್ಯರು ಶಿವಸರ್ವೋತ್ತಮತ್ವಸ್ಥಾಪನೆಗಾಗಿ ದಿಗ್ವಿಜಯ ಬೆಳೆಸಿದರು. ಮೊದಲು ಕಾಂಚೀಕ್ಷೇತ್ರದಲ್ಲಿ ಪಂಡಿತರೊಡನೆ ವಾದ ನಡೆಯಿತು. ಅದರಲ್ಲಿ ಜಯಶಾಲಿಗಳಾಗಿ ಅನೇಕ ಪಂಡಿತರಿಗೆ ಶಿವದೀಕ್ಷೆಯನ್ನು ಕೊಟ್ಟರು. ಅಲ್ಲಿಂದ ಮಹಿಷ ಮಂಡಲ (ಮೈಸೂರು) ಕ್ಕೆ ಬಂದು ರಾಜನ ಅತಿಥಿಗಳಾಗಿ ಉಳಿದರು. ಆಗ ದೊರೆ ಕೊಟ್ಟ ಕಾಣಿಕೆಯನ್ನೆಲ್ಲ ಅಲ್ಲಿಯ ವಿದ್ವಾಂಸರಿಗೇ ಹಂಚಿದರು. ಮತ್ತು ಅವರಿಗೆ ಚಾಮುಂಡೀದೇವಿಯ ಮಹತ್ತ್ವವನ್ನು ತಿಳಿಸಿ ಮುಂದೆ ಪಂಪಾಕ್ಷೇತ್ರಕ್ಕೆ ಬಿಜಯಮಾಡಿದರು. ಅಲ್ಲಿ ತುಂಗಭದ್ರಾ ತೀರ್ಥದಲ್ಲಿ ಸ್ನಾನಮಾಡಿ ವಿರೂಪಾಕ್ಷ ಲಿಂಗವನ್ನು ಪೂಜಿಸಿದರು. ಆಗ ನೆರೆಯಲ್ಲಿದ್ದ ತಾಪಸರಿಗೂ ಭಕ್ತರಿಗೂ ಶಿವತತ್ತ್ವಶ್ರೇಷ್ಠತೆಯ ತಿರುಳನ್ನು ತಿಳುಹಿದರು. ಅಲ್ಲಿಂದ ಲಿಂಗಮೂರ್ತಿಯ ಆಶೀರ್ವಾದ ಪಡೆದು ಮುಗಿಲಮಾರ್ಗವಾಗಿ ಹೊರಟು ಶಿರಶೃಂಗ (ಶಿರಸಂಗಿ) ಮುನಿಯ ಆಶ್ರಮವನ್ನೈದಿದರು.

ಶ್ರೀ ಮರುಳಾರಾಧ್ಯರನ್ನು ಕಂಡು ಶಿರಶೃಂಗ ಮುನಿಗೆ ಪರಮಾನಂದವಾಯಿತು. ಇಬ್ಬರೂ ಕೆಲಹೊತ್ತು ಲೋಕ ಕಲ್ಯಾಣ-ಶಿವಮತ ಪ್ರಚಾರ ಮುಂತಾದ ವಿಷಯಗಳನ್ನು ಮಾತನಾಡಿದರು. ಆ ಮೇಲೆ ಶಿರಶೃಂಗ ಮುನಿಯ ಮುಖಾಂತರ ಉಜ್ಜಯಿನೀ ಮಹಾಕಾಳಿಕಾಂಬಿಯ ಮೂರ್ತಿಯನ್ನು ತರಿಸಿದರು; ಆಶ್ರಮದಲ್ಲಿ ಅದರ ಪ್ರತಿಷ್ಠಾಪನೆ ಮಾಡಿದರು. ಮುಂದೆ ಅಲ್ಲಿಯೇ ಒಂದುನೂರು ವರುಷಗಳ ವರೆಗೆ ಯೋಗಾನುಷ್ಠಾನದಲ್ಲಿ ನಿರತರಾಗಿದ್ದರು. ಅಲ್ಲಿಂದ ಹಿಮಗಿರಿತಟದಲ್ಲಿರುವ ಮಹಾದೇವಾದ್ರಿಗೆ ಪಯಣ ಬೆಳೆಸಿದರು. ಆ ದಿವ್ಯ ಗಿರಿಯಲ್ಲಿ ಒಂದುನೂರಾಆರು ವರುಷಗಳ ಕಾಲ ತಪೋನಿಷ್ಠಾನುಸಂಧಾನದಲ್ಲಿದ್ದು ಕೊನೆಯಲ್ಲಿ ಶಿಲೆಯೊಳ್ ಸೃಷ್ಟಿಸಿದ ಶಿವಸೂತ್ರ ಸಮೂಹಕ್ಕೆ ಶೈವ ಸಂಪ್ರದಾಯದ ಭಾಷ್ಯವನ್ನು ಬರೆದರು. ಈ ಸಮಯದಲ್ಲಿ ಆಚಾರ್ಯರು ಹುತ್ತದಲ್ಲಿ ಸುಪ್ತಾವಸ್ಥೆಯಿಂದ ಇದ್ದ ಕಾರಣ ಅವರನ್ನು ಗುಪ್ತಾಚಾರ್ಯರೆಂದೂ ಕರೆಯುತ್ತಿದ್ದರು. ಭಾಷ್ಯ ಬರೆಯುವುದು ಪೂರೈಸಲು ಆಚಾರ್ಯರು ಅದನ್ನು ಆಪ್ತೇಷ್ಟರಿಗೂ ಭಕ್ತರಿಗೂ ಬಿತ್ತರಿಸಲು

ಮತ್ತೆ ಪ್ರಯಾಣ ಬೆಳೆಸಿದರು. ಇದಕ್ಕಾಗಿ ಕಾಶ್ಮೀರದಲ್ಲಿ ಶ್ರೀ ಸರಸ್ವತೀ ಪೀಠ ಎಂಬ ಮುಖ್ಯ ಮಠವನ್ನು ಸ್ಥಾಪಿಸಿದರು. ಅಲ್ಲಿರುವ ಋಷಿ ಮುನಿಗಳೇ ಅದರ ಯೋಗಕ್ಷೇಮವನ್ನು ನೋಡಿಕೊಳ್ಳುವ ವ್ಯವಸ್ಥೆಯಾಗಿದ್ದಿತು. ಆ ಋಷಿಮುನಿಗಳು ಕೂಡ ಈ ಭಾಷ್ಯರಹಸ್ಯವನ್ನು ಬೇರೆಡೆಗಳಲ್ಲಿ ಬಿತ್ತರಿಸುತ್ತಿದ್ದರು. ಈ ಬಗೆಗೆ ಕಾಲ ಕಾಲಕ್ಕೆ ಶ್ರೀ ಮರುಳಾರಾಧ್ಯರು ಅವರಿಗೆ ಯೋಗ್ಯ ಸಾಹಾಯ್ಯ-ಸಲಕರಣೆಗಳನ್ನು ಒದಗಿಸುತ್ತಿದ್ದರು. ಈ ಎಲ್ಲ ಪ್ರಯತ್ನದ ಫಲವಾಗಿ ಆ ಭಾಗದಲ್ಲಿ ಶೈವಮತ ಭರದಿಂದ ಬೆಳೆಯತೊಡಗಿತು.

ಇಷ್ಟಾಗುವ ಹೊತ್ತಿಗೆ ಶ್ರೀ ಗುರುವಿನ ಅವತಾರಸಮಾಪ್ತಿಯು ಸಂಧಿ ಸನ್ನಿಹಿತವಾಯಿತು. ಅವರು ಕೇದಾರೇಶ್ವರ ಲಿಂಗದರ್ಶನಕ್ಕೆ ಹೊರಡಲುದ್ಯುಕ್ತರಾದರು ಆಗ ಋಷಿ ಮುನಿಗಳೆಲ್ಲರೂ ಗುರುವಿಗೆ ಶಿರಬಾಗಿ ವಂದಿಸಿದರು. ಪರಶಿವನ ಅಪರಾವತಾರದಂತಿರುವ ದಿವ್ಯಮೂರ್ತಿಯ ದರ್ಶನದಿಂದ ಆಚಾರ್ಯರಿಗೆ ಅತಿ ಆನಂದವಾಯಿತು. ! ಗಾಢಾಲಿಂಗನದಿಂದ ಮೂರ್ತಿಯನ್ನು ಸ್ವಾಗತಿಸಿದರು. ಮತ್ತೆ ಉಭಯ ಗುರುಗಳೂ ಕೇದಾರೇಶ್ವರ ಪ್ರಸಾದವನ್ನು ಪಡೆದು ಏಕೋರಾಮರ ಕಡೆಗೆ ನಡೆದರು.

ಜಗದ್ಗುರು ಏಕೋರಾಮರು ಭವ್ಯ ಗುರುವನ್ನು ದಿವ್ಯವಟುವನ್ನು ನೋಡಿ ಪರಮಾನಂದ ತುಂದಿಲರಾದರು. ಆಗ ಏಕೋರಾಮರು ಶ್ರೀ ನಂದಿಕೇಶ್ವರನೇ ಈ ರೂಪದಿಂದ ಅವತರಿಸಿದ್ದಾರೆ. ಈ ವಟುವನ್ನು 'ಮುಕ್ತಿಮುನಿ'ಯೆಂದು ನಾಮಕರಣ ಮಾಡುವೆವು; ಈತನೇ ನಿಮ್ಮ ಸದ್ಧರ್ಮ ಪೀಠದ ಉತ್ತರಾಧಿಕಾರಿಯಾಗಲಿ-ಎಂದು ಅಪ್ಪಣೆಕೊಡಿಸಿದರು.

ಎಲ್ಲರೂ ಉಜ್ಜಯಿನಿಗೆ ದಯಮಾಡಿಸಿದರು, ಶ್ರೀ ಕಾಲಕಾಲೇಶ್ವರನ ಗುರು ಶಿಷ್ಯರೆಲ್ಲರನ್ನು ಹರಿಸಿದರು; ಅವರಿಗೆ ಶಿವತತ್ತ್ವ ಪ್ರಚಾರವನ್ನು ಮರೆಯದಿರಲು ಆಜ್ಞಾಪಿಸಿದರು.

ಅಂದು ವೈಶಾಖ ಶುದ್ಧ ತೃತೀಯೆಯ ಮಂಗಲ ಮುಹೂರ್ತ. ಗುರು ಕೇದಾರೇಶ್ವರದ ಗೌರೀ ಕುಂಡದಲ್ಲಿ ಮಿಂದು ಲಿಂಗಾರ್ಚನೆಯನ್ನು ಮುಗಿಸಿದರು. ಆ ಮೇಲೆ ಶ್ರೀ ಕೇದಾರೇಶ್ವರ ಸನ್ನಿಧಿಯಲ್ಲಿ ನಿಂತು-ಪರಶಿವನೇ ಶ್ರೀ ಉಜ್ಜಯಿನೀ ಸದ್ಧರ್ಮ ಪೀಠದ ಉತ್ತರಾಧಿಕಾರಿಯನ್ನು ದಯಪಾಲಿಸಬೇಕು-ಎಂದು ಪ್ರಾರ್ಥಿಸಿದರು. ಕೂಡಲೇ ಆ ಗೌರೀ ಕುಂಡದೊಳಗಿಂದ, ಕೆಂಜೆಡೆಯಲ್ಲಿ ಇಷ್ಟಲಿಂಗವನ್ನು ಹಸ್ತದಲ್ಲಿ ಪಾಲಾಶದಂಡ ಚಿತ್ರತಾಮ್ರ ಕಮಂಡಲುಗಳನ್ನು ಮೈಮೇಲೆ ಕೇವೆಯ ಆಚ್ಛಾದನವನ್ನು ಹೊದೆದು

ಭಸ್ಮೋದ್ಧೂಲಿತ ಗಾತ್ರವಾದ ತೇಜೋಮೂರ್ತಿ ಒಡಮೂಡಿತು ! ಆ ಅನುಗ್ರಹಕ್ಕೆ ಅನುಗುಣವಾಗಿ ಮುಕ್ತಿ ಮುನಿಗೆ ಸದ್ಧರ್ಮ ಸಿಂಹಾಸನದ ಪಟ್ಟಾಭಿಷೇಕವಾಯಿತು. ಉತ್ಸವವನ್ನು ಹೊರಡಿಸಿದರು. ದಾರಿಯುದ್ದಕ್ಕೂ ಜನರು ನವಗುರುವಿನ ಮೇಲೆ ಹೂಮಳೆಗರೆದರು. ಗುರುಗಳು ಪದ್ಧತಿಯಂತೆ ಸಕಲರಿಗೂ ಶೈವ ಸಿದ್ಧಾಂತರಹಸ್ಯಾ-ಮೃತವನ್ನು ಪಾನಮಾಡಿಸಿದರು. ಪವಿತ್ರಾಂತರರಾದ ಶಿಷ್ಯರು ಗುರುವಿಗೆ ಭಕ್ತಿ ಪೂರ್ವಕವಾಗಿ ಕಾಣಿಕೆಗಳನ್ನು ಅರ್ಪಿಸಿದರು. ಅವರೆಲ್ಲರಿಗೂ ಗುರುವಿನಿಂದ ಶುಭಾಶಿಷಗಳು ದೊರೆತುವು. ಆಗ ಶ್ರೀ ಮರುಳಾರಾಧ್ಯ ಗುರುಗಳು ನಿಯಮಾನುಸಾರವಾಗಿ ಏಕೋರಾಮ ಶಿವಾಚಾರ್ಯರ ಸಮ್ಮುಖದಲ್ಲಿ ಸದ್ಧರ್ಮ ಪೀಠದ ಗುರುಮುದ್ರೆಯನ್ನು ಮುಕ್ತಿ ಮುನಿಗಳಿಗೆ ಆಶೀರ್ವದಿಸಿದರು.

ಶ್ರೀ ಮರುಳಾರಾಧ್ಯರ ಅವತಾರ ಸಮಾಪ್ತಿಯ ಸುಮುಹೂರ್ತ ಸಮೀಪಿಸಿತು. ಇದ್ದಕ್ಕಿದ್ದ ಹಾಗೆಯೇ ವಟವೃಕ್ಷ ಸಿದ್ಧೇಶ್ವರ ಲಿಂಗ ಇಬ್ಭಾಗವಾಯಿತು ! ಆಚಾರ್ಯರು ಆನಂದದಿಂದ ಲಿಂಗೈಕ್ಯರಾದರು ! ಕೂಡಲೆ ತೇಜಃಪುಂಜವೊಂದು ಲಿಂಗದಿಂದ ಗಗನಮಾರ್ಗವಾಗಿ ಗಮಿಸತೊಡಗಿತು. ಭಕ್ತ ಜನರೆಲ್ಲ ನಿಬ್ಬೆರಗಾಗಿ ನೋಡತೊಡಗಿದರು.

## ಹನ್ನೆರಡನೆಯ ಸಂಧಿ
## ಹದಿನಾರು ಜನ ಗುರು ಪರಂಪರೆ

ಮುಕ್ತಿ ಮುನಿಗಳು ಪಟ್ಟವೇರಿದ ಮೇಲೆ ಶೈವಸಂಪ್ರದಾಯ ಸೊಂಪೇರಿತು. ಆ ಮೇಲೆ ಗುರುಗಳು ದೇಶದಾದ್ಯಂತ ಸಂಚಾರವನ್ನಿಟ್ಟು ಕೊಂಡರು. ಆ ಸಂಚಾರದಲ್ಲಿ ಭಕ್ತರಿಗೆಲ್ಲ ಶೈವತತ್ತ್ವವನ್ನು ಬೋಧಿಸುತ್ತ ವೀರಶೈವ ಮತಪ್ರಸಾರ ಮಾಡಿದರು. ಆದರೂ ಅಲ್ಲಲ್ಲಿ ಹಿಂಸಾಚಾರಗಳು ನಡೆಯುತ್ತಲೇ ಇದ್ದವು. ಅವನ್ನು ಬೇರು ಸಹಿತಕಿತ್ತು ಹಾಕಲು ಬೌದ್ಧ ಧರ್ಮವುದಿಸಿತು. ಪರಶಿವನ ಆಜ್ಞೆಯಿಂದ ಶ್ರೀ ವಿಷ್ಣುವೇ ಬುದ್ಧನ ರೂಪದಿಂದ ಭೂಮಿಗೆ ಅವತರಿಸಿದರೆಂದು ವೈಷ್ಣವ ಪುರಾಣಗಳು ಸಾರುತ್ತಿವೆ. ಈ ಸಮಯ ಬರುವುದರೊಳಗಾಗಿ ಮುಕ್ತಿ ಮುನಿಗಳು ಪಟ್ಟವೇರಿ ಮುನ್ನೂರು ವರುಷಗಳಾಗಿದ್ದವು. ಆ ಮೇಲೆ ಅವರು ಶ್ರೀ ಸಿದ್ಧಮುನಿಗಳಿಗೆ ಸದ್ಧರ್ಮ ಪೀಠಾಧಿಕಾರವನ್ನು ಒಪ್ಪಿಸಿ ಲಿಂಗೈಕ್ಯರಾದರು.

ಈ ಹೊತ್ತಿಗೆ ಬೌದ್ಧಧರ್ಮಕ್ಕೆ ಒಳ್ಳೆ ಕಳೆಯೇರಿತ್ತು. ವೈದಿಕ ಧರ್ಮದಲ್ಲಿಯ ಯಜ್ಞಯಾಗ ಪ್ರಾಣಿವಧೆಗಳು ಜನರಲ್ಲಿ ಹೇಸಿಕೆಯನ್ನು ಹುಟ್ಟಿಸಿ

ದ್ದುವು. ದೇವರು ಪ್ರೀತಿಮಾಗಬೇಕು; ಮಾನವನಿಗೆ ಮುಕ್ತಿ ದೊರೆಯು ಬೇಕು. ಈ ವಿಚಾರದ ಜಾಡನ್ನು ಹಿಡಿದು ಭಗವಾನ್ ಬುದ್ಧ ದೇವರೂ ಶ್ರೀ ಮಹಾವೀರ (ಜಿನ) ಸ್ವಾಮಿಗಳೂ ಹೊಸಧರ್ಮಗಳನ್ನು ಹುಟ್ಟಿಸಿದರು. ಈ ವಿಚಾಗಳು ಜನಸಾಮಾನ್ಯರಿಗೆ ಕೂಡ ಒಳ್ಳೆಯವಾಗಿ ಆಚರಣೆಯಲ್ಲಿ ತರಲು ಹಗುರಾಗಿ ಕಂಡುವು ಅದರಲ್ಲಿಯೂ, ಭಗವಾನ್ ಬುದ್ಧ ದೇವರ ಉಪ ದೇಶದ ರೀತಿ ಬಲು ಮೋಹಕವಾಗಿದ್ದಿತು ಅದರಿಂದ ಬೌದ್ಧಧರ್ಮ ಮಿತಿ ಮೀರಿ ಬೆಳೆಯಿತು.

ಇದೇ ಹೊತ್ತಿಗೆ ಕಲಿಂಗ ಮಹಾಯುದ್ಧ ನಡೆಯಿತು. ಅದರಲ್ಲಿ ಅಶೋಕ ಚಕ್ರವರ್ತಿ ರಕ್ತದ ಸಾಗರವನ್ನೇ ನಿರ್ಮಿಸಿಬಿಟ್ಟ. ಈ ದುರಂತ ವನ್ನು ನೋಡಿ ಅಶೋಕರಾಜನ ಎದೆಯೊಡೆಯಿತು ! ಅವನು ಬೌದ್ಧದರ್ಮ ವನ್ನು ಸ್ವೀಕರಿಸಿದ; ಮತ್ತು ಹಲವಾರು ರೀತಿಗಳಿಂದ ಬುದ್ಧ ಮತವನ್ನು ಪ್ರಚಾರಮಾಡಿದರು. ಮುಂದೆ ಬಿಂಬಸಾರ ಮೊದಲಾದವರೂ ಈ ಪ್ರಣಾಲಿ ಯನ್ನು ಹಾಗೆಯೇ ನಡೆಸಿಕೊಂಡು ಬಂದರು; ಬೌದ್ಧ ಧರ್ಮ ಮಿತಿ ಮೀರಿ ಬೆಳೆಯಿತು

ಬರಬರುತ್ತ ಬೌದ್ಧ ಭಿಕ್ಷುಗಳ ಸಂಖ್ಯೆ ಅಳತೆಮೀರಿ ಬೆಳೆಯಿತು.

ಇದೇ ಸಮಯದಲ್ಲಿ ಸಿದ್ಧ ಮುನಿಗಳು ಉಜ್ಜಯಿನಿಯಲ್ಲಿದ್ದ ಬೋಧ ಕರನ್ನು ದಿಕ್ಕು ದಿಕ್ಕಿಗೆ ಕಳಿಸಿ ವೀರಶೈವ ಮತವನ್ನು ಬೆಳೆಸಿದರು. ಜನರಿಗೆ ಈ ತತ್ತ್ವಗಳು ಸುಲಭವಾಗಿಯೂ ಪವಿತ್ರವಾಗಿಯೂ ಕಂಡುದರಿಂದ ಬಹು ಜನರು ಶೈವದೀಕ್ಷೆಯನ್ನು ಹೊಂದಿದರು. ಹೀಗೆ ಸಿದ್ಧಮುನಿಗಳು ಇನ್ನೂರು ವರುಷಗಳ ವರೆಗೆ ಸದ್ಧರ್ಮ ಸಿಂಹಾಸನವನ್ನು ಆಳಿ ಅವನ್ನು ಶಿವ ಮುನೀಂದ್ರನಿಗೆ ಒಪ್ಪಿಸಿ ತಾವು ಲಿಂಗೈಕ್ಯರಾದರು.

ಈ ಹೊತ್ತಿಗೆ ಅಲ್ಲಲ್ಲಿ ಜಿನಮತವೂ ತಲೆಯೆತ್ತಿದ್ದಿತು. ಶಿವಮುನಿಗಳು ಜೈನ ತತ್ತ್ವಗಳನ್ನು ಖಂಡಿಸಿ ಶೈವ ತತ್ತ್ವಗಳನ್ನು ಮಂಡಿಸುವ ಕಾರ್ಯದಲ್ಲಿ ತೊಡಗಿದರು. ಈ ಹೊತ್ತಿಗೆ ನಾಗಾರ್ಜುನರು ಪೂವಲ್ಲಿಯಲ್ಲಿ ಅವತಾರ ಗೈದು ಚೈತನ್ಯಮುನಿಗೆ ಈ ವಿಚಾರವನ್ನು ತಿಳಿಸಿದರು. ಇವರಿಬ್ಬರೂ ಕೂಡಿಯೇ ಶಿವಮುನಿಗೆ ಸಾಹಾಯ್ಯಕವಾಗಿ ನಿಂತು ವೀರಶೈವ ಧರ್ಮವನ್ನು ಬಲವಾಗಿ ಬೆಡಗುಗೊಳಿಸಿದರು. ಹೀಗೆಯೇ ಶಿವಮುನಿಗಳು ಭಾರತದಲ್ಲಿ ಹಲವಾರು ಕಡೆಗಳಲ್ಲಿ ಶಿವಮತ ಧ್ವಜವನ್ನು ಎತ್ತಿ ಹಿಡಿದರು; ಸುಮಾರು ಒಂದುನೂರು ಇಪ್ಪತ್ತು ವರುಷಗಳ ವರೆಗೆ ಸದ್ಧರ್ಮ ಸಿಂಹಾಸನವನ್ನು ಆಳಿ

ದರು; ಕೊನೆಗೆ ಅದನ್ನು ಶಿಷ್ಯರಾದ ಶಾಂತಮುನಿಗಳಿಗೆ ಒಪ್ಪಿಸಿ ಶಿವೈಕ್ಯ ರಾದರು.

ಶಾಂತಮುನಿಯ ಈ ಅವತಾರ ಸಮಯದಲ್ಲಿ ಪರಶಿವನೇ ನೀಲಕಂಠ ಶಿವಾಚಾರ್ಯ ನಾಮದಿಂದ ಗೋಕರ್ಣದ ಮಹಾಬಲೇಶ್ವರ ಲಿಂಗದಿಂದ ಉದ್ಭವಿ ಸಿದನು; ಮತ್ತು ಶೈವ ವೈದಿಕ ಧರ್ಮಕ್ಕೆ ಮೀಪ್ತಿಯನ್ನು ಕೊಟ್ಟನು. ಈ ನೀಲ ಕಂಠ ಶಿವಾಚಾರ್ಯರು ನಾಲ್ಕು ವೇದಗಳಿಗೂ, ವೇದವ್ಯಾಸ ಸೂತ್ರಗಳಿಗೂ ಸತ್ಯ ಪೂರ್ಣವಾದ ಭಾಷ್ಯಗಳನ್ನು ಬರೆದರು; ಪ್ರಸ್ಥಾನತ್ರಯಗಳಿಗೆ ವ್ಯಾಖ್ಯಾನ ವನ್ನು ರಚಿಸಿದರು; ಮತ್ತು ಶಕ್ತಿ ವಿಶಿಷ್ಟಾದ್ವೈತ ಶ್ರೀ ವೀರಶೈವ ಮತದ ರಹಸ್ಯವನ್ನು ಸಂಗೋಪಾಂಗವಾಗಿ ಸಕಲರಿಗೂ ಶ್ರುತಪಡಿಸಿದರು.

ನೀಲಕಂಠ ಶಿವಾಚಾರ್ಯರು ರಾಷ್ಟ್ರಕೂಟ ರಾಜವಂಶಕ್ಕೆ ಧರ್ಮ ಗುರುಗ ಳಾಗಿದ್ದು ವೀರಶೈವ ಮತ ವರ್ಧನೆ ಮಾಡುತ್ತಿದ್ದರು ಆ ಬಳಿಕ ದೇವ ವರ್ಧಕಿ ವಿಶ್ವಕರ್ಮನಿಂದ ಗುಡ್ಡಗಳಲ್ಲಿಯೇ ಕೆಲವು ಗುಡಿಗಳನ್ನು ಕೊರೆಸಿ ದರು. ಅವುಗಳೊಳಗೆ ಘೃಷ್ಣೇಶ್ವರನ ಸನ್ನಿಧಿಯು ಮುಂಟಪದ ಮಧ್ಯ ಭಾಗದಲ್ಲಿ ಶ್ರೀ ನೀಲಕಂಠ ಲಿಂಗವನ್ನು ಸ್ಥಾಪಿಸಿದರು. ಈ ಲಿಂಗವನ್ನು ರಾಷ್ಟ್ರಕೂಟ ಭೂಪತಿಗಳು ಬಹು ಭಕ್ತಿಯಿಂದ ಪೂಜಿಸುತ್ತಿದ್ದರು.

ಶ್ರೀ ನೀಲಕಂಠ ಶಿವಾಚಾರ್ಯರಿಗೆ ಅಷ್ಟದಿಗ್ಗಜಗಳೆಂಬ ಹೆಸರಿನ ಘನ ವಿದ್ವಾಂಸರಾದ ಶಿಷ್ಯರಿದ್ದರು. ಅವರೆಲ್ಲರೊಡನೆ ಆಚಾರ್ಯರು ದಿಗ್ವಿಜಯ ಮಾಡಿ ಪರಮತ ವಿದ್ವಾಂಸರನ್ನು ಜಯಿಸಿ ಎಲ್ಲ ಕಡೆಗಳಲ್ಲಿಯೂ ಶೈವ ಮತ ವನ್ನು ಸ್ಥಾಪನ ಮಾಡಿದರು; ಶೈವ ಮಠಗಳನ್ನು ಸ್ಥಾಪಿಸಿದರು. ತಮ್ಮ ಶಿಷ್ಯ ರಲ್ಲಿ ಜಿಷ್ಣುನ ಗುರುವಿಗೆ ತಮ್ಮ ಉತ್ತರಾಧಿಕಾರದ ಪಟ್ಟವನ್ನು ಕಟ್ಟಿದರು. ಮತ್ತು ಗೋವಿಂದ ಪಂಡಿತರಿಗೆ ತಮ್ಮ ಶೈವಧರ್ಮದ ಬೀಜಮಂತ್ರವನ್ನು ಉಪದೇಶಿಸಿದರು; ಅಲ್ಲದೆ ಆದ್ಯ ಶಂಕರಾಚಾರ್ಯರ ಕುರುಹನ್ನು ತಿಳಿಸಿ ಅವರ ಮುಖಾಂತರ ಅದ್ವೈತ ತತ್ತ್ವವನ್ನು ಸರ್ವತ್ರ ಪ್ರಚಾರ ಪಡಿಸಬೇಕೆಂದೂ ಅಪ್ಪಣೆ ಮಾಡಿದರು. ಗುರು ಗೋವಿಂದ ಪಂಡಿತರ ಸಲುವಾಗಿ ನರ್ಮದಾ ನದಿಯ ತಟದಲ್ಲಿ ಶೈವಮಠ ಸ್ಥಾಪನೆಯಾಯಿತು. ಅಲ್ಲಿಯೇ ಆದ್ಯ ಶಂಕರಾ ಚಾರ್ಯರು ವಿದ್ಯಾರ್ಜನೆ ಮಾಡಿದರು; ಅಲ್ಲಿಂದಲೇ ಅದ್ವೈತಮತ ದಿಗ್ವಿಜಯಕ್ಕೆ ಪ್ರಯಾಣ ಮಾಡಿದರು

ಆ ದಿಗ್ವಿಜಯಾರಂಭದಲ್ಲಿ ಶುಭಾಶೀರ್ವಾದವನ್ನು ಪಡೆಯಲು ಆದ್ಯ ಶ್ರೀ ಶಂಕರಾಚಾರ್ಯರು ಶ್ರೀ ರೇವಣ ಸಿದ್ಧರನ್ನು ಸಂದರ್ಶಿಸಿದರು. ಗುರುಗಳು

ಪರಮಾನಂದದಿಂದ ಅವರಿಗೆ ಚಂದ್ರ ಮೌಳೀಶ್ವರ ಲಿಂಗವನ್ನೂ ರತ್ನೋದರ ಗಣೇಶಮೂರ್ತಿಯನ್ನೂ ಅನುಗ್ರಹಿಸಿದರು.

ಹೀಗೆ ಒಂದು ಕಡೆಯಿಂದ ಶಾಂತ ಮುನಿಗಳೂ ಮತ್ತೊಂದು ಕಡೆಯಿಂದ ಗೋವಿಂದ ಪಂಡಿತರೂ ಆದ್ಯ ಶಂಕರಾಚಾರ್ಯರೂ ಶೈವಮತವನ್ನು ಪ್ರಚಾರಗೊಳಿಸಿದರು. ಇವರೆಲ್ಲರ ಪ್ರಯತ್ನದ ಫಲವಾಗಿ ಬೌದ್ಧ ಜೈನ ಧರ್ಮಗಳು ಕಳೆಗುಂದಿದುವು. ವೈದಿಕ ಧರ್ಮ ಹೊಸರೂಪಗೊಂಡು ತಲೆಯೆತ್ತಿತು. ಇಲ್ಲಿಗೆ ಶಾಂತಮುನಿಗಳ ಎಪ್ಪತ್ತು ವರುಷಗಳ ಆಳಿಕೆ ಕೊನೆಗಂಡಿತು. ಈ ಶಾಂತಮುನಿಗಳ ತಪೋಭೂಮಿಯೊಂದು ಮೈಸೂರು ದೇಶದ ಶಿವಮೊಗ್ಗಾ ಜಿಲ್ಲೆ ಹೊನ್ನಾಳಿ ತಾಲೂಕು ತರಗನಹಳ್ಳಿ ಬಳಿಯಲ್ಲಿ ಈಗಲೂ ಮೆರೆಯುತ್ತಿದೆ. (ಸಂಪಾದಕ) ಅವರು ಭವಭೂತಿಮುನಿಗೆ ಪಟ್ಟ ಕಟ್ಟಿ ತಾವು ಶಿವೈಕ್ಯರಾದರು. ಉಜ್ಜಯಿನೀ ಗುರುಪರಂಪರೆಯಲ್ಲಿ ಭವಭೂತಿಮುನಿಗಳು ಆರನೆಯವರು.

ಭವಭೂತಿಮುನಿಗಳು ತಪಸ್ವಿಗಳಾಗಿದ್ದಂತೆ ದೊಡ್ಡ ಕವಿಗಳೂ ಆಗಿದ್ದರು. ಕಾಳಿದಾಸಾದಿ ಕವಿಗಳಿಂದಲೂ ಭೋಜರಾಜನಿಂದಲೂ ಮನ್ನಣೆಯನ್ನು ಪಡೆದಿದ್ದರು. ಈ ಮುನಿಗಳು ಒಂದುನೂರು ವರುಷ ಧರ್ಮ ಸಿಂಹಾಸನವನ್ನು ಪಾಲಿಸಿ 'ಇಮ್ಮಡಿ ಮುಕ್ತಿಮುನಿ' ಎಂಬ ಏಳನೆಯ ಗುರುವಿಗೆ ಪಟ್ಟವನ್ನು ಕಟ್ಟಿ ತಾವು ಶಿವೈಕ್ಯರಾದರು.

ಇಮ್ಮಡಿ ಮುಕ್ತಿಮುನಿಗಳು ಅಯ್ವತ್ತು ವರುಷಗಳ ವರೆಗೂ ಧರ್ಮ ಸಿಂಹಾಸನದೊಡೆಯರಾಗಿ ವೀರಶೈವ ಮತವನ್ನು ವಿಸ್ತರಿಸಿದರು. ಇವರ ತರುವಾಯ ಶಕ್ತಿಮುನಿಗಳೆಂಬ ಎಂಟನೆಯ ಗುರುಗಳು ಪಟ್ಟಕ್ಕೆ ಬಂದರು. ಇವರು ಸಾತ್ತ್ವಿಕ ಪರಂಯೋಗಿಗಳು. ಶಿವತತ್ತ್ವಪ್ರಸಾರದಲ್ಲಿ ಪರಮ ಕುಶಲರು. ಇನ್ನೂರು ವರುಷಗಳ ವರೆಗೆ ಈ ಮಹಾಗುರುಗಳು ಧರ್ಮಸಿಂಹಾಸನದಲ್ಲಿ ವಿರಾಜಿಸುತ್ತಿದ್ದರು. ಇವರಾದ ಮೇಲೆ ಇಮ್ಮಡಿ ಸಿದ್ಧ ಮುನಿಗಳು ಒಂಬತ್ತನೆಯ ಗುರುಸ್ಥಾನಕ್ಕೆ ಬಂದರು. ಇವರು ಬಾಲ ಲೀಲಾ ಮೂರ್ತಿಗಳು; ವಾಕ್ಸಿದ್ಧಿಯುಳ್ಳವರು. ಅದರಿಂದ ಭಕ್ತಸಮೂಹವೆಲ್ಲ ಇವರನ್ನು ಶಿವನ ಅವತಾರವೆಂದೇ ತಿಳಿದಿದ್ದಿತು. ಇವರ ಆಳಿಕೆ ನಾಲ್ವತ್ತು ವರುಷಗಳ ವರೆಗೆ ನಡೆಯಿತು. ಆ ಮೇಲೆ ಇಮ್ಮಡಿ ಶಾಂತಮುನಿಗಳು ಹತ್ತನೆಯ ಪಟ್ಟಕ್ಕೆ ಬಂದರು. ಇವರು ಆಚಾರ ವಿಚಾರ ಶುದ್ಧರು; ಕ್ರಿಯಾಸಿದ್ಧರು. ಈ ಕ್ರಿಯಾಸಿದ್ಧಿಯಿಂದಲೇ ಶೈವಮತವನ್ನು ನಿರಾಯಾಸವಾಗಿ ಪ್ರಸಾರ ಮಾಡಿದರು. ಇವರು ತೊಂಬತ್ತು ವರುಷಗಳ ತರುವಾಯ ಶಿವೈಕ್ಯರಾದರು. ಆ ಮೇಲೆ

**ಮುಮ್ಮಡಿ ಸಿದ್ಧಮುನೀಶರು** ಹನೆನ್ನೊಂದನೆಯ ಪೀಠಕ್ಕೆ ಬಂದರು. ಶ್ರೌತ ಮತವನ್ನು ನೀತಿ ಶಾಸ್ತ್ರದ ಜೊತೆಮಾಡಿ ಭೌತಿಕದಲ್ಲಿಯೂ ಅದರ ಉಪಯೋಗವನ್ನು ಭಕ್ತರಿಗೆ ಮನಗಾಣಿಸಿದ ಮಹಾತ್ಮರಿವರು. ಇವರ ಆಳಿಕೆ ಅಯ್ವತ್ತೈದು ವರುಷ ನಡೆಯಿತು. ಬಳಿಕ ಇವರ ಪ್ರೀತಿಯ ಶಿಷ್ಯರಾದ **ಸಾಂಬ ಮುನಿಗಳು** ಹನ್ನೆರಡನೆಯ ಪೀಠಾಧಿಕಾರಿಗಳಾದರು. ಇವರು ತಮ್ಮ ಆಳಿಕೆಯ ನೂರು ವರುಷಗಳಲ್ಲಿಯೂ ಶೈವ ಧರ್ಮಕ್ಕೆ ಸ್ವಲ್ಪವೂ ಚ್ಯುತಿ ಬಾರದಂತೆ ನೋಡಿಕೊಂಡರು. **ಇಮ್ಮಡಿ ಶಿವಮುನೀಂದ್ರರು** ಹದಿಮೂರನೆಯ ಗುರುಗಳಾಗಿ ಮುವ್ವತ್ತು ವರುಷಗಳ ವರೆಗೂ ಪೀಠದ ಪವಿತ್ರತೆಯನ್ನು ಕಾಯ್ದರು. ತದನಂತರ **ಈಶಾನ ಮುನಿಗಳು** ಹದಿನಾಲ್ಕನೆಯ ಗುರುಗಳಾಗಿ ಐವತ್ತೈದು ವರುಷ ಶಿವಮತಪ್ರಸಾರವಮಾಡಿದರು. ಆ ಕಾಲದಲ್ಲಿ ಜರುಗಿದ ಮಹತ್ವದ ಕಾರ್ಯಗಳೆಂದರೆ ಅಲ್ಲಲ್ಲಿ ಶಿವಮಂದಿರಗಳನ್ನು ಸ್ಥಾಪಿಸಿದುದು. ಇವರಾದ ಮೇಲೆ **ಶಂಭು ಮುನಿಗಳು** ಹದಿನೈದನೆಯ ಗುರುಪಟ್ಟಾಭಿಷಿಕ್ತರಾದರು. ಈ ಕಾಲದಲ್ಲಿ ಬಲವಾಗಿದ್ದ ಜೈನ ಮತ ಕಾರಣಾಂತರದಿಂದ ಪ್ರಬಲವಾಗಿದ್ದಿತು. ಅನೇಕ ಅರಸುಗಳು ಈ ಜೈನಧರ್ಮವನ್ನು ಅವಲಂಬಿಸಿದ್ದರು. ಎಂದಮೇಲೆ ರಾಜನಂತೆ ಪ್ರಜೆಗಳು ಎಂಬ ಹಾಗೆ ಪ್ರಜೆಗಳೂ ವೈದಿಕ ಧರ್ಮವನ್ನು ಬಿಟ್ಟು ಜೈನ ಮತವನ್ನು ದೊಡ್ಡ ಪ್ರಮಾಣದಿಂದ ಸ್ವೀಕರಿಸತೊಡಗಿದರು ಶಂಭುಮುನಿಗಳಿಗೆ ಈ ಮತಾಂತರಕ್ಕೆ ಪ್ರತೀಕಾರೋಪಾಯವೇನು ಎಂದು ಚಿಂತೆಯಾಯಿತು. ಮುನಿಗಳು ಭಕ್ತರ ಬಲದಿಂದ ದೊಡ್ಡ ಸೈನ್ಯವನ್ನು ಕೂಡಿಸಿ ಯುದ್ಧಸನ್ನಾಹವನ್ನೇ ನಡೆಸಿದರು.

ಈ ಕಾಲಕ್ಕೆ ಜೈನನಾದ ವಿ[illegible]ನರಾಜ ವೀರಶೈವ ಮತವನ್ನೇ ಸಮೂಲನಾಶ ಮಾಡಲು ಪಣತೊಟ್ಟಿದ್ದ. ಅವನಿಗೆ ಗುರುಗಳ ಈ ಯುದ್ಧ ಸಿದ್ಧತೆ ತಿಳಿಯಿತು. ಆಗ ಅವನು ಆ ಸೈನಿಕರಿಗೆ ಚಿತ್ರ ಹಿಂಸೆಕೊಡತೊಡಗಿದನು, ಶಂಭು ಮುನಿಗಳೂ ಸಿಟ್ಟಿಗೆದ್ದು ರಣಕಹಳೆಯನ್ನು ಊದಿಯೇ ಬಿಟ್ಟರು. ರಾಜನೂ ತನ್ನ ಸೇನೆಯನ್ನು ತೆಗೆದುಕೊಂಡು ಗುರುಮಠವನ್ನು ಮುತ್ತಿಂಪೀಬಿಟ್ಟ. ಇಬ್ಬರ ನಡುವೆ ತುಮುಲಯುದ್ಧ ನಡೆಯಿತು. ಆದರೆ ದೈವಿಕ ತೇಜವಿದಿರಿಗೆ ತಾಮಸವೆಷ್ಟು ಹೊತ್ತು ತಡೆದೀತು ? ರಾಜನ ಸೇನಾನಿಗಳೆಲ್ಲ ನೊಣದಂತೆ ಪಟಪಟ ಬಿದ್ದು ಸಾಯುತೊಡಗಿದರು ಈ ಹಿಂಸೆಯನ್ನು ನೋಡಲು ಮುನಿಗಳ ಹಣ್ಣೆದೆಗೆ ತಡೆಯುಲಿಲ್ಲ ಅವರು ಯುದ್ಧವನ್ನು ನಿಲ್ಲಿಸಿದರು: ಮತ್ತು ಶಾಂತ ರೀತಿಯಿಂದಿರಲು ರಾಜನಿಗೆ ಹೇಳಿ ಕಳುಹಿದರು.

ಆದರೆ ದಾನವ ಕ್ಷಾತ್ರವೃತ್ತಿಗೆ ಇದು ಸರಿಬರಲಿಲ್ಲ ರಾಜ ಮತ್ತೆ ಹೊಸ ಸೈನ್ಯವನ್ನು ಕಲೆ ಹಾಕಿದ; ರಣ ಭೇರಿಯನ್ನು ಹೊಯ್ಸಿದ. ಆ

ಮೇಲೆ ಶಂಭುಮುನಿಗಳೂ ತಾವಾಗಿಯೇ ಸೈನ್ಯ ಸಮೇತ ಹೋಗಿ ಅರಮನೆಯನ್ನು ಮುತ್ತಿದರು. ಸ್ವತಃ ತಾವೇ ವೀರ ಶ್ರೀವಾಕ್ಯಗಳಿಂದ ಸೈನಿಕರನ್ನು ಹುರಿಗೊಳಿಸತೊಡಗಿದರು. ಹಾ ಹಾ ಎನುವಷ್ಟರಲ್ಲಿ ರಾಜನ ಸೈನ್ಯ ಕಣ್ಣಿಗೆ ಕಾಣದಂತೆ ಭೂಮಿಗೊರಗಿತು. ಶಂಭು ಮುನಿಗಳಿಗೆ ಜಯಶ್ರೀ ಮಾಲೆ ಮುಡಿಸಿದಳು. ಆದರೆ ಇದರಿಂದ ಮುನಿಗಳಿಗೆ ಆನಂದವಾಯಿತೇ ? ಈ ಕೆನ್ನೀರನ್ನು ಸುರಿಸುವುದರಲ್ಲಿಯೇ ಸಾತ್ತ್ವಿಕರು ಕಾಲಕಳೆಯುವುದು ಹೇಗೆ ? ಅದಕ್ಕಾಗಿ ಗುರುಗಳು ಯುದ್ಧ ಮುಗಿಯುತ್ತಲೇ ಶಿಷ್ಯಗಣ ಸಮೇತವಾಗಿ ಉಜ್ಜಯಿನಿಯನ್ನು ಬಿಟ್ಟು ಕಾಡಿನ ಹಾದಿಯನ್ನು ಹಿಡಿದರು ! ಅಲ್ಲಿ ಋಷ್ಯಾಶ್ರಮಕ್ಕೆ ತಕ್ಕದಾದ ಪ್ರದೇಶವನ್ನು ಹುಡುಕಿ ಪರ್ಣಶಾಲೆಯನ್ನು ಕಟ್ಟಿಕೊಂಡು ಶಿಷ್ಯಗಣ ಸಮೇತರಾಗಿ ಇರತೊಡಗಿದರು. ಅಲ್ಲಿ ಕೆಲ ದಿನ ನೆಮ್ಮದಿಯಿಂದ ಇರುತ್ತಿರಲು ಗುರುಗಳ ಎಪ್ಪತ್ತು ವರುಷಗಳ ಆಳಿಕೆ ಮುಗಿಯಿತು. ಆ ಮೇಲೆ ಅವರು ಶಿಷ್ಯ ಸರ್ವೋತ್ತಮರಾದ ಶ್ರೀ **ಮರುಳಸಿದ್ಧಾರಾಧ್ಯರಿಗೆ ಹದಿನಾರನೆಯ ಪಟ್ಟ ಕಟ್ಟಿ ತಾವು ಶಿವೈಕ್ಯರಾದರು.**

ಮರುಳಸಿದ್ಧರು ಪಟ್ಟಕ್ಕೆ ಬರುತ್ತಲೇ ಕುಟಿಲನಾದ ವೀರಸೇನರಾಜ ಆ ಆಶ್ರಮಕ್ಕೂ ದಾಳಿಯಿಟ್ಟ. ಶಾಂತಿಪ್ರಧಾನರಾದ ಗುರುಗಳು ಈ ತಾಮಸ ವೃತ್ತಿಗೆ ಹೇಸಿ ಮುಂದಕ್ಕೆ ಪಯಣ ಬೆಳೆಸಿ ಶಿಷ್ಯಗಣ ಸಹಿತ ಪರಳಿಗ್ರಾಮಕ್ಕೆ ಬಂದರು. ಅಲ್ಲಿ ವೈದ್ಯನಾಥ ಜ್ಯೋತಿರ್ಲಿಂಗವಿದ್ದಿತು. ಶ್ರೀ ಮರುಳಸಿದ್ಧರು ಪರಮಾನಂದದಿಂದ ಶಿವಲಿಂಗವನ್ನರ್ಚಿಸಿದರು. ವೈದ್ಯನಾಥ ಆ ಪೂಜೆಯನ್ನು ಮೆಚ್ಚಿ ಪ್ರತ್ಯಕ್ಷನಾದನು; ಮತ್ತು – ನಿನ್ನ ಬಯಕೆಯನ್ನ ತಿಳಿದಿರುವೆ. ನೀನು ಇನ್ನು ತಡಮಾಡಬೇಡ; ಶ್ರೀ ರೇವಣಸಿದ್ಧರ ಸನ್ನಿಧಾನಕ್ಕೆ ಹೋಗು. ನಿನ್ನ ಸರ್ವ ಇಚ್ಛೆಗಳೂ ಈಡೇರುವುವು—ಎಂದು ಅಭಯವನ್ನು ನೀಡಿದ-ಅದರಂತೆ ಶ್ರೀ ಮರುಳಸಿದ್ಧರು ಶಿಷ್ಯರನೊಡಗೊಂಡು ಸಿದ್ಧಗಿರಿಯಲ್ಲಿ ವಾಸ ಮಾಡಿರುವ ಶ್ರೀ ರೇವಣಸಿದ್ಧರ ಸಂದರ್ಶನಕ್ಕೆ ಪ್ರಯಾಣ ಬೆಳೆಸಲು ನಿಶ್ಚಯಿಸಿದರು.

## ಹದಿಮೂರನೆಯ ಸಂಧಿ
## ರೇವಣಸಿದ್ಧ ಸಂದರ್ಶನ

ಶ್ರೀ ವೈದ್ಯನಾಥನ ಸನ್ನಿಧಿಯಲ್ಲಿ ಉಗ್ರ ತಪಗೆಯ್ಯುತ್ತಿದ್ದಾಗ ಮರುಳಸಿದ್ಧರ ಜೀವನದಲ್ಲಿ ಏನೋ ಒಂದು ಹೊಸ ಅನುಭೂತಿಯುಂಟಾಯಿತು. ಅವರಿಗೆ ಈ ಜಗತ್ತೆಲ್ಲ ಲೀಲಾಮಯವಾಗಿ-ಶಿವಮಯವಾಗಿ-ಎಲ್ಲೆಲ್ಲಿಯೂ ಆನಂದವೇ ತೋರತೊಡಗಿತು. ಅವರ ದಿನಚರಿಯೆಲ್ಲ ಹುಚ್ಚರ ಆಟಗಳಂತೆ

ತೋರಹತ್ತಿದುವು. ಅದಕ್ಕಾಗಿ ಜನರು ಅವರನ್ನು 'ಮರುಳ' ನೆಂದೇ ತಿಳಿಯ ಹತ್ತಿದರು; ಆದರೆ ವಾಕ್ಸಿದ್ಧಿ-ಕ್ರಿಯಾಸಿದ್ಧಿಗಳು ಅಲೌಕಿಕವಾಗಿದ್ದುದರಿಂದ ಜನರೆಲ್ಲ ಭಕ್ತಿ ಭಾವದಿಂದಲೇ ನಡೆಕೊಳ್ಳುತ್ತಿದ್ದರು. ಹೀಗೆಯೇ ಲೀಲಾ ಜೀವನವನ್ನು ನಡೆಸುತ್ತ ಶ್ರೀ ಮರುಳಸಿದ್ಧರು ಕರವೀರಪುರದ ನೆರೆಯಲ್ಲಿರುವ ಸಿದ್ಧ ಗಿರಿಯಲ್ಲಿ ವಾಸವಾಗಿದ್ದ ಶ್ರೀ ರೇವಣಸಿದ್ಧರ ಸನ್ನಿಧಿಯನ್ನು ಸಮೀಪಿಸಿದರು.

ಆಗ ಬೆಟ್ಟ ಬೇಸಗೆಯ ಬಿಸಿಲು. ಸೂರ್ಯನ ಪ್ರಖರ ಕಿರಣಗಳು ಭುವನದ ಮೇಲೆ ಬೆಂಕಿಯನ್ನು ಸುರಿದಂತೆ ಬೀಳುತ್ತಿದ್ದುವು. ಆದರೆ ಋಷಿಮುನಿಗಳಿದ್ದಲ್ಲಿ ಬೆಂಕಿಯ ಬಿಸಿಗೆ ಆಸ್ಪದವೆಲ್ಲಿ! ಅಲ್ಲಿ ಶಾಂತಿಯೇ-ಶೀತವೇ-ತಾನೇ ತಾನಾಗಿರಬೇಕಲ್ಲವೇ! ಅದರ ಪ್ರತೀಕವೆಂಬಂತೆ ಗಿರಿಯ ಸುತ್ತಲೂ ದಟ್ಟೈಸಿತವಾಗಿ ಮುಗಿಲನ್ನು ಮುಟ್ಟುವಂತೆ ಬೆಳೆದ ಮರಗಳು ಸೂರ್ಯಕಿರಣಗಳನ್ನು ಭೂಮಿಗೆ ಬರಗೊಡುತ್ತಲೇ ಇರಲಿಲ್ಲ ಭೂದೇವಿ ಬಿಸಲತಾಪವನ್ನು ಕಳೆಯುವುದಕ್ಕೆ ಕೈಯಲ್ಲಿ ಹಿಡಿದ ಕೊಡೆಯಂತೆ ಮಾವಿನ ತೋಪು ಮನೋಹರವಾಗಿದ್ದುವು. ಆ ಘನಸಿಬಿಡ ವೃಕ್ಷರಾಜಿಯ ಮಧ್ಯದಲ್ಲಿ ದೇವಸಿಲಯದ ಕುಸುಮೋದ್ಯಾನ ಕಂಗೊಳಿಸುತ್ತಿದ್ದಿತು ಆ ತಾವರೆಗಳ ತಟಾಕ, ವಿಹಗಾವಳಿಯಿಂದ ವಿರಾಜಿಸುವ ಗುರುಮರ, ಪಾವನ ತೀರ್ಥಗಳ ಕೂಟ, ಭಾವುಕರ ಬಗೆವೊಲಿಸುವ ಮಾಟ, ಭಕ್ತರ ಜನಪದಾಟಗಳು ದಾರಿಯ ದಣಿವನ್ನು ದೂರೀಕರಿಸುತಿದ್ದವು.

ಆ ವನ ಗಿಳಿಗಳ ಭೋಜನಶಾಲೆಯಂತೆಯೂ ಅಳಿಗಳ ಪಿಕಗಳ ಶಾಲೆಯಂತೆಯೂ ಕಾಮದೇವನ ಆಯುಧಶಾಲೆಯಂತೆಯೂ ಮಂದಾನಿಲನಿಗೆ ನಾಟಕ ಶಾಲೆಯಂತೆಯೂ ಚೈತ್ರರಾಜನಿಗೆ ವಿಲಾಸಶಾಲೆಯಂತೆಯೂ ವಿರಾಜಿಸುತ್ತಿದ್ದಿತು. ಇಂತಹ ರಮ್ಯವಾದ ವನವಲ್ಲಿ ಸಿದ್ಧ ಸಾಧುಗಳಿಗೆ ಸ್ಥಿರವಾಸವೆನಿಸಿದ ಪರಮತೀರ್ಥ ಪರಿವೃತ ಸಿದ್ಧಗಿರಿ ಶೋಭಿಸುತ್ತಿದ್ದಿತು. ಆ ಸಿದ್ಧಗಿರಿಯಲ್ಲಿ ಪರಶಿವಯೋಗಿಗಳಿಗೆ ಭವವಿರಾಗಿಗಳಿಗೆ-ಸಿದ್ಧರಿಗೆ-ತ್ಯಾಗಿಗಳಿಗೆ-ಅನುಭಾವಿಗಳಿಗೆ ಆಧಾರ ಸ್ಥಾನವಾಗಿ ಗುರುಮಠ ಮೆರೆಯುತ್ತಿದ್ದಿತು. ಅದರ ಇದಿರಿನಲ್ಲಿಯೇ ಬಗೆಬಗೆಯ ತರುಗಳಿಂದಲೂ ಮಲ್ಲಿಕಾ ಮೊದಲಾದ ಬಳ್ಳಿಗಳಿಂದಲೂ ನಿಬಿಡವಾದ ತರುಗಳ ಮಧ್ಯದಲ್ಲಿ ಬಿಲ್ವವೃಕ್ಷವಿದ್ದಿತು ಅದರ ಪ್ರಚ್ಛಾಯದಲ್ಲಿ ವೇದಿಕೆಯೊಂದು ವಿರಾಜಮಾನವಾಗಿದ್ದಿತು. ಶುದ್ಧ ಚಂದ್ರಕಾಂತ ಶಿಲೆಯಲ್ಲಿ ಚಿತ್ರವಿಚಿತ್ರ ಕುಸುರಿನ ಕೆಲಸಗಳಿಂದ ಒಪ್ಪುವ ವೇದಿಕೆ ಶಿವನ ಸಿಂಹಾಸನದಂತೆ ಶೋಭಾಯಮಾನವಾಗಿತ್ತು. ಆ ಆನಂದಮಯ ಆಸನದ ಮೇಲೆ ಶ್ರೀ ರೇವಣಸಿದ್ಧರು ವಿರಾಜಮಾನರಾಗಿ

ದ್ದರು. ಮೂರ್ಛಾಯಾಸದಿಂದ ಬಳಲಿದ ಮರುಳಸಿದ್ಧರಿಗೆ ಗುರುಗಳ ದರ್ಶನ ದಿಂದ ತಬ್ಬಲಿಗೆ ತಾಯನ್ನು ಕಂಡಂತಾಯಿತು. ಕೂಡಲೆ ಅವರು ಕರುಣಾ ಕರ ಗುರುವೇ ಎಂದು ನುತಿಸುತ್ತ ಗುರುವಿಗೆ ಪೊಡಮಟ್ಟರು, ಕೂಡಲೆ ಶ್ರೀ ರೇವಣಸಿದ್ಧರು ಮರುಳ ಸಿದ್ಧರನ್ನು ಎತ್ತಿ ಅಪ್ಪಿಕೊಂಡರು. ಶಿಷ್ಯರೆಲ್ಲರೂ ಆಶ್ಚರ್ಯಚಕಿತರಾಗಿ ಅವಲೋಕಿಸತೊಡಗಿದರು. ಮತ್ತು ತಮ್ಮ ಗುರುಗಳು ಹೀಗೆ ಸನ್ಮಾನ ಮಾಡುವುದನ್ನು ಕಂಡು, ಅವರು ಯಾರೋ ಮಹಾತ್ಮರಿರಬೇ ಕೆಂದು ಶಿಷ್ಯರೆಲ್ಲ ಮರುಳ ಸಿದ್ಧರನ್ನು ವಂದಿಸಿದರು. ಜಯ ಜಯ ಎಂದು ಸ್ತುತಿ ಮಾಡಿದರು. ಆ ಮೇಲೆ ಯತಿಗಳಿಬ್ಬರೂ ಆಸನದಲ್ಲಿ ಕುಳಿತರು. ಮೊದಲಿಗೆ ಕುಶಲ ಪ್ರಶ್ನಗಳು ನಡೆದುವು ಬಳಿಕ ರೇವಣಸಿದ್ಧರು- ಮರುಳ ಸಿದ್ಧಯೋಗಿಗಳೇ ಇಲ್ಲಿಗೆ ದಯಮಾಡಿಸಲು ಕಾರಣವೇನು? ಎಂದು ಕೇಳಿ ದರು; ಆಗ ಮರುಳಸಿದ್ಧರು- ಗುರುವೇ, ಪರಶಿವ ಸ್ವರೂಪವೇ, ತಮಗೆ ತಿಳಿಯದುದು ಯಾವುದಿದೆ? ನನ್ನ ಗುರುವಿಗೆ ಉಜ್ಜಯಿನೀ ಮಹಾಕ್ಷೇತ್ರ ದಲ್ಲಿ ವೀರಸೇನ ಜೈನ ರಾಜನಿಂದ ಅತೀವ ಉಪದ್ರವವಾಯಿತು. ತಪೋನಿಧಿ ಗಳಾದ ಗುರುಗಳಿಗೂ ರಾಜನಿಗೂ ಆದ ಆ ಯುದ್ಧದಲ್ಲಿ ಜೈನರಾಜ ಸೋತ; ಅದರೂ ಆ ಮದಾಂಧನ ಹಟ ಕಡಮೆಯಾಗಲಿಲ್ಲ. ಕಡೆಗೆ ಸಾತ್ವಿಕ ತಪೋ ನಿಧಿಗಳಾದ ಗುರುಗಳು ಧರ್ಮವೀರವನ್ನೇ ದೂರಮಾಡಿ ಶಿಷ್ಯರೊಡನೆ ಕಾಡಿನಲ್ಲಿ ವಾಸ ಮಾಡಿದರು. ಅಲ್ಲಿ ಅವರ ಅವಸಾನಕಾಲ ಪ್ರಾಪ್ತವಾಯಿತು. ಆಗ ಅವರು ನನ್ನನ್ನು ಸದ್ಧರ್ಮ ಪೀಠದ ಉತ್ತರಾಧಿಕಾರಿಯನ್ನು ಮಾಡಿದರು. ಶಿವೈ ಕ್ಯರಾದರು. ನಾನು ಉಳಿದ ಶಿಷ್ಯಗಣ ಸಮೇತನಾಗಿ ಕಾಡಿನಲ್ಲಿಯೇ ಕಾಲ ಕಳೆಯುತ್ತಿದ್ದೆ. ಆದರೆ ಆ ಮದಾಂಧ ವೀರಸೇನ ಅಲ್ಲಿಗೂ ದಾಳಿಯನ್ನಿಟ್ಟ! ಆ ಮೇಲೆ ನಾವು ಶಾಂತಿತತ್ತ್ವದಿಂದ ದೂರವಾಗಬಾರದೆಂದು ಆ ಸ್ಥಳವನ್ನು ಬಿಟ್ಟೆವು; ಪರಳಿಯ ವೈದ್ಯನಾಥ ಲಿಂಗಮೂರ್ತಿಯ ಸನ್ನಿಧಾನವನ್ನು ಸೇರಿದೆವು. ಅಲ್ಲಿ ಕೆಲದಿನ ಪೂಜಾಸಕ್ತರಾಗಿರಲು ಲಿಂಗ ಮೂರ್ತಿ ಪ್ರಸನ್ನವಾಗಿ ತಮ್ಮಲ್ಲಿಗೆ ಹೋಗಲು ಅಪ್ಪಣೆ ಮಾಡಿತು. ಅದರಂತೆ ಶಿಷ್ಯಗಣ ಸಹಿತನಾಗಿ ಇಲ್ಲಿಗೆ ಬಂದಿರುವೆ. ಇನ್ನು ಮುಂದೆ ನನ್ನ ಕರ್ತವ್ಯದ ಹಾದಿ ಯಾವುದು, ಶೈವಧರ್ಮೋ ನ್ನತಿಗೆ ನಾನು ಮಾಡತಕ್ಕುದೇನು ಮುಂತಾದ ವಿಚಾರಗಳನ್ನು ಅರುಹಬೇ ಕೆಂಬುದಿಷ್ಟೇ ಬಗೆಯ ಬಯಕೆ! ಗುರುದೇವ ನನ್ನಲ್ಲಿಟ್ಟ ವಿಶ್ವಾಸಕ್ಕೆ ಚ್ಯುತಿ ಬಾರದು; ಸದ್ಧರ್ಮ ಪೀಠದ ಗುರುಪರಂಪರೆಗೆ ಕೊರತೆಯಾಗಬಾರದು, ಎಂಬ ಬಗೆಗೆ ಏನು ಮಾಡಲೂ ಸಿದ್ಧನಿರುವೆ, ಎಂದು ಹೇಳಿ ಸುಮ್ಮನಾದರು.

ಶ್ರೀ ರೇವಣರು ಕೆಲಹೊತ್ತು ಧ್ಯಾನಾಸಕ್ತರಾಗಿ ಆ ಮೇಲೆ ಮಾತ ನಾಡ ತೊಡಗಿದರು—ಮರುಳಸಿದ್ಧರೇ, ನಿಮ್ಮ ಮನದಿಂಗಿತ ಮನವರಿಕೆ ಯಾಯಿತು. ನಿಮ್ಮ ತಪಶ್ಶಕ್ತಿಗೆ ಅಸಾಧ್ಯವಾದುದೇನೂ ಇಲ. ಆದರೆ

ಅದಕ್ಕೆ ಕೆಲವೊಂದು ಕಾಲ ಬೇಕು. ಈಗ ಖಿಲವಾದ ಶಿವಮತ ನಿಮ್ಮ ದಿವ್ಯಶಕ್ತಿಯಿಂದ ದೇದೀಪ್ಯಮಾನವಾಗಿ ಬೆಳಗುವುದು. ಅದಕ್ಕಾಗಿ ನೀವು ಕಲ್ಯಾಣದ ದೊರೆಯಲ್ಲಿ ಹೋಗಿ ಆತನಿಂದ ಸನ್ಮಾನವನ್ನು ಪಡೆಯ ಬೇಕು; ಮತ್ತು ಹೊಸ ಉಜ್ಜಯಿನಿಯನ್ನು ನಿರ್ಮಿಸಿ ಸದ್ಧರ್ಮ ಸಿಂಹಪೀಠ ವನ್ನು ಮುಂದೆ ಸಾಗಿಸಬೇಕು. ಅದಕ್ಕೆ ನೀವೇ ಮೊದಲನೆಯ ಗುರುಗಳಾ ಗುವುದಕ್ಕೆ ನಮ್ಮ ಅನುಗ್ರಹವಿದೆ.

ಆದರೆ ಇಷ್ಟೆಲ್ಲ ಕೆಲಸಗಳಾಗುವ ಮೊದಲು ನಿಮ್ಮ ದಿವ್ಯ ಪ್ರಭೆ ಜಗತ್ತಿಗೇ ತಿಳಿಯಬೇಕು. ಅದಕ್ಕಾಗಿ ನೀವು ಈ ಭಾಗದಲ್ಲಿ ಮಲೆತು ನಿಂತಿ ರುವ ಕೊಲ್ಲಾಪುರದ ಮಾಯೆಯ ಗರ್ವಭಂಗಮಾಡಬೇಕು. ಅವಳ ಉಪದ್ರ ವದಿಂದ ಸುತ್ತಲಿನ ಪ್ರದೇಶವೆಲ್ಲ ಭಯಭೀತವಾಗಿದೆ, ಅನಾಚಾರಮಯ ವಾಗಿದೆ. ಅವಳನ್ನು ಜಯಿಸುವುದು ನಿಮ್ಮ ತಪಃ ಸಿದ್ಧಿಗೆ ಅತಿ ಸುಲಭ ಕಾರ್ಯ. ಅದಕ್ಕೆ ಅನುಕೂಲವಾಗಿ ನಾವೂ ನಿಮಗೆ ಚಿತ್ಪ್ರಭೆಯನ್ನು ಅನುಗ್ರಹಿಸುವೆವು. ಈಗ ನೀವು ನೇರವಾಗಿ ಕೊಲ್ಲಾಪುರಕ್ಕೆ ಹೋಗಬೇಕು. ಆ ಕೆಲಸ ಮುಗಿದ ಮೇಲೆ ಉಜ್ಜಯಿನೀ ಪೀಠದ ಕೆಲಸ ಸುಖಸಾಧ್ಯವಾಗುವುದು. ನಿಮಗೆ ಭಕ್ತರ ಸಂಖ್ಯೆ-ಪರಂಪರೆಗಳೂ ಬೆಳೆಯುವುವು. ಹಿಂದೆ ನೀಲಕಂಠ ಶಿವಾ ಚಾರ್ಯರು ಜೈನರನ್ನು ಪಂಚಮುಸಾಲಿ ದೀಕ್ಷೆಯಲಿ ತಕ್ಕೊಂಡು ಶಿಷ್ಯಗಣವನ್ನು ಬೆಳೆಸಿದಂತೆ, ನಾವು ಜೈನರನ್ನು ಶೀಲವಂತ ಶೈವರನ್ನು ಮಾಡಿಕೊಂಡಂತೆ, ನೀವೂ ಜೈನರಿಗೇ ದೀಕ್ಷೆಯನ್ನು ಕೊಟ್ಟು ಶಿಷ್ಯಗಣವನ್ನು ಬೆಳೆಸಲು ಹಗುರಾ ಗುವುದು ಜೈನ ಧರ್ಮದ ಆಚಾರ ವಿಚಾರಗಳೂ ಒಳ್ಳೆಯವಾಗಿಯೇ ಇವೆ. ಅವರನ್ನು ಈ ಧರ್ಮದಲ್ಲಿ ತಕ್ಕೊಂಡರೆ ಆಚಾರ ವಿಚಾರಗಳನ್ನು ತಿದ್ದುವ ಹೆಚ್ಚಿನ ಹೊಣೆಗಾರಿಕೆ ಬೀಳುವುದಿಲ್ಲ. ಅವರನ್ನು ಮತ್ತೆ ಉಳಿದ ಜೈನರನ್ನು ನಿಮ್ಮ ತತ್ತ್ವಗಳ ಬಲದಿಂದ ವೀರಶೈವ ಧರ್ಮಕ್ಕೆ ಸೇರಿಸಿಕೊಳ್ಳಬೇಕಾಗುವುದು. ನೀವು ಬೇರೆ ಏನೂ ವಿಚಾರ ಮಾಡದೆ ಕೊಲ್ಲಾಪುರಕ್ಕೆ ತೆರಳಿರಿ. ಅಲ್ಲಿ ಮಾಯೆಯ ಗರ್ವಭಂಗಮಾಡಿ ವಿಜಯಶಾಲಿಗಳಾಗಿ ಬನ್ನಿರಿ. ಈ ಬಗ್ಗೆ ನಾವು ಚಿತ್ಪ್ರಭೆಯನ್ನು ಅನುಗ್ರಹಿಸುವೆವು; ಶುಭಾಶಿಷವನ್ನು ಕೊಡುವೆವು.

ಶ್ರೀ ರೇವಣಸಿದ್ಧರ ಅಮೃತವಾಣಿಯನ್ನು ಕೇಳಿ ಶ್ರೀ ಮರುಳಸಿದ್ಧರು ಕೊಲ್ಲಾಪುರಕ್ಕೆ ಹೊರಡಲನುವಾದರು.

ಆ ಕೊಲ್ಲಾಪುರದ ಆ ಸಮಂತಾತ್ ಪ್ರದೇಶವೆಲ್ಲ ಮಾಯಾದೇವಿಯ ಹೃದಯದಂತೆ ಮಾಯಾಮೋಹವಾಗಿಯೇ ತೋರುತ್ತಿದ್ದಿತು. ಆ ನಗರದ ಪೂರ್ವದಲ್ಲಿರುವ ಮಾಯಾದೇವಿಯ ಉಪವನವೆಷ್ಟು ರಮಣೀಯ. ಕಾಮ ಕೇಳಿಗೆ ಕೈಮಾಡಿ ಕರೆಯುತ್ತಿರುವ ಬಗೆಬಗೆಯ ಪಕ್ಷಿಗಳ ಕಲಕಲಾಟದಿಂದ

ನೋಟಕರನ್ನು ಕಟಿದ ಕಲ್ಲುಗೊಂಬೆಯನ್ನು ಮಾಡುತ್ತಿದ್ದಿತು. ಅಳಿಗಳೇ ಇಂದ್ರನೀಲಮಣಿಗಳಾಗಿ ತಳಿರುಗಳೇ ಹವಳಗಳಾಗಿ ಹಸಿರು ಮಿಡಿಗಳೇ ಪಚ್ಚೆಗಳಾಗಿ ಮಲ್ಲಿಗೆಯ ಮೊಗ್ಗುಗಳೇ ಮುತ್ತುಗಳಾಗಿ ನವನಲಿನಗಳೇ ಮಾಣಿಕಗಳಾಗಿ ಆ ಕಾನನವೆಲ್ಲ ಕಾಮದೇವನ ಭಾಂಡಾರದಂತೆ ಭವ್ಯವಾಗಿತ್ತು. ಅದರ ಸೌಂದರ್ಯಕ್ಕೆ ಸೋತುಹೋಗಿ ಸಹಸ್ರಾರು ಸಿದ್ಧರು ಮಾಯೆಯ ಮರುಳು ಬಡಿದಂತೆ ಬಿದ್ದುಕೊಂಡಿದ್ದರು. ಅವರನ್ನು ಕಂಡು ಮರುಳಸಿದ್ಧರಿಗೆ ಕನಿಕರ ಹುಟ್ಟಿತು. ಆ ವಿಷಯಲೋಲುಪತೆಯ ವಿಜಯ ಮರುಳಸಿದ್ಧರಲ್ಲಿ ಮರುಕವನ್ನು ಹುಟ್ಟಿಸಿತು. ಅವರು ಅಲ್ಲಿಯೇ ಮಲ್ಲಿಕಾವಲ್ಲೀವೃತವಾದ ಮಾಮರದ ಅಡಿಯಲ್ಲಿ ಅಂದವಾಗಿರುವ ಆಸನದಲ್ಲಿ ಆಸೀನರಾದರು. ಆ ತೇಜಃಪುಂಜವಾದ ಕಾಯಕಾಂತಿ, ಚಂದ್ರಮನನ್ನು ಹಾಸಗೆಯ್ಯುತ್ತಿರುವ ಮುಖಚಂದ್ರ, ಅರಳಿದ ಇಂದೀವರಗಳಂತಿರುವ ನಯನ ಯುಗ್ಮ, ದಾಳಿಂಬ ಬೀಜದಂತಹ ದಂತಪಕ್ತಿ, ಚಂಪಕಕುಟ್ಮಲದಂತೆ ಸೇಢವಾದ ನಾಶಿಕ ಇವುಗಳನ್ನು ಕಂಡು ಅಲ್ಲಿಯ ಸಿದ್ಧರೆಲ್ಲ ಮರುಳ-ಸಿದ್ಧರಾದರು; ಯುವತಿಯರು ವಿರಹದಿಂದ ತಪಿಸಹತ್ತಿದರು. ಆದರೆ ಮರುಳಸಿದ್ಧ ನಿಶ್ಚಲಯೋಗಿಯಂತೆ ಕುಳಿತುಬಿಟ್ಟಿದ್ದರು. ಕೊನೆಗೆ ವಿಲಾಸಿನಿಯರು ವಿರಹಾಗ್ನಿಯಲ್ಲಿ ಬೇಯುತ್ತಲೇ ಈ ವಿಚಾರವನ್ನು ತಮ್ಮ ಒಡತಿ ಮಾಯಾದೇವಿಗೆ ಮುಟ್ಟಿಸಲು ಮರಳಿದರು. ಕೂಡಲೇ ಮರುಳಸಿದ್ಧರು ಸ್ನಾನಮಾಡಿ ಬಿಲ್ವವೃಕ್ಷದ ತಳದಲ್ಲಿಯೇ ಶಿವಾರ್ಚನೆಗೆ ಕುಳಿತರು.

## ಹದಿನಾಲ್ಕನೆಯ ಸಂಧಿ
## ಮಾಯಾಮರ್ದನ

ಮಾಯಾಮರ್ದನಕ್ಕಾಗಿ ಶ್ರೀ ಮರುಳಸಿದ್ಧರು ಕೊಲ್ಲಾಪುರದತ್ತ ದಯ್ಯಮಾಡಿಸಿದರು. ಆ ಮಾಯೆಯ ವೈಭವ ಸಾಮ್ರಾಜ್ಯ ಸಾಂಸಾರಿಕರನ್ನು ದಿಙ್ಮೂಢ ಮಾಡುವಂತಿತ್ತು. ಆ ಬಣ್ಣ ಬಣ್ಣದ ಗೋಡೆಗಳೋ ಚಿನ್ನದ ಒಪ್ಪವೋ ರನ್ನದ ಮೇಲ್ಕಟ್ಟೋ ನವರತ್ನಖಚಿತವಾದ ಶಿಖರಗಳೋ ವೃಕ್ಷಲತಾಪೂರ್ಣವಾದ ರಮಣೀಯವಾದ ಉಪವನವೋ! ಎಲ್ಲವೂ ಮಾಯಾಮಯವೇ. ಸ್ತ್ರೀಯರೂ ಇದ್ದರು. ಗಾನ-ನರ್ತನ-ಪಾನ ಮುಂತಾಗಿ ವಿಲಾಸಗಳಿಗಾಗಿಯೇ ರಾಣಿಯ ಮತ್ತು ಪ್ರಜೆಗಳ ಜೀವನ ಮೀಸಲು. ಆ ವಿಲಾಸ ಬೀದಿಯ್ಯ ನಡುವೆ ಭವ್ಯವಾದೊಂದು ಪ್ರಾಸಾದ ಅದರ 'ಹೆಸರು ಮೋಹನಾಲಯ' ಅದೇ ಮಾಯಾ ರಾಣಿಯ ಮಹಲು.

ಆ ಚಂದ್ರಶಿಲಾಮಯ ಮಹಲಿನಲ್ಲಿ ಮಣಿಮಯ ಮಂಚ. ಅದರ ಮೇಲೆ ಮಾಯೆ ಮಲಗಿದ್ದಳು. ಆ ಮಲಗಿದ ಭಂಗಿ ಭರತ ಶಾಸ್ತ್ರದಲ್ಲಿಯೇ ಅಪ್ರೀ

ತೀಯುವಾಗಿತ್ತು. ಅವಳಾ ರಮಣೀಯ ರೂಪವನ್ನು ಕಾಣಬೇಕೆಂದು ಸಿದ್ಧರ ಸಂತೆಯೇ ನೆರೆದಿತ್ತು, ಆ ಮಹಲಿನ ಮುಂಗಡೆಯಲ್ಲಿ.

ಅಷ್ಟರಲ್ಲಿ ಮರುಳಸಿದ್ಧರನ್ನು ಮೋಹಿಸಿದ ಸಖಿಯರು ಮರುಳಸಿದ್ಧರ ಮನೋಹರ ಮೂರ್ತಿಯನ್ನು ಬಣ್ಣಿಸಿದರು. ಇಂತಹ ಪುಣ್ಯ ಪುರುಷವನ್ನು ಎಲ್ಲಿಯೂ ಕಂಡುವಿಲ್ಲ. ಈ ಭೂಲೋಕದ ಮಾತು ಹಾಗಿರಲಿ; ದೇವಲೋಕ ದಲ್ಲಿಯೂ ಈ ರೂಪು ದುರ್ಲಭ. ಇಂತಹ ಸುಂದರ ರೂಪು ಅಪ್ಸರೆಯರ ಕಣ್ಣಿಗೆ ಬೀಳುವ ಮೊದಲೇ ಆತನನ್ನು ಈ ಮಣಿಮಯ ಮಂದಿರದಲ್ಲಿ ತಂದಿರಿಸಿಕೊಳ್ಳುವುದು ಒಳಿತು. ದೇವೀ, ನಿನ್ನ ಭಾಗ್ಯದಿಂದ ಆ ಮಹಾಪುರುಷ ಇಲ್ಲಿಗೆ ಕಾಲಿಟ್ಟಿದ್ದಾನೆ. ಈ ಸಮಯವನ್ನು ಕಳೆದುಕೊಳ್ಳಬೇಡ, ಎಂದು ಹೇಳಿದರು. ಮಾಯಾರಾಣಿ ಮರುಳಸಿದ್ಧ ಮಹಾತ್ಮನ ಬಣ್ಣನೆಯನ್ನು ಕೇಳಿದಳು. ಅವಳ ಅಂಗಾಂಗಗಳಲ್ಲಿ ವಿಕಾರ ಹೊರಹೊಮ್ಮತೊಡಗಿತು. ಆಕೆ ಥಟ್ಟನೆ ಎದ್ದಳು; ಗೆಳತಿಯರೊಡನೆ ಮರುಳಸಿದ್ಧರ ಸಮೀಪಕ್ಕೆ ಬಂದಳು. ಆ ತೇಜಃಪುಂಜವಾದ ದೇಹವನ್ನು ನೋಡಿದಾಗ ಹೇಗಾದರೂ ಮಾಡಿ ಈತನನ್ನು ಒಲಿಸಿಕೊಳ್ಳಲೇಬೇಕೆಂದು ಯತ್ನ ನಡೆಸಿದಳು.

ಮೊದಮೊದಲು ಏನೇನೋ ಭಾವಭಂಗಿಯನ್ನು ಬೀರಿದಳು. ಆದರೆ ಆ ಸಿದ್ಧ ಪುರುಷ ಆ ಕಡೆಗೆ ಕಣ್ಣೆತ್ತಿ ಕೂಡ ನೋಡಲಿಲ್ಲ. ಕಡೆಗೆ ಮಾಯಾರಾಣಿ ನಮಸ್ಕಾರದ ನೆವದಿಂದ ಮಹಾತ್ಮನ ಸಮೀಪಕ್ಕೆ ಹೋದಳು. ಮರುಳಸಿದ್ಧರು ಹಿಂದೆ ಸರಿದರು; ಆಕೆಗೆ ದೂರದಲ್ಲಿಯೇ ಕುಳ್ಳಿರ ಹೇಳಿದರು. ಇದೇ ನೆವದಿಂದಲೇ ಮಾಯಾರಾಣಿಗೆ ಮಾತಿಗೆ ಅವಕಾಶ ಸಿಕ್ಕಿತು

ಮಾಯಾರಾಣಿ— ನಾನೇಕೆ ನಿಮ್ಮನ್ನು ಮುಟ್ಟಬಾರದು? ಭಕ್ತರು ಭಗವಂತನನ್ನು ಕೂಡ ಮುಟ್ಟಿ ನಮಸ್ಕರಿಸುವುದಿಲ್ಲವೆ?

ಮರುಳಸಿದ್ಧ—ನಮಸ್ಕಾರದ ಹಿನ್ನೆಲೆಯಲ್ಲಿ ಹೃದಯ ಶುದ್ಧವಾಗಿರಬೇಕು. ಭಕ್ತಿ ಬೆಳೆದು ಬಂದಿರಬೇಕು. ಈ ಸಹವಾಸವನ್ನು ಬಿಡು. ನಿನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳು.

ಮಾಯಾರಾಣಿ— ಈ ಸುಂದರ ರೂಪು ತಾರುಣ್ಯಗಳ ಸದುಪಯೋಗವಾಗಬೇಕು. ಇಲ್ಲವಾದರೆ ಅದು ಆ ಬ್ರಹ್ಮಚಾರಿಯನ್ನೇ ಬಗ್ಗುಬಡಿಯುವುದು. ಆದಕ್ಕಾಗಿ ಈ ಚರಣದಾಸಿಯ ಬಯಕೆಯನ್ನು ಸಲಿಸಬೇಕು, ಕರುಣೆಯಿಂದ ಕೈಹಿಡಿಯಬೇಕು.

ಮತ್ತೆಯೂ ಏನೇನೋ ಹೇಳಿಕೊಂಡಳು. ಮರುಳಸಿದ್ಧರು ಯಾವುದಕ್ಕೂ ಹಣಿಯಲಿಲ್ಲ. ಕಾಮವನ್ನು ಗೆದ್ದ ಪರಶಿವಮೂರ್ತಿಗಳು ಕಾಮಿನಿ

ಯೊಬ್ಬಳ ಕಟಾಕ್ಷಕ್ಕೆ ಕೈವಶವಾಗುವರೇ? ಮಾಯಾರಾಣಿಯ ಚತುರುಪಾಯಗಳೂ ಚತುರೋಪಾಯಗಳೂ ಎಲ್ಲವೂ ವ್ಯರ್ಥವಾದುವು. ಕೊನೆಗೆ ಆಕೆ ಕಂಬನಿಗರೆಯತೊಡಗಿದಳು. ಅದನ್ನು ಸಖಿಯರು ನೋಡಿದರು. ತಮ್ಮ ರಾಣಿಯ ಗರ್ವಭಂಗವಾದುದು ಅವರಿಗೂ ಕೆಡಕೆನಿಸಿತು. ಗೆಳತಿಯ ಪರವಾಗಿ ಅವರೂ ಮರುಳಸಿದ್ಧರಿಗೆ ಬಹಳ ಹೇಳಿಕೊಂಡರು. ತಮ್ಮ ಗೆಳತಿಗೆ ಶಾಶ್ವತ ಸಂತೋಷವನ್ನು ಕೊಡಲು ಕೈಮುಗಿದು ಕೇಳಿಕೊಂಡರು.

ಆಗ ಮರುಳಸಿದ್ಧರು—ಸ್ತ್ರೀಯರೇ, ಆತ್ಮಯೋಗ್ಯತೆಯ ಅರಿವಿಲ್ಲದೆ. ಕಾಮನಕೈಗೊಂಬೆಗಳಾದಿರಿ; ಭೌತಿಕ ಸುಖಕ್ಕೆ ಆಸೆ ಪಟ್ಟಿರಿ; ಆಯುಷ್ಯವನ್ನೇ ಹಾಳುಮಾಡಿಕೊಂಡಿರಿ. ನೀವು ಮಾಡುವ ರತಿಕ್ರೀಡೆ ಪಶುಗಳಿಗೂ ಸಾಮಾನ್ಯವಲ್ಲವೇ ! ಇನ್ನಾದರೂ ಎಚ್ಚರವಾಗಿರಿ. ನಿಮ್ಮ ಗೆಳತಿಗೆ ಶಾಶ್ವತ ಸುಖವನ್ನು ಕೊಡುವುದಕ್ಕಾಗಿಯೇ ನಾನಿಲ್ಲಿ ಬಂದಿರುವೆ. ಮೊದಲು ನನ್ನ ಸಂಸಾರದ ಕತೆಯನ್ನು ಕೇಳಿಕೊಳ್ಳಿರಿ —

ಈ ಸಮಗ್ರ ವಿಶ್ವವೇ ನನ್ನ ಸಂಸಾರ. ಇದು ಇಹಕ್ಕೂ ಪರಕ್ಕೂ ಕೂಡಿಯೇ ಸಂಬಂಧಿಸಿದೆ. ಎಂತೆಯೇ ಅನಿತ್ಯ-ನಿತ್ಯ ಸುಖಗಳು ಭೇದವಿಲ್ಲದಂತಿವೆ ನನಗೆ. ಪರಮವಿದ್ಯೆ ನನ್ನ ಸತಿ; ಶಾಶ್ವತ ಸಂತೋಷ ನನ್ನ ಸುತ; ವಿರತಿ-ವೈರಾಗ್ಯಗಳು ನನ್ನ ಬಂಧು-ಬಳಗ; ಶಮದಮಾದಿಗಳು ನನ್ನ ಅನುಯಾಯಿಗಳು-ಸೇವಕರು; ಕ್ಷಮೆಯೇ ದಾಸಿ; ಭಕ್ತಿಯೇ ನನ್ನ ತಾಯಿ; ಸದ್ವಿಚಾರವೇ ನನ್ನ ತಂದೆ; ಹಿತವಾದವೇ ನನ್ನ ಪರಿಜನರು; ಅಸ್ತೇಯ ನನ್ನ ನಂಬಿಗೆಯ ಆಳು; ಅಹಿಂಸೆ ನಂಬಿಗೆಯ ದಾಸಿ; ಮೈತ್ರಿ ಮೊದಲಾದವು ಮೊಮ್ಮಕ್ಕಳು; ಧರ್ಮವೇ ವಾಹನ; ಸತ್ಯವೇ ನನ್ನ ಪ್ರಯಾಣದ ಉದ್ದೇಶ ಮಾರ್ಗ; ತಪವೇ ನನ್ನ ಉಪಜೀವನ ಕ್ಷೇತ್ರ; ಮೋಕ್ಷವೇ ನನ್ನ ನಿಜವಾದ ನಿಲಯ; ಇವನ್ನೆಲ್ಲ ಒದಗಿಸಿದ ಶ್ರೀ ರೇವಣಸಿದ್ಧ ನನ್ನ ಪರಮ ಗುರು ! ಆತನ ಉಪದೇಶ ಬಲದಿಂದ ಈ ಶಾಶ್ವತ ಸುಖಮಯ ಸಂಸಾರವನ್ನು ನಾಗಿಸುತ್ತಿರುವೆ. ಇಂತಹ ಸಂಸಾರವಿರುವಾಗ ಈ ನಶ್ವರ ನಾರೀ ಲೀಲಾವಿಭ್ರಮಗಳಿಗೆ ವಶವಾಗುವುದು ಹೇಗೆ ?

ಮಾಯಾರಾಣಿ ಮರುಳಸಿದ್ಧ ಮಹಾತ್ಮರ ಮುತ್ತಿನಂತಹ ಮಾತ್ರುಗಳನ್ನು ಕೇಳಿದಳು. ಅವಳ ಮಸ್ತಕ ತಾನಾಗಿಯೇ ಆ ಮಹಾತ್ಮರ ಪದತಲಕ್ಕೆ ಮಣಿಯಿತು ! ಆಗ ಅವಳು ಕೈಮುಗಿದು—ಪ್ರಭುವೇ, ತಮ್ಮ ಉಪದೇಶದಿಂದ ನನ್ನ ಭವಸುಖಾನುರಾಗಮುಖದೊಳಗಿನ ವಾಸನಾ ನಾಸಿಕ ಕಳಚಿ ಬಿದ್ದಿತು. ನನ್ನ ಮುಖಭಂಗವಾಯಿತು—ಎಂದು ಒಪ್ಪಿದಳು.

ಈ ಮಾತುಗಳಿಂದ ಮರುಳಸಿದ್ಧರ ದೇಹದಾದ್ಯಂತ ಶಾಂತಿರಸ ತುಳು ಕಾಡತೊಡಗಿತು. ಆಗ ಮರುಳಸಿದ್ಧರು ಮಾತನ್ನು ಮುಂದುವರಿಸಿದರು:

ಶಿವನ ಸಂದೇಶಕ್ಕೆ ತಕ್ಕಂತೆ ಬ್ರಹ್ಮ ಈ ಸೃಷ್ಟಿಯನ್ನು ಹುಟ್ಟಿಸಿದ. ತನ್ನ ಅನುಭವದಿಂದ ಜೀವರಿಗೆ ಸುಖಭೋಗಗಳನ್ನು ಹೆಚ್ಚಿಸಿದ. ಆದರೆ ಮಾನಸ ಬ್ರಹ್ಮ ಈ ಜೀವಿಗಳಿಗೆ ಭೋಗಮಾಯೆಯನ್ನು ಕಲ್ಪಿಸಿದ. ಅದರಿಂದಲೇ ಈ ಜಗತ್ತಿಗೆ ವೈಚಿತ್ರ್ಯ ಬಂದಿದೆ. ಸಂಸಾರ ಮತ್ತೆ ಮತ್ತೆ ಬೆಳೆಯುತ್ತಲೇ ಇದೆ. ಈ ಮಾಯೆಯಿಂದಲೇ ಭೂಮಿಯ ಭೋಗ ಪ್ರೀತಿ ಮತ್ತಷ್ಟು ಹೆಚ್ಚುತ್ತ ಹೋಗುತ್ತಿದೆ. ಈ ಮಾಯೆಗೆ ಮೂಲವಾದುದೆಂದರೆ ಪ್ರೇಮ-ವಾಸನೆ. ಇದಕ್ಕೆ ಅಂಗಗಳಾಗಿ ಕಾಮ-ಕ್ರೋಧ-ಲೋಭ-ಮದ-ಮೋಹ-ಮಾತ್ಸರ್ಯ ಎಂಬ ಆರುಗುಣಗಳು ಹಗ್ಗದಂತೆ ಜೀವಿಯನ್ನು ಜಗ್ಗಿ ಕಟ್ಟುತ್ತಿವೆ. ಈ ಕಟ್ಟಿಗೆ ಒಳಪಟ್ಟನೆಂದರೆ ತಾಮಸ-ಅಹಂಕಾರಗಳು ಅಧಿಕಾರ ನಡೆಸುತ್ತಿವೆ ಈ ದುಃಖಾನುಭವ ಮತಿವಂತರಿಗೆ-ಸದಾಚಾರಿಗಳಿಗೆ ಬಾರದೆ ಹೋಗುವುದಿಲ್ಲ. ಅವರು ಈ ಕತ್ತಲೆಯಿಂದ ಬೆಳಕಿಗೆ ತರುವ ಪುಣ್ಯಾತ್ಮರ ದಾರಿ ಕಾಯುವರು. ಈ ದಾರಿದರ್ಶಕ ದೀಪವೇ ಪರಮ ಗುರು.

ಈ ಗುರುವಿನ ಸದ್ಬೋಧೆಯಿಂದ ಸಂಸಾರಿಕರ ತಾಮಸ ಕತ್ತಲೆ ಕಳೆಯುವುದು; ದಿವ್ಯ ಪ್ರಭೆ ತೋರುವುದು. ಆ ಬೆಳಕಿನಲ್ಲಿ ಶಿವನ ಸನ್ನಿಧಿ ಕಾಣತೊಡಗುವುದು. ಆ ಜೀವ ಶಿವನೆಡೆಗೆ ಸಾಗುತ್ತ ತಾನೇ ಶಿವಸ್ವರೂಪನಾಗುವುದು. ಇದುವೆ ಶಿವಜೀವೈಕ್ಯ ! ಇದುವೆ ಹುಟ್ಟಿದುದಕ್ಕೆ ಸಾರ್ಥಕ್ಯ ! ಇದುವೆ ನಿತ್ಯಾನಂದರಸೈಕ್ಯ !

ಗುರುವಿನ ಮಾತನ್ನು ಕೇಳಿ ಕೇಳಿದಂತೆ ಮಾಯಾರಾಣಿಯಲ್ಲಿ ಸಾತ್ವಿಕಾನಂದದ ಸೆಲೆ ಪುಟಿದೇಳ ಹತ್ತಿತು. ಆಕೆ ಗುರುವಿನ ಚರಣವನ್ನು ಕಣ್ಣೀರಿನಿಂದ ತೊಳೆಯ ಹತ್ತಿದಳು; ಆ ಆನಂದದಲ್ಲಿ ಹಾಗೆಯೇ ಮೂರ್ಛೆ ಹೊಂದಿದಳು. !

ಈ ಸುದ್ದಿ ಕರಟಾಸುರನಿಗೆ ತಿಳಿಯಿತು. ತನ್ನ ಮಗಳಿಗೆ ಸಾತ್ವಿಕ ತೇಜದ ಪುನರ್ಜನ್ಮ ಬಂದಿತೆಂದು ಕೇಳಿ ಆತನಿಗೂ ಪರಮಾನಂದವಾಯಿತು ! ಕೂಡಲೆ ಆತ ಗುರುಗಳಲ್ಲಿ ಬಂದ; ವಿನೀತ ಭಾವದಿಂದ ಸಾಷ್ಟಾಂಗ ನಮಸ್ಕಾರ ಹಾಕಿದ. ಗುರುಗಳ ಅರಸನ ಬಿನ್ನಹದಂತೆ ಮೆರವಣಿಗೆಯಿಂದ ಅರಮನೆಗೆ ಹೋದರು. ಅಲ್ಲಿ ರಾಜಪರಿವಾರ ಸಮೇತವಾಗಿ ಸರ್ವರಿಗೂ ಶಿವದೀಕ್ಷೆಯಾಯಿತು !!



ಉಜ್ಜಯನಿ ಸದ್ಧರ್ಮ ಸಿಂಹಾಸನ ಮಠ

ಸಂಸಾರಿಕರಿಗೆ ಸನ್ಮಾರ್ಗ ಬೋಧ ಮಾಡುತ್ತಿದ್ದರು. ಲಲಿತ ಕಲೆಗಳಿಗಾಗಿ ಸಂಗೀತ ಸಾಹಿತ್ಯನರ್ತನ ಶಾಲೆಗಳಿಗೂ ಕೊರತೆಯಿರಲಿಲ್ಲ.

ಆ ಕಲ್ಯಾಣ ಸಮೀಪದ ಸರ್ವಮಂಗಲಕರವಾದ ಸಿದ್ಧಾಶ್ರಮವೊಂದಿದೆ. ಅಲ್ಲಿ ಶಿಷ್ಯಪರಿವಾರ ಸಹಿತವಾಗಿ ಜ್ಞಾನಶಕ್ತಿ ಮುನಿಗಳಿರುತ್ತಿದ್ದರು. ಈ ಗುರುಗಳಿಗೆ ಸೋಮೇಶ್ವರ ದೊರೆ ಪರಮಭಕ್ತ. ಹೀಗೆ ಅರಮನೆ ಗುರು ಮನೆಗಳು ಸಮ್ಮಿಶ್ರವಾಗಿ ಸಾಮ್ರಾಜ್ಯವನ್ನು ಸಾಗಿಸುತ್ತಿದ್ದುವು.

ಒಮ್ಮೆ ಭುವನೈಕಮಲ್ಲ ಬಿರುದಾಂಕಿತ ಸೋಮೇಶ್ವರ ಭೂಪಾಲ ಶ್ರೀ ಜ್ಞಾನ ಮುನಿಗಳಿಗೆ ಭಕ್ತಿಯಿಂದ ವಂದಿಸಿದ. ಆ ಮೇಲೆ ಅವರಿಬ್ಬರು ಧಾರ್ಮಿಕ ವಿಚಾರವನ್ನು ಕುರಿತು ಮಾತುಗಳನ್ನು ಮುಂದುವರಿಸಿದರು.

"ಗುರುಗಳೇ, ಸಕಲ ಪ್ರಜೆಗಳೂ ಸದ್ಧರ್ಮಾಚರಣೆಯಲ್ಲಿರುವುದು ಸ್ವತಃಕ್ಕೂ ಸಾಮ್ರಾಜ್ಯಕ್ಕೂ ಕ್ಷೇಮಕರ. ಅದನ್ನು ಯಾವ ರೀತಿಯಿಂದ ಮಾಡಬಹುದು?" ಸೋಮೇಶ್ವರ ದೊರೆ ಕೇಳಿದ.

"ಇದಕ್ಕೆ ತಕ್ಕ ಪ್ರಚಾರಕ ಗುರುಬೇಕು. ಆತ ಸಕಲಶಾಸ್ತ್ರವೇತ್ತನೂ ಸದಾಚಾರಿಯೂ ವಾಕ್ಚಾತುರ್ಯವುಳ್ಳವನೂ ' ಇದ್ದರೆ ಮಾತ್ರ ವಿಷಯ ಸಾಧ್ಯ. ಕೊಲ್ಲಾಪುರದ ಮಾಯಾರಾಣಿಯ ದರ್ಪ ದಬ್ಬಾಳಿಕೆಯನ್ನು ಕೇಳಿರುವಿರಲ್ಲವೇ? ಆಕೆಯ ಗರ್ವವನ್ನು ಕ್ಷಣಾರ್ಧದಲ್ಲಿ ಮರ್ದಿಸಿದ ಮಹಾಪುರುಷರೊಬ್ಬರಿದ್ದಾರೆ. ಅವರ ಪವಿತ್ರನಾಮ ಮರುಳಸಿದ್ಧರೆಂದು. ಅವರಿಗೆ ಸದ್ಯಃ ನೀವು ಒಂದು ದಿವ್ಯ ಸದ್ಧರ್ಮ ಸಿಂಹಾಸನವನ್ನು ಸ್ಥಾಪಿಸಿಕೊಡಬೇಕು. ಆ ಪೀಠದ ಮುಖಾಂತರವಾಗಿ ಅವರು ನಿಮ್ಮ ಉದ್ದಿಷ್ಟ ಕಾರ್ಯವನ್ನು ಕೈಕೊಳ್ಳುವರು. ಅದನ್ನು ಕೊನೆಗಾಣಿಸುವರು. ಆ ಸದ್ಧರ್ಮ ಸಿಂಹಾಸನಕ್ಕೆ ಅವರನ್ನೇ ಪ್ರಥಮ ಪಟ್ಟಾಧಿಕಾರಿಯನ್ನಾಗಿ ಮಾಡಬೇಕು. ಸದ್ಯಃ ಅವರು ಅತ್ತಲೇ ದಯಮಾಡಿಸುತ್ತಿದ್ದಾರೆ. ನೀವು ಅವರನ್ನು ಸನ್ಮಾನ ಪೂರ್ವಕವಾಗಿ ಕರೆತರಬೇಕು ."ಜ್ಞಾನಶಕ್ತಿ ಮುನಿಗಳು ಅಪ್ಪಣೆ ಕೊಡಿಸಿದರು.

ಸೋಮೇಶ್ವರ ದೊರೆ ಗುರುವಿನ ಅಪ್ಪಣೆಯಂತೆ ಆಪ್ತ ಮಂತ್ರಿ-ಸೇನಾ ಸಮೇತನಾಗಿ ಪರಳಿಗೆ ಹೋಗಿ ಶ್ರೀ ಮರುಳಸಿದ್ಧರನ್ನು ಕಲ್ಯಾಣ ರಾಜಧಾನಿಗೆ ಬಯಮಾಡಿಸಿಕೊಂಡ.

ಅರಮನೆಯಲ್ಲಿ ಮರುಳಸಿದ್ಧರಿಗೆ ಷೋಡಶೋಪಚಾರದ ಪೂಜೆ ನಡೆಯಿತು ಅರಸು ಭಕ್ತಿಯಿಂದ ವಂದಿಸಿ ಪ್ರಾರ್ಥಿಸಿದ—" ಗುರುದೇವ, ತಮ್ಮ ಪಾದಧೂಳಿಯಿಂದ ನಮ್ಮ ವಂಶ, ನಮ್ಮ ರಾಜ್ಯ, ಪವಿತ್ರವಾಯಿತು. ಇನ್ನು

ತಮ್ಮಿಂದ ಸದ್ಧರ್ಮ ಪ್ರಸಾರವಾಗಬೇಕು ಸಕಲ ಪ್ರಜೆಗಳೂ ಸದಾಚಾರ ನಿರತರಾಗಬೇಕು. ಇದಕ್ಕಾಗಿ ಶ್ರೀ ಗುರುಗಳಿಗೆ ಯಾವ ಯಾವ ಅನುಕೂಲತೆಗಳಾಗಬೇಕೆಂಬುದನ್ನು ಅಪ್ಪಣೆಕೊಡಿಸಬೇಕು."

ಮರುಳಸಿದ್ಧರಿಗೆ ಮಹದಾನಂದವಾಯಿತು ಅವರು ಅಪ್ಪಣೆ ಕೊಡಿಸಿದರು;—ದೊರೆಯೇ, ಅರಸುಗಳಿಗೆ ಈ ಧರ್ಮ ಭಾವನೆ ಬಂದುದು ಭೂಲೋಕದ ಸುದೈವವೇ. ಈ ಸತ್ಕಾರ್ಯಕ್ಕಾಗಿ ನೀವು ಸ್ವಲ್ಪ ಶ್ರಮಪಡಬೇಕಾಗುವುದು. ನಿಮ್ಮ ರಾಜ್ಯದಲ್ಲಿ ಮೂಲ ಪೀಠದ ಉಜ್ಜಯಿನೀ ನಾಮದಿಂದ ಹೊಸದೊಂದು ಪತ್ತನವನ್ನು ಕಟ್ಟಿಸಬೇಕು. ಅಲ್ಲಿ ಶ್ರೀ ಮರುಳಾರಾಧ್ಯರ ತರುವಾಯ ಹದಿನಾಲ್ಕು ಜನ ಗುರುಪರಂಪರೆಯ ಮೂರ್ತಿಗಳನ್ನು ಸ್ಥಾಪನ ಮಾಡಿಸುವೆ. ಆ ಸದ್ಧರ್ಮ ಸಿಂಹಾಸನದ ಮೂಲಕವಾಗಿಯೇ ಸರ್ವತ್ರ ಸದ್ಧರ್ಮ ಸ್ಥಾಪನ ಕಾರ್ಯವನ್ನು ಕೈಕೊಳ್ಳುವೆ.

ಗುರುಗಳ ಅಪ್ಪಣೆಯಾಗುವುದೊಂದೇ ತಡ. ರಾಜ ಈ ಕಾರ್ಯಕ್ಕೆ ಜಕ್ಕಣಾಚಾರ್ಯರನ್ನೇ ಕರೆಸಿದರು. ಜಕ್ಕಣಾಚಾರ್ಯ ಶಿಲ್ಪಕಲಾಕೋವಿದ ಎಂಬುದು ಎಲ್ಲೆಲ್ಲಿಯೂ ಪ್ರಸಿದ್ಧವಾಗಿತ್ತು. ಸಾವಿರಾರು ಆಳುಗಳು ಜಕ್ಕಣನ ಕೈಕೆಳಗೆ ದುಡಿಯುಹತ್ತಿದರು. ಗುರುಗಳ ಆದೇಶದಂತೆ ಮರುಳಾರಾಧ್ಯರ ಲಿಂಗವೂ ಹದಿನಾಲ್ಕು ಜನ ಗುರುಗಳ ವಿಗ್ರಹಗಳೂ ಮಂದಿರದಲ್ಲಿ ಮೆರೆದುವು. ಅಲ್ಲಿ ಆಚಾರ್ಯರು ಕಟಿದ ಕಮಲ ಗರ್ಭಗುಡಿಯುಲ್ಲಿದೆ. "ಹಂಪೆಯ ಗುಡಿಯು ಹೊರಗೆ ನೋಡಬೇಕು ಉಜ್ಜಯಿನಿಯ ಪುರದ ಒಳಗೆ ನೋಡಬೇಕು" ಎಂಬುದು ಇಂದಿಗೂ ಗಾದೆಯ ಮಾತಿನಂತಿದೆ.

ನವಪತ್ತನ, ನಮಮರ, ನವಸಿಂಹಾಸನ, ನವನವ ಮೂರ್ತಿಗಳು ನವೋನವವಾಗಿ ನಿರ್ಮಿತವಾದುವು! ಗುರುಗಳೂ ದೊರೆಗಳೂ ಪ್ರಜೆಗಳೂ ನೋಡಿ ಪರಮಾನಂದ ಪಟ್ಟರು. ಜಕ್ಕಣಾಚಾರ್ಯರಿಗೂ ಮನದಣಿ ಮೆಚ್ಚುಗೆ ದೊರೆಯಿತು.

ಇಷ್ಟೆಲ್ಲ ನಿರ್ಮಾಣಕಾರ್ಯ ಮುಗಿದುದು ವೈಶಾಖ ಶುಕ್ಲ ತೃತೀಯೆಯ ಶುಭ ಮುಹೂರ್ತದಲ್ಲಿ. ಆ ದಿನ ಶ್ರೀ ರೇವಣಸಿದ್ಧರು ಸುಂದರ ಲಿಂಗವನ್ನು ತಂದರು. ಶ್ರೀಆತ್ಮಜ್ಞಾನಿ ಶಕ್ತಿಮುನೀಶ್ವರರೂ ಶ್ರೀರೇವಣರೂ ಶ್ರೀಮರುಳಸಿದ್ಧರೂ ವಿಧಿಪೂರ್ವಕವಾಗಿ ಅಂದೇ ಲಿಂಗಸ್ಥಾಪನೆ ಮಾಡಿದರು. ಭಕ್ತಜನರ 'ಜಯ ಜಯ' 'ಉಘೆ ಉಘೆ' ಎಂಬ ಶಬ್ದ ಗಗನಮಂಡಲದಲ್ಲಿ ಗುಡುಗಾಡುತಿತ್ತು. ಆಗಲೇ ಎಲ್ಲ ಪೂರ್ವ ಗುರುಗಳ ಮೂರ್ತಿ ಸ್ಥಾಪನೆಯೂ ಆಯಿತು. ಸನ್ಮಂಗಲ ಕಾರ್ಯಕ್ಕೆ ದೇವಲೋಕದಿಂದ ಕುಸುಮ ವೃಷ್ಟಿಯಾಯಿತು!

ಮರುದಿನ ಚೌತಿಯ ಸುಮುಹೂರ್ತದಲ್ಲಿ ವಿವಿಧ ಪೂಜಾರ್ಚನೆಗಳಾದುವು. ತರುವಾಯ ಪಂಚಮಿಯ ಸುಮುಹೂರ್ತದಲ್ಲಿ ರೇವಣರೂ ಜ್ಞಾನಶಕ್ತಿ ಮುನಿಗಳೂ ಶ್ರೀಮರುಳಸಿದ್ಧರನ್ನು ನವಉಜ್ಜಯಿನೀ ಪಟ್ಟದ ಸದ್ಧರ್ಮಾಧಿಕಾರಿಗಳನ್ನಾಗಿ ಮಾಡಿದರು! ಮರುಳಸಿದ್ಧರು ಪಟ್ಟವೇರುತ್ತಲೇ ಭಕ್ತಾದಿಗಳೆಲ್ಲ ಕಾಣಿಕೆಗಳನ್ನು ಕೊಟ್ಟು ಹರಕೆ ಪಡೆದರು. ಈ ಮಹೋತ್ಸವಕ್ಕೆ ಶ್ರೀಗಿರಿಯ ಪೀಠಾಧಿಕಾರಿಗಳಾದ ಪಂಡಿತಾಚಾರ್ಯರೂ ಕಾಂಚಿ, ವಾತಾಪಿ, ಬೆಳ್ಳಿಗಾವಿ ಮೊದಲಾದ ಕಡೆಯಿಂದ ಪಂಚಮಠಾಧಿಕಾರಿಗಳೂ ಕೊಲ್ಲಿಪಾಕಿಯ ಗುರುಮಠದ ಸಿದ್ಧನಾಥರೂ, ರಾಷ್ಟ್ರಕೂಟ ಓರಂಗಲ್ಲು ಪುರಿಗಳ ಭೂಪಾಲರೂ ಬಂದಿದ್ದರು. ಇವರೆಲ್ಲರೂ ಭಕ್ತಿ ಪ್ರೇಮಪೂರ್ವಕವಾಗಿ ಗುರುವಿಗೆ ಕಾಣಿಕೆಗಳನ್ನು ಅರ್ಪಿಸಿದರು. ಈ ಪ್ರಸಂಗದಲ್ಲಿ ಭುವನೈಕಮಲ್ಲ ಪ್ರಭು ಮಠಕ್ಕೆ ಮಾನ್ಯವೆಂದು ನೂರಿಪ್ಪತ್ತು ಮಠಗಳನ್ನು ತನ್ನ ರಾಜ್ಯಭಾಗದಲ್ಲಿ ಉಂಬಳಿಯಾಗಿ ಕೊಟ್ಟರು!

## ಹದಿನಾರನೆಯ ಸಂಧಿ
## ಮರುಳಸಿದ್ಧರು ಮುಕ್ತಿಮುನೀಶ್ವರಗೆ ಪಟ್ಟ ಕಟ್ಟಿದುದು.

ಓರುಂಗಲ್ಲು ಗಣಪತಿರಾಜ ಶ್ರೀ ಮರುಳಸಿದ್ದೇಶ್ವರರ ವೈಭವವನ್ನು ಕಣ್ಣಾರೆ ಕಂಡ. ಆತನಲ್ಲಿ ಪೂಜ್ಯರ ಬಗೆಗೆ ಪರಮಾನಂದವುಂಟಾಯಿತು. ಅವನು-ಗುರುವೇ, ಈ ಭಕ್ತನ ರಾಜ್ಯಕ್ಕೂ ದಯಮಾಡಿಸಬೇಕು—ಎಂದು ಕೈಮುಗಿದುಕೇಳಿಕೊಂಡ, ಉತ್ಸವವನ್ನು ಮುಗಿಸಿಕೊಂಡು ಮರುಳಸಿದ್ಧರು ಓರುಂಗಲ್ಲಿಗೆ ಬಿಜಯಮಾಡಿದರು.

ಗಣಪತಿದೇವನಿಗೆ ಪರಮಾನಂದವಾಯಿತು ಅವನು ಗುರುವಿನ ಕಡೆಯಿಂದ ರುದ್ರಹೋಮ-ರುದ್ರಾಭಿಷೇಕಾದಿಗಳನ್ನು ಮಾಡಿಸಿದ. ಉತ್ಸವಗಳೆಲ್ಲ ಮಹದ್ವೈಭವದಿಂದ ಸಾಗಿದುವು.

ಅವಭೃತಸ್ನಾನದ ದಿನ ಶ್ರೀ ಮರುಳಸಿದ್ಧರು ಗಣಪತಿರಾಯನ ಬಯಕೆಯನ್ನು ಕೇಳಿದರು. ಆತನಿಗಿದ್ದುದು ಸಂತಾನದ ಕೊರತೆ ! ಆ ಕೊರತೆಯನ್ನು ಪೂರಯಿಸಲು ಗುರುವರನನ್ನು ಕೇಳಿಕೊಂಡ. ಗುರುಗಳು ಅತ್ಯಾನಂದದಿಂದ ಹರಸಿದರು.

“ ರಾಜಾ, ನಿನ್ನ ಬಯಕೆ ಯೋಗ್ಯವಾಗಿದೆ. ನಿನ್ನ ತರುವಾಯ ರಾಜ್ಯಕ್ಕೆ ಉತ್ತರಾಧಿಕಾರಿಗಳು ಬೇಕು ಅದಕ್ಕೆ ತಕ್ಕಂತೆ ನಿನಗೆ ವೀರಸುತೆಯೊಬ್ಬಳು ಜನಿಸುವಳು ! ಹೆಣ್ಣೆಂದು ಹೀಗಳೆಯ ಬೇಡ. ಅವಳು ವೀರನಾರಿ ! ಪ್ರತ್ಯಕ್ಷ

ಭುವನೇಶ್ವರಿ ! ರಣಪ್ರಸಂಗಗಳಲ್ಲಿ ಹಗೆಗಳ ಶಿರಗಳನ್ನು ಪುಟಿಚೆಂಡಿನಂತೆ ಹಾರಿಸುವಳು ! ತನ್ನ ಪ್ರಜೆಗಳನ್ನು ಮಕ್ಕಳಂತೆ ಕಾಪಾಡುವಳು. ಸದ್ಧರ್ಮ ಪ್ರಸಾರವಮಾಡುವಳು. ಅವಳು ಈ ರುದ್ರಹೋಮದಿಂದ ಹುಟ್ಟಿರುವ ಕಾರಣದಿಂದ ರುದ್ರಾಂಬೆಯೆಂದು ಹೆಸರಿಡು. ''

ಗುರುಗಳ ವಚನದಿಂದ ರಾಜನಿಗೆ ಸಂತೋಷವಾಯಿತು. ಗಣಪತಿ ದೇವ ಗುರುಗಳಿಗೆ ಯಥೇಷ್ಟವಾಗಿ ಕನಕ ರತ್ನ ಮುತ್ತುಗಳ ಕಾಣಿಕೆಯನ್ನು ಕೊಟ್ಟು; ಹರಕೆಯನ್ನು ಪಡೆದ. ಆ ಹೊತ್ತಿಗೆ ಶ್ರೀ ಪತಿ ಪಂಡಿತೋತ್ತಮರು, ಅಮರಗುಂಡಯ್ಯನವರು ಶ್ರೀ ಮರುಳಸಿದ್ಧರಲ್ಲಿಗೆ ಬಂದು ಶಿವಜೀವೈಕ್ಯ ಸಿದ್ಧಾಂತವನ್ನು ನಿಚ್ಚಳವಾಗಿ ತಿಳಿದುಕೊಂಡು ಹೋದರು.

ಭಕ್ತರಿಂದ ಬೀಳ್ಕೊಂಡು ಓರಂಗಲ್ಲಿನಿಂದ ಹಂಪೆಗೆ ಪ್ರಯಾಣ ಬೆಳೆಸಿದರು ಮರುಳಸಿದ್ಧರು. ಅಲ್ಲಿ ಸಹಸ್ರಾರು ಜನ ವಿರಕ್ತರು ಇವರ ಬೋಧೆಯನ್ನು ಕೇಳಲು ನೆರೆದರು. ಗುರುಗಳು ಮೊದಲು ಶ್ರೀ ವಿರೂಪಾಕ್ಷಲಿಂಗದ ಮಾನಸ ಪೂಜೆಯನ್ನು ಮುಗಿಸಿದರು. ಆ ಮೇಲೆ ವೇದಾಗಮೋಪನಿಷತ್ತುಗಳ ಸಾರವನ್ನೊಳಗೊಂಡ ಅರುವತ್ತೆಂಟು ಸಾವಿರ ವಚನಗಳನ್ನು ಅಲ್ಲಿಯೇ ರಚಿಸಿದರು; ಅವುಗಳನ್ನು ವಿರಕ್ತರಿಗೆಲ್ಲ ಅನುಗ್ರಹಿಸಿದರು.

ಮರುಳಸಿದ್ಧರ ಕೀರ್ತಿ ತ್ವರಿತದಲ್ಲಿಯೇ ಎಲ್ಲ ಕಡೆಗೂ ಪಸರಿಸಿತು ! ಮಹಾದೇವಿಯಕ್ಕನೇ ಮುಂತಾದ ಶಿವಶರಣ ಶರಣೆಯರು ಗುರುಗಳ ದರ್ಶನಕ್ಕೆ ಬಂದರು. ಗುರು ಅವರೆಲ್ಲರಿಗೂ ಷಟ್ ಸ್ಥಲ ಸಿದ್ಧಾಂತ ನಿರ್ಣಯವನ್ನು ಸರಸವಾಗಿ ತಿಳಿಸಿದರು. ಅವರಲ್ಲಿ ಓಂಕಾರಸೆಟ್ಟಿ ಗುರುವಿನ ಉಪದೇಶವನ್ನೇ ಅನುಸರಿಸಿ ಜೀವನ್ಮುಕ್ತಿಯನ್ನು ಪಡೆದರು.

ಅಲ್ಲಿಂದ ಗುರುಗಳು ಕೂಡಲ ಸಂಗಮಕ್ಕೆ ಸಾಗಿದರು. ಅಲ್ಲಿ ಹಿರಿಯ ಮಠ ಪಟ್ಟಾಧಿಕಾರವನ್ನು ನೆರವೇರಿಸಿ ಆತನಿಗೆ ಶ್ರೀ ಬಸವೇಶ್ವರರ ಜನ್ಮ ವೃತ್ತಾಂತದ ಭವಿಷ್ಯವನ್ನು ತಿಳಿಸಿದರು ಬಳಿಕ ಮುದುನೂರು ಪತ್ತನದ ಹಿರಿಯಮಠದ ಪಟ್ಟಾಧಿಕಾರಿ ಏಕೋರಾಮರಿಗೆ ಷಟ್ ಸ್ಥಳ ಸಿದ್ಧಾಂತ ಸಾರವನ್ನು ಸಸಾರವಾಗಿ ಬರೆದುಕೊಟ್ಟರು ಆ ಮೇಲೆ ಮೈಲಾರಕ್ಕೆ ಹೋಗಿ ಮಲ್ಲಾರಿದೇವನಿಗೆ ಮಹಿಮೆಯನ್ನು ತೋರಿಸಿದರು. ಅಲ್ಲಿದ್ದ ಕಾಪಾಲ ಭೈರವನೆಂಬ ಖಲಸಿದ್ಧ ಗುರುಪರೀಕ್ಷೆಗಾಗಿ ವಿಷವನ್ನು ತಂದುಕೊಟ್ಟ ಮರುಳಸಿದ್ಧರು ಅದನ್ನು ಕುಡಿದು ಬಿಟ್ಟರು ಆ ಖಲಸಿದ್ಧನಿಗೆ ಪಶ್ಚಾತ್ತಾಪವಾಯಿತು! ಅವನು ಗುರುವಿನಡಿಯನ್ನು ಹಿಡಿದು ಕ್ಷಮೆಯನ್ನು ಬೇಡಿದ. ಆಗ ಗುರುಗಳು ಕಾಪಾಲ ಮತದ ಕ್ರೂರತನವನ್ನು ದುರಾಚರಣೆಗಳನ್ನು ಖಂಡಿಸಿ

ಆತನಿಗೆ ತನ್ನ ತಾನರಿವ ಮಾರ್ಗವನ್ನು ತಿಳಿಸಿದರು. ಕಾಪಾಲ ಭೈರವ ಮರುಳ ಸಿದ್ಧರ ಶಿಷ್ಯನಾದ.

ಕಪ್ಪತಗುಡ್ಡದಲ್ಲಿ ಜಟ್ಟಿಗೇಶ್ವರ ಸಿದ್ಧ ಜಾರಣ ಮಾರಣ ವಿದ್ಯೆಯಲ್ಲಿ ನಿಪುಣನಾಗಿ ಅನೇಕ ಅನಾಚಾರ ದುರಾಚಾರವಮಾಡುತ್ತಿದ್ದ. ಸಜ್ಜನರ ಹಿಂಸೆ ಸ್ತ್ರೀಯರ ಪಾತಿವ್ರತ್ಯಗಳು ಅವನಿಗೆ ಕಸಕ್ಕಿಂತ ಕಡೆಯಾಗಿದ್ದುವು. ಮರುಳ ಸಿದ್ಧರು ಅಲ್ಲಿಗೆ ಹೋಗಿ ಜ್ಞಾನೋಪದೇಶ ಮಾಡಿ ಅವನ ಕುತಂತ್ರಗಳನ್ನು ಬಿಡಿಸಿದರು. ಮುಂದೆ ಜಟ್ಟಿಗ ಮರುಳಸಿದ್ಧರ ಶಿಷ್ಯನೇ ಆದ.

ಹರಪುರಿಯ ಚಂದ್ರಕಾಂತರಾಜ ಜೈನ ಧರ್ಮದಲ್ಲಿದ್ದ. ಆತನಿಗೆ ಅದ ರಿಂದ ಶಾಂತಿ ದೊರೆಯಲಿಲ್ಲ. ಅದರಿಂದ ಅವನು ಶ್ರೀ ಮರುಳಸಿದ್ಧರಲ್ಲಿ ಬಂದು ತನ್ನನ್ನು ಉದ್ಧರಿಸಲು ಕೇಳಿಕೊಂಡ. ಗುರುಗಳು ಅವನಿಗೆ ವೀರಶೈವ ತತ್ತ್ವಗಳನ್ನು ತಿಳಿಸಿ ಶೈವ ದೀಕ್ಷೆಯನ್ನು ಕೊಟ್ಟರು. ಗುರುಗಳ ಉಪದೇಶ ವನ್ನು ಕೇಳಿದ ಪ್ರಜೆಗಳೂ ನಾಮುಂದು ತಾಮುಂದು ಬಂದು ಶಿವದೀಕ್ಷೆ ಪಡೆದರು. ಬಹುಶಃ ಎಲ್ಲ ಜೈನರೂ ಚತುರ್ಥ ಪಂಗಡದವರು. ಅವರೀಗ ವೀರಶೈವರಾಗಿ ಪಂಚಮಸಾಲಿಯವರಿಗೆ ಸೋದರರೆಂದು ಅಭಿಮಾನದಿಂದ ಹೇಳಹತ್ತಿದರು. (ಈ ಸೋದರರೇ 'ಸಾದರ ಬೆಡಗಿನವರು. ಅದೇ ಶಬ್ದವೇ ಬಳಕೆಯಲ್ಲಿ ಸಾದ' ಎಂದಾಗಿರಬೇಕು. –ಸಂಪಾದಕ) ಮರುಳಸಿದ್ಧರು ಹರಪುರಿ (ಹರಪನಹಳ್ಳಿ) ಯಲ್ಲಿ ಗುರುಮಠವನ್ನು ಸ್ಥಾಪಿಸಿ ಅದಕ್ಕೆ ಪಟ್ಟಾಧಿ ಕಾರಿಯನ್ನು ನಿಯಮಿಸಿದರು.

ಆಗ ರೇವಣಸಿದ್ಧರು ರಂಭಾಪುರೀ ಪೀಠಕ್ಕೆ ಅಧಿಕಾರಿಯನ್ನು ನಿಯಮಿ ಸಲು ತಮ್ಮ ಇಬ್ಬರು ಮಕ್ಕಳು ಸಹಿತವಾಗಿ ಬಂದರು. ಕೋಟಿಪಲ್ಲಾರಾಧ್ಯ ರಿಗೆ ಚರಪಟ್ಟವನ್ನು ಕಟ್ಟಿದರು. ಈ ಉತ್ಸವಕ್ಕೆ ಉಜ್ಜಯಿನೀ ಪೀಠದ ಮರು ಳಸಿದ್ಧರೂ ಹೂಲಿಯಮಠದ ಜ್ಞಾನಶಕ್ತೀಶ್ವರ ಗುರುಗಳೂ ಶ್ರೀಗಿರಿಯ ಗುರು ವರೇಣ್ಯ ಶಂಕರರೂ ಹಿಮಗಿರಿಯ ಪರಮಾನಂದ ಲಿಂಗರೂ ಬಂದಿದ್ದರು. ಆ ಶುಭಮುಹೂರ್ತದಲ್ಲಿಯೇ ರುದ್ರಮುನಿಯಿಂದ ಮಲವರಿಗೆ ಶಿವದೀಕ್ಷೆಯಾ ಯಿತು; ಕೋಟಿಪಲ್ಲಾರಾಧ್ಯರಿಂದ ನೊಣಬರಿಗೆ ಲಿಂಗದೀಕ್ಷೆಯಾಯಿತು. ಮರುಳಸಿದ್ಧರು ಎರಡು ಲಕ್ಷ ಚತುರ್ಥ ಜೈನರಿಗೆ ದೀಕ್ಷೆಯನ್ನಿತ್ತರು ಅಂತೂ ಈ ಭಾಗದಲ್ಲೆಲ್ಲ ವೀರಶೈವಮಯವೇ ಆಯಿತು.

ಆ ಮೇಲೆ ಮರುಳಸಿದ್ಧರು ಉಜ್ಜಯಿನಿಗೆ ದಯಮಾಡಿಸಿದರು. ಭಕ್ತ ರೆಲ್ಲ ಅವರನ್ನು ಸಂತೋಷದಿಂದ ಸ್ವಾಗತ ಮಾಡಿದರು. ಹೀಗೆ ನೂರು ಎಪ್ಪತ್ತು ವರುಷಗಳ ವರೆಗೂ ಸದ್ಧರ್ಮ ಸಿಂಹಾಸನದ ಮಹಿಮೆಯನ್ನು ಹೆಚ್ಚಿಸಿ ಮುಕ್ತಿ ಮುನಿಗಳಿಗೆ ಪಟ್ಟಗಟ್ಟಿ ಸಚ್ಚಿದಾನಂದ ಲಿಂಗ ಶರೀರಿಗಳಾದರು.

ಮುಕ್ತಿ ಮುನಿಗಳು ರುದ್ರಮುನಿಗಳ ನೆರವಿನಿಂದ ವೀರಶೈವ ಮತವನ್ನು ಮಿಗಿಲಾಗಿಯೇ ಪ್ರಸಾರ ಮಾಡಿದರು. ಧನಿಕ ದರಿದ್ರ ಭೇದವಿಲ್ಲದೆ ಎಲ್ಲವನ್ನೂ ಸಮನಾಗಿಯೇ ಉದ್ಧಾರ ಮಾಡಿದರು. ಹೀಗೆ ತೊಂಬತ್ತು ವರುಷಗಳ ಕಾಲ ಸದ್ಧರ್ಮ ಸಿಂಹಾಸನದ ಶ್ರೇಷ್ಠತೆಯನ್ನು ಕಾಯ್ದು ಕೊನೆಗೆ ಸಿದ್ಧಲಿಂಗ ಪಂಡಿತರಿಗೆ ಪಟ್ಟವನ್ನು ಕೊಟ್ಟು ತಾವು ಶಿವೈಕ್ಯರಾದರು.

## ಹದಿನೇಳನೆಯ ಸಂಧಿ
## ಹೂಲಿಯ ಮರುಳಸಿದ್ಧ ಗುರು

ಸಿದ್ಧಲಿಂಗಾಚಾರ್ಯರು ನಾಲ್ವತ್ತೈದು ವರುಷಗಳ ವರೆಗೆ ಸದ್ಧರ್ಮ ಸಿಂಹಾಸನವನ್ನಾಳಿದರು. ಬಳಿಕ ಅವರು ಸತ್ಕುಲ ಪ್ರಸೂತರೂ ವಿದ್ವಾಂಸರೂ ಆದ ಸಿದ್ಧೇಶ್ವರರಿಗೆ ಪಟ್ಟಕಟ್ಟಿ ಶಿವೈಕ್ಯರಾದರು.

ಈ ಸಿದ್ಧೇಶ್ವರರಿಗೆ ಪರಕಾಯ ಪ್ರವೇಶ ವಿದ್ಯೆ ಚೆನ್ನಾಗಿ ತಿಳಿದಿದ್ದಿತು. ಅದರಿಂದ ಭಕ್ತರ ಇಂಗಿತವನ್ನು ತಿಳಿದು ತಾವಾಗಿಯೇ ಅವರನ್ನು ಉದ್ಧರಿಸುತ್ತಿದ್ದರು. ಅಹಿಂಸಾ ಧರ್ಮ ಇವರ ಕಾಲದಲ್ಲಿ ಒಳ್ಳೆಯ ಬೆಳಕನ್ನು ಕಂಡಿತು. ಹಿಂಸಾವಾದಿಗಳಾದ ಬೇರೆ ಮರ್ಮತಗಳು ತಂ ತಾವೆ ಕತ್ತಲೆಯನ್ನು ಕಂಡುವು. ಇವರು ಹಿಮಗಿರಿಯ ವರೆಗೂ ಸಂಚರಿಸಿ ಅಲ್ಲಿಯ ಸಿದ್ಧರಿಗೆ ಪರಕಾಯ ಪ್ರವೇಶ ವಿದ್ಯೆಯನ್ನು ತಿಳಿಸಿದರು. ಹೀಗೆ ಸಿದ್ಧೇಶ್ವರಾಚಾರ್ಯರು ಎಂಬತ್ತು ವರುಷ ಕಾಲ ವೀರಶೈವರನ್ನು ವರ್ಧಿಸಿ, ಸಿದ್ಧನಾಥಾರ್ಯರಿಗೆ ಪಟ್ಟವನ್ನು ಕೊಟ್ಟು ಶಿವೈಕ್ಯರಾದರು.

ಸಿದ್ಧನಾಥಾರ್ಯರು ಮುಪ್ಪತ್ತು ವರುಷಗಳ ವರೆಗೂ ಸದ್ಧರ್ಮ ಸಿಂಹಾಸನದ ಶ್ರೇಷ್ಠತೆಯನ್ನು ಬೆಳೆಸುತ್ತ, ಕೊನೆಗೆ ಹೂಲಿಯ ಸಿದ್ಧಸಂಜೀವೇಶ್ವರ ವಂಶದ ಮರುಳಸಿದ್ಧಾರ್ಯರಿಗೆ ಪಟ್ಟವನ್ನು ಕೊಟ್ಟು ಬಯಲಾದರು.

ಈ ಮರುಳಸಿದ್ಧರು ದಿವ್ಯಯೋಗಿಗಳು. ಇವರ ಕೀರ್ತಿಯನ್ನು ಕೇಳಿ ಕಗ್ಗಲ್ಲಿಪುರದ ಗೌಡ ಗುರುಗಳ ಹತ್ತಿರಕ್ಕೆ ಬಂದ. ಆತನಿಗೆ ಮಕ್ಕಳಿರಲಿಲ್ಲ. ತನ್ನ ಈ ಕೊರತೆಯನ್ನು ಗುರುಗಳಿಗೆ ನಿವೇದಿಸಿ, ತನಗೆ ಮಕ್ಕಳಾಗಬೇಕೆಂದು ಅನನ್ಯಭಾವದಿಂದ ಬೇಡಿಕೊಂಡ. ಗುರುವಿಗೆ ಶಿಷ್ಯನ ಮೇಲೆ ಕರುಣೆ ಹುಟ್ಟಿತು. ಅದರಿಂದ ತಾನೇ ಶಿಶುರೂಪದಲ್ಲಿ ಆತನಿಗೆ ಮಗುವಾಗುವೆನೆಂದು ಹೇಳಿದರು.

ಮುಂದೆ ಒಂದು ದಿನ ಕಗ್ಗಲ್ಲ ಗೌಡನ ಆಳು ಹೊಲದಲ್ಲಿ ನೇಗಿಲ ಹೊಡೆಯುತ್ತಿದ್ದಾಗ ಬಿಲ್ವವೃಕ್ಷದ ಕೆಳಗೆ ಬೆಳಕು ಬೀರುವ ಮುದ್ದು ಮಗುವೊಂದು ಕಂಡಿತು ಅವನು ಓಡುತ್ತ ಹೋಗಿ ಒಡೆಯನಿಗೆ ಸುದ್ದಿಯನ್ನು ಮುಟ್ಟಿಸಿದ. ಗೌಡಗೌಡಿತಿಯರು ಭಕ್ತಿ ಪ್ರೀತಿಯಿಂದ ಕೂಸನ್ನು ಮನೆಗೆ ಒಯ್ದರು.

ಕೂಸಿನ ಬಾಲಲೀಲೆ ಎಲ್ಲರನ್ನು ಸಂತೋಷಪಡಿಸಿತು. ಆತನ ಒಂದೊಂದು ಲೀಲೆಯೂ ಜಗತ್ತಿಗೆ ಒಂದೊಂದು ತತ್ತ್ವವನ್ನು ತಿಳಿಸುತ್ತಿದ್ದಿತು. ಮುಂದೆ ಮರುಳಸಿದ್ಧರು ಒಂದು ದಿನ ಮತ್ತೆ ನಿಜ ಕಾಯಕಾಂತಿಯನು ಪಡೆದು ಗೌಡನಿಗೆ ಮುಕ್ತಿ ಮಾರ್ಗವನ್ನು ಬೀರಿ ಮನೆಯಿಂದ ಹೊರಟರು.

ಆಗ ರಂಭಾಪುರಿಯ ಪೀಠದಲ್ಲಿ ಸಿದ್ಧನಾಥ ಗುರುಗಳಿದ್ದರು. ಅವರಿಗೆ ಮರುಳಸಿದ್ಧರು ಯೋಗವಿದ್ಯೆಯ ಅಂತರಂಗವನ್ನು ಅರುಹಿದರು. ಅಲ್ಲಿಂದ ಮುಂದೆ ಮರುಳಸಿದ್ಧರು ಮಾಕೂಟಕ್ಕೆ ಹೋಗಿ ಅಲ್ಲಿ ಸಿದ್ಧರಿಗೆ ಸದ್ಬೋಧೆ ಮಾಡಿದರು.

ತರೀಕೆರೆಯ ಸೋಮಣ್ಣನೆಂಬ ಕುರುಬಗೌಡ ಗುರುಗಳಲ್ಲಿಗೆ ಭಕ್ತಿಯಿಂದ ಬಂದ ಆತನಿಗೆ ಮಕ್ಕಳಿರಲಿಲ್ಲ. ಭಕ್ತನ ಬಯಕೆಯಂತೆ ಗುರುವಿನ ಅನುಗ್ರಹದಿಂದ ಗಂಡು ಮಗುವಾಯಿತು. ಆ ಕೂಸಿಗೆ ಅಮೋಘಸಿದ್ಧ ಎಂದು ಹೆಸರಿಟ್ಟರು ಕೂಸು ತಂದೆ ತಾಯಿಗಳಿಗೆ ಮುದ್ದಾಗಿ ಬೆಳೆಯಿತು.

ಅಮೋಘ ಸಿದ್ಧ ದೊಡ್ಡವನಾದ ಮೇಲೆ ಅವನಿಗೆ ತನ್ನ ಗುರುವನ್ನು ಕಾಣಬೇಕೆಂಬ ಹಂಬಲ ಹುಟ್ಟಿತು. ಹಾಗೆಯೇ ಹುಡುಕುತ್ತ ಹೊರಟ. ಆಗ ಗುರುಗಳು ಭೀಮಾ ನದಿಯ ದಂಡೆಯ ಮೇಲಿನ ಮಾಸೂರಲ್ಲಿ ತಪಸ್ಸು ಮಾಡುತ್ತಿದ್ದನು ಶಿಷ್ಯನ ಭಕ್ತಿಯನ್ನು ಕಂಡು ಅವರಿಗೂ ಹರುಷವಾಯಿತು. ಅಮೋಘ ಸಿದ್ಧನಿಗೆ ಶಿಷ್ಯನಿಗೆ ಶಿವದೀಕ್ಷೆಯನ್ನು ಕೊಟ್ಟು ಸಂಗಡ ಕರಕೊಂಡು ಹೂಲಿಗೆ ಬಂದರು. ಅಲ್ಲಿ ಹಿರಿಯ ಕುಂಭಿಯ ವೀರಶೈವ ಕುರುಬರಿಗೆ ಅಮೋಘ ಸಿದ್ಧನನ್ನು ಗುರುವಾಗಿ ಮಾಡಿದರು. ಆ ಮೇಲೆ ಮರುಳಸಿದ್ಧರು ಹುಲಿಗೆರೆಯಲ್ಲಿ ಸೆಟ್ಟಿಯೊಬ್ಬನ ಇಚ್ಛಾಪೂರ್ತಿಯನ್ನು ಮಾಡಿ ಮೂಡೂರಿಗೆ ಹೊರಟರು. ಆ ಹೊತ್ತಿಗೆ ಕಗ್ಗಲ್ಲಪುರದ ಗೌಡ ಮರುಳಸಿದ್ಧ ಮಂದಿರವನ್ನು ಕಟ್ಟಿಸಿ ಗುರುವಿನ ಹಾದಿಯನ್ನು ಕಾಯುತ್ತ ಕುಳಿತಿದ್ದ. ಮರುಳಸಿದ್ಧರು ಅಲ್ಲಿ ತಮ್ಮ ಹೆಸರಿನ ಮೂರ್ತಿಯನ್ನು ಸ್ಥಾಪಿಸಿ ಅದರ ಆರಾಧನೆಗೆ ಆತನನ್ನೇ ನಿಯಮಿಸಿ ದಿವ್ಯಜ್ಞಾನೋಪದೇಶಮಾಡಿದರು.

ಮುಂದೆ ಶ್ವೇತೂರು ಆನೆಗೋಡುಗಳಿಗೆ ಗುರುವಿನ ಪ್ರಯಾಣ ಬೆಳೆಯಿತು. ಅಲ್ಲಿಯೂ ಅನೇಕ ಜನರಿಗೆ ಶಿವದೀಕ್ಷೆಯಾಯಿತು; ಜ್ಞಾನೋಪದೇಶವಾಯಿತು ಅಲ್ಲಿ ಸಹಜಾನಂದಯೋಗಿಗಳು ಬಂದು ಇವರನ್ನು ಸಂದರ್ಶಿಸಿ ಮುಕ್ತಿ ಮಾರ್ಗ ರಹಸ್ಯವನ್ನು ತಿಳಿದುಕೊಂಡರು.

ಮುಂದೆ ಮರುಳಸಿದ್ಧರು ಸಿದ್ಧ ನಂಜೇಶ್ವರನ ಅಪ್ಪಣೆಯಂತೆ ಸಿದ್ಧ ಮಲ್ಲೇಶ್ವರನಿಗೆ ಉಜ್ಜಯಿನಿಯ ಪಟ್ಟವನ್ನು ಕೊಟ್ಟು, ತಾವು ಹೂಲಿಯಲ್ಲಿ ಲಿಂಗೈಕ್ಯರಾದರು. ಈ ಸಿದ್ಧಮಲ್ಲೇಶ್ವರನೇ ಮಳೆಯ ಮಲ್ಲೇಶ, ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾರೆ.

ಇವರ ಕಾಲದಲ್ಲಿ ಒಮ್ಮೆ ತುರುಷ್ಕ ದೇಶದಲ್ಲಿ ಬರಗಾಲ ಬಿದ್ದಿತು. ಆಗ ಗುರುಗಳು ಅಲ್ಲಿ ಹೋಗಿ ತಮ್ಮ ತಪೋಬಲದಿಂದ ಮಳೆಗರಿಸಿದರು. ಅಲ್ಲೆಲ್ಲ ಸುಭಿಕ್ಷವಾಯಿತು ಆಗ ಮುಸಲ್ಮಾನರನೇಕರು ಇವರ ಶಿಷ್ಯರಾದರು. ಕೆಲವರಂತೂ ಇವರ ಶಿಷ್ಯರಾಗಿ ಗೋಕರ್ಣದ ವರೆಗೂ ಬಂದರು. ಈಗಿನ ಅಲ್ಲಿಯ 'ಆಯೂತ'. ಮುಸಲ್ಮಾನರು ಗುರುವಿನೊಡನೆ ಆಯೂತರಾದವರೇ. ಇದರಂತೆ ಗಜಪತಿ ಮಹೇಂದ್ರ, ಸಿದ್ಧಮಲ್ಲ ಗುರುಗಳ ಆ ದೇಶದಂತೆ ಮರುಳ ಸಿದ್ಧ ಮಂದಿರ ಇದಿರಿಗೆ ಮಂಟಪವನ್ನು ಕಟ್ಟಿಸಿದ.

## ಹದಿನೆಂಟನೆಯ ಸಂಧಿ

## ಮತ್ತೆ ಗುರುಪರಂಪರೆ

ಈ ಸಿದ್ಧ ಮಲ್ಲೇಶ ಗುರು ಮಳೆಯ ಲೀಲೆಯಿಂದ ಮಳೆಯ ಮಲ್ಲೇಶನೆಂದು ಹೆಸರಾಗಿದ್ದಾನೆ. ಅದರಂತೆ ಸಂತಾನದಾನ ಲೀಲೆಯಿಂದ ಸಂತಾನ ಮಲ್ಲೇಶ್ವರರೆಂದೂ ಪ್ರಸಿದ್ಧರಾಗಿದ್ದಾರೆ ಕೆಲಕಾಲದ ತರುವಾಯ ಅವರು 'ಸಾವಿರಕ್ಕೊಂದು ಸಂತಾನ' ಎಂಬ ಸಮಯವನ್ನು ಸಾರಿದರು. ಕೇಳುವುದೇನು ಮಕ್ಕಳಿಲ್ಲದವರೆಲ್ಲ ಅವರ ಸುತ್ತು ಮುಕ್ಕುರಿತೊಡಗಿದರು. ಉಜ್ಜಯಿನಿಯ ಬಿಜ್ಜಿಗೌಡ ಭಕ್ತಿಯಿಂದ ಬೇಡಿಕೊಂಡು ಪುತ್ರ ಸಂತಾನವನ್ನು ಪಡೆದು ಸಾವಿರ ಹೊನ್ನನ್ನು ಗುರುವಿಗರ್ಪಿಸಿದ. ಅದರಂತೆ ಬಾಗಿಳ ಬಸವನಾಯಕನೂ ಆತನ ಮಂತ್ರಿ ಓಂಕಾರನಾಯಕನೂ ಗುರುಕೃಪೆಯಿಂದ ಪುತ್ರರನ್ನು ಪಡೆದರು; ಮತ್ತು ಗುರುಗಳ ಹೇಳಿಕೆಯಂತೆ ಹೊಸ ಸಂಗಮೇಶ್ವರ ಪುರವನ್ನು ನಿರ್ಮಿಸಿ ಅಲ್ಲಿ ಕಲ್ಲಿನಾಥ ಶಿವಾಲಯವನ್ನು ಕಟ್ಟಿಸಿ ಅದಕ್ಕೆ ದಾನ-ದತ್ತಿಗಳನ್ನು ಕೊಟ್ಟರು. ಹರಪುರಿಯಲ್ಲಿಯೂ ಬುಳ್ಳನೃಪಾಲಿನಲ್ಲಿಯೂ ಗುರುವಿನ ಕರುಣೆಯಿಂದ ಸಂತಾನ ಪ್ರಾಪ್ತಿಯಾಯಿತು.

ಈ ಸುದ್ದಿ ವಿಜಯನಗರದ ಪ್ರೌಢರಾಯನ ವರೆಗೂ ಹೋಯಿತು. ಆತನು ಸಿದ್ಧಮಲ್ಲ ಗುರುವನ್ನು ಕರೆಸಿ ತನಗೆ ಸಂತಾನ ಪ್ರಾಪ್ತಿಯಾಗಬೇಕೆಂದು ಬೇಡಿಕೊಂಡನು. ಗುರುಕರುಣೆಯಿಂದ ಆತನಿಗೆ ಮಕ್ಕಳಾದುವು. ಆಗ ಅರಸು ಗುರುವಿನ ಹೆಸರಿನಿಂದ ಹಿರಿಯ (ಗುರು) ಮಠವನ್ನು ಕಟ್ಟಿಸಿ ಅದಕ್ಕೆ ದಾನ ದತ್ತಿಗಳನ್ನು ಕೊಟ್ಟನು. ಆ ಮಠಕ್ಕೆ ಯೋಗಿ ಮಳೆಯ ಮಲ್ಲೇಶ್ವರರು ಗುರುಗಳಾಗಿ ರಾಜನಿಗೂ ಕುಲಗುರುಗಳಾದರು

ಈ ಮಳೆಯ ಮಲ್ಲೇಶಯೋಗಿಗಳೂ ಮಹಾವಿದ್ವಾಂಸರು; ತಪಸ್ವಿಗಳು. ಇವರ ಹೇಳಿಕೆಯಂತೆ ಆ ವಿಜಯ ನಗರನಲ್ಲಿ ಶಿವಮತ ತತ್ತ್ವಪ್ರಸಾರ ನಿಲಯ ಸ್ಥಾಪನೆಯಾಯಿತು. ಪ್ರೌಢರಾಯನಿಗೆ ಜಕ್ಕಣಾಮಾತ್ಯ-ಲಕ್ಕಣಾಮಾತ್ಯ ಎಂಬಿಬ್ಬರು ಆಪ್ತ ಮಂತ್ರಿಗಳು. ಅವರು ರಾಜಕಾರಣ ಕುಶಲರೂ ಅತುಲ ಪರಾಕ್ರಮಿಗಳೂ ಇದ್ದಂತೆ ಸಾಹಿತ್ಯ ಮೇಧಾವಿಗಳೂ ಆಗಿದ್ದರು. ಅವರನ್ನು ಕರೆದು ಗುರು ವೀರಶೈವ ಸಿದ್ಧಾಂತದ ಅನುಸಾರವಾಗಿ ಪಂಚಾಚಾರ, ಷಟ್‌ಸ್ಥಲ ನಿರ್ಣಯ, ಅಷ್ಟಾವರಣ ಮುಂತಾದುವುಗಳನ್ನು ಶ್ರೀ ರೇಣುಕರು ಕುಂಭಜನಿಗರುಹಿದ ಸಾರವನ್ನು ತೆಗೆದು ವಚನ ರೂಪದಲ್ಲಿ ಬರೆಯುವುದಾಗಿ ಅಪ್ಪಣೆ ಮಾಡಿದರು.

ಮಂತ್ರಿಗಳು ಈ ಕಾರ್ಯಕ್ಕಾಗಿ ತಮ್ಮ ರಾಜ್ಯದಲ್ಲಿಯ ಸಕಲ ವಿದ್ವಾಂಸರನ್ನು ಅಸ್ಥಾನ ವಿದ್ವಾಂಸರನ್ನು ಸ್ವಾಮಿಗಳನ್ನು ಬರಮಾಡಿಕೊಂಡರು. ಲಕ್ಕಣಾಮಾತ್ಯರು ಶ್ರೀಬಸವೇಶ್ವರ ಕೂಡಲಸಂಗಮದೇವ ಮುದ್ರೆಯಂತೆ ಸರಸವಾದ ಎಷ್ಟೋ ವಚನಗಳನ್ನು ರಚಿಸಿದರು. ಮತ್ತು ಶಿವತತ್ತ್ವ ಚಿಂತಾಮಣಿ ಎಂಬ ಬೇರೆ ಗ್ರಂಥವನ್ನು ಇದರಲ್ಲಿಯೇ ಬರೆದರು. ಕಲ್ಲುಮಠದಾಚಾರ್ಯರು ಅಲ್ಲಮ ಪ್ರಭುಗಳಂತಹ ವಚನಗಳನ್ನು ರಚಿಸಿದರು. ಜಕ್ಕಣಾಮಾತ್ಯರಂತೂ ಅನೇಕಾನೇಕ ಶಿವಶರಣರಂಕಿತವುಳ್ಳ ವಚನಗಳಂತೆ ಬರೆದು ಸಿದ್ಧಮಾಡಿದರು. ಉಳಿದ ವಿದ್ವಾಂಸರೂ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಬೇರೆ ಬೇರೆ ಶರಣಾಂಕಿತದ ವಚನಗಳನ್ನು ನಿರ್ಮಿಸಿದರು. ಹೀಗೆ ಶಿವಮತದ ತತ್ತ್ವಗಳೆಲ್ಲ ಅಚ್ಚುಗನ್ನಡದಲ್ಲಿ ಮೆರೆಯುತೊಡಗಿದವು.

ದೇವರಾಯನು ಗುರುವಿನ ಅಪ್ಪಣೆಯಂತೆ ತುಂಗಭದ್ರಾ ತೀರದಲ್ಲಿ ಗುರ್ವಾಶ್ರಮವನ್ನು ಕಟ್ಟಿಸಿದನು. ಅಲ್ಲಿಯೇ ಗುರುಗಳು ಕೆಲದಿನ ವಾಸವಾಗಿದ್ದರು. ಅವರ ಸಂತಾನದಾನವರ ಅನೇಕ ಭಕ್ತರಿಗೆ ಆನಂದವನ್ನುಂಟು ಮಾಡಿತ್ತು.

ಒಮ್ಮೆ ಸಿಂದೋಗಿ ಪುರದ ಗೌಡನು ತನಗೆ ಪುತ್ರ ಸಂತಾನ ಬೇಕೆಂದು ಗುರುವಿಗೆ ಒಂದು ಸಾವಿರ ಹೊನ್ನನ್ನು ಭಕ್ತಿಯಿಂದ ಕಾಣಿಕೆ ಕೊಟ್ಟನು. ಗುರು ಅನುಗ್ರಹಿಸಿದ ಫಲದಿಂದ ಅತನಿಗೆ ವರುಷ ತುಂಬುವುದರೊಳಗಾಗಿಯೇ ಪುತ್ರ ಸಂತಾನವಾಯಿತು. ಆತನ ಆಳುಮಗ ಹೊಲೆಯ ಜಾತಿಯ ಮಾರನಿಗೂ ಮಕ್ಕಳಿರಲಿಲ್ಲ. ಆತನೂ ಗುರುವನ್ನು ಬೇಡಿಕೊಂಡ ಗುರುಕೃಪೆಯಿಂದ ಅವನಿಗೂ ಮಗುವಾಯಿತು. ಆದರೆ ಮಾರನಿಗೆ ಬಡತನ ಅದರಿಂದ ಅವನು ಸಾವಿರ ಕುಳ್ಳುಗಳನ್ನು ಕಾಣಿಕೆಯಾಗಿ ಕೊಡುವುದಾಗಿ ಹೇಳಿದ ಗುರು ಅವರ ಭಕ್ತಿ ಪರೀಕ್ಷೆಗಾಗಿ 'ನಮಗೆ ಬೇಕಾದಾಗ ಅವುಗಳನ್ನು ತರಿಸಿಕೊಳ್ಳುವೆವು,

ಈಗ ಬೇಡ ಎಂದು ಹೇಳಿದರು. ಮಾರ ಆ ಕುಳ್ಳುಗಳನ್ನು ಹಾಗೆಯೇ ಕಟ್ಟಿಟ್ಟ.

ಮಾರ ಮಗನಿಗೆ ಗುರುವಿನ ಅಪ್ಪಣೆಯಂತೆ ಮರುಳಸಿದ್ಧ ಎಂದು ಹೆಸರಿಟ್ಟು ಅಯ್ದು ವರುಷಗಳದಾಯಿತು. ಒಮ್ಮೆ ವಿಪರೀತ ಮಳೆ ಹಿಡಿದು ಮನೆಯಲ್ಲಿಯೂ ಉರುವಲುಗಳೇ ಇಲ್ಲವಾದುವು. ಮಾರನ ಮನೆಯಲ್ಲಿಯೂ ಅದೇ ಗತಿ. ಆಗ ಗುರುಗಳು ಮಾರನ ಹೆಂಡತಿಗೆ— ಆ ಕುಳ್ಳುಗಳನ್ನು ತಂದು ಕೊಡು— ಎಂದು ಹೇಳಿದರು. ಅವಳು ಮರುಮಾತಾಡದೆ ಗುರುವಿಗೆ ಒಪ್ಪಿಸಿದಳು. ಅಂದು ದಾಸೋಹವಲ್ಲಿ ಉರುವಲಕ್ಕೆ ಏನೂ ಇರಲಿಲ್ಲ. ಮಾರನ ಭಕ್ತಿಯ ಕಾಣಿಕೆಯೇ ಅಂದಿನ ದಾಸೋಹವನ್ನು ಸಾಗಿಸಿತು. ಆಗ ಗುರುಗಳೂ ಅಲ್ಲಿಯ ಶರಣರೂ ಮಾರನನ್ನು ಕರೆದು—ನಿನ್ನ ಮಗ ಮಹಾ ಮಹಿಮಾಶಾಲಿಯಾಗಿ ಸಿದ್ಧ ಸಂತತಿಯಲ್ಲಿ ಮೆರೆಯುವನು— ಎಂದು ಹರಿಸಿದರು.

ಹುಡುಗ ಒಂದು ವರುಷದವನಾದ. ಮಾರ ತನ್ನ ಪದ್ಧತಿಯಂತೆ ಮಗನನ್ನು ಗೌಡನ ಮನೆಯಲ್ಲಿ ಗೋಗಳನ್ನು ಕಾಯಲು ಇಟ್ಟ. ಹುಡುಗ ಗೋಪಾಲಕ ಕೆಲಸವನ್ನು ಅತಿ ದಕ್ಷತೆಯಿಂದ ಮಾಡುತ್ತಿದ್ದ. ಆದರೂ ಆತನ ಮನಸ್ಸು ಯಾವಾಗಲೂ ಗುರುವಿಚಾರದಲ್ಲಿಯೇ—ಶಿವಕೃತಿಗಳಲ್ಲಿಯೇ —ತೊಡಗಿರುತ್ತಿತ್ತು. ಆಗಾಗ ಅವನಿಂದ ಕೆಲವು ಬಾಲಲೀಲೆಗಳೂ ತೋರುತ್ತಿದ್ದುವು. ಮುಂದೆ ಹುಡುಗನಿಗೆ ಒಮ್ಮೆ ಗುರುದರ್ಶನದ ಇಚ್ಛೆ ಬಲವಾಯಿತು. ಅವನು ಗುರುವಿನ ಹತ್ತಿರ ಹೋಗಿ ಅವರ ಪಾದ ಪೂಜೆ ಮಾಡಲು ಅಪ್ಪಣೆಯನ್ನು ಕೇಳಿದ. ಜಾತಿಯ ಕೀಳು ಮೇಲುಗಳ ಕಲ್ಪನೆ ಆಗಿನ್ನೂ ಬಲವಾಗಿತ್ತು. ಗುರುವಿನ ಒಪ್ಪಿಗೆ ಸಿಕ್ಕಲಿಲ್ಲ. ಹುಡುಗ ಉಪವಾಸ ವ್ರತವನ್ನು ಕೈಕೊಂಡ. ಗುರುವಿಗೆ ಕರುಣೆ ಹುಟ್ಟಿತು. ಮುಂದೆ ಆತನ ಸಲುವಾಗಿ ಸಿಂದೋಗಿಯ ಮಾದಿಗಕೇರಿಯಲ್ಲಿ ಭವ್ಯವಾದ ಮರುಳಸಿದ್ಧ ದೇವಾಲಯವನ್ನು ಕಟ್ಟಿಸಿ ಅಲ್ಲಿ ಲಿಂಗಮೂರ್ತಿಯನ್ನು ಸ್ಥಾಪಿಸಿದರು; ಅದಕ್ಕೆ ಸರ್ವವಿಧವಾದ ಅರ್ಚನೆ ಪೂಜನೆ ಮಾಡಲಿಕ್ಕೆ ಆತನಿಗೆ ಅಪ್ಪಣೆ ಕೊಟ್ಟರು. ಮುಂದೆ ಆತನು ಒಬ್ಬ ಶರಣನಂತೆ ಬಾಳಿ ಬೆಳಗಿದ.

ಆದೇ ಊರಲ್ಲಿಯ ಹರಳನೆಂಬವನಿಗೂ ಈ ಮಠದಲ್ಲಿ ಅರ್ಚನೆಯ ಅಧಿಕಾರ ಬೇಕಾಗಿತ್ತು. ಅದಕ್ಕಾಗಿ ಆತನು ಗುರುವನ್ನು ಕಂಡ. ಆದರೆ ಗುರುಗಳು ಅವನಿಗಾಗಿ ಉಜ್ಜಯಿನಿಯ ಮಾದಿಗರ ಕೇರಿಯಲ್ಲಿ ಒಂದು ಮಂದಿರವನ್ನು ಕಟ್ಟಿಸಿಕೊಟ್ಟರು.

ಹೀಗೆ ಸಿದ್ಧ ಮಲ್ಲೇಶ್ವರರು ಭಕ್ತೋದ್ಧಾರ ಮಾಡುತ್ತ ಎಂಬತ್ತು ವರುಷ ಕಾಲ ಜೀವಿಸಿದ್ದರು. ಅವರು ಸಿದ್ಧನಾಥಾಚಾರ್ಯರಿಗೆ ಪಟ್ಟವನ್ನು ಒಪ್ಪಿಸಿ



ಉಜ್ಜಯನಿ ಮಾದರಗೇರಿಯಲ್ಲಿ ಮರುಳಸಿದ್ಧ ದೇವಾಲಯ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೮ | ದೇವನು | ದೇಪನು |
| ೯ | ೨೭ | ಲವಲವಕೆ | ಲವಲವಿಕೆ |
| ೧೬ | ೧೧ | ಕಾವ್ಯಧಾರಪ | ಕಾವ್ಯಧಾರದ |
| ೨೧ | ೪ | ಬೈರವ | ಭೈರವ |
| ೨೯ | ೧೭ | ಶ್ರೀಪತಿ ಪಂಡಿತಾರಾಧ್ಯರು. | ಶ್ರೀಪತಿ ಪಂಡಿತಾರಾಧ್ಯರು |
| ೩೨ | ೧ | ಮೂಳ್ಪಿ | ಮೂಳ್ಪ |
| ,, | ೬ | ಪಾರಜಸ್ವಲಾ | ಪಾ ರಜಸ್ವಲಾ |
| ,, | ೭ | ಗುಣೇಜ್ವಲಾ | ಗುಣೋಜ್ವಲಾ |
| ೩೫ | ೧೦ | ವಯಾಂತು | ಮಾಯಾಂತು |
| ೩೬ | ೨೫ | ನೀಲವರ್ಣವ ನ್ನೆಯ್ದು | ನೀಲವರ್ಣವನೆಯ್ದು |
| ೪೦ | ೩೦ | ಏಕೇರಾಮ | ಏಕೋರಾಮ |
| ೪೭ | ೨೨ | ಗೇರಕ್ಷ | ಗೋರಕ್ಷ |
| ,, | ೨೭ | ,, | ,, |
| ೫೮ | ೭ | ಮಾಡಿದ್ದ. | ಮಾಡಿದ್ದ |
| ೭೦ | ೧೫ | ಧರ್ಮವೂ | ಅಧರ್ಮವೂ |
| ೭೭ | ೨೫ | ಸಮಃಕಾಲೀನೆಂದು | ಸಮಕಾಲೀನನೆಂದು |
| ೮೦ | ೮ | ನರಕ; | ನರಕ |
| ೮೨ | ಕೊನೆಸಾಲು | ಮುರಳಸಿದ್ಧ.<br>ರಾಮುದೇವ. | ಮುರುಳಸಿದ್ಧ,<br>ರಾಮದೇವ, |
| ೮೩ | ೧ | ರಾದ್ಯ | ಶಾಕ್ಯ |
| ೮೪ | ೭ | ರಾಕ್ಷ | ಶುಕ್ಷ |
| ೯೩ | ಕೊನೆ | ಜಿಲಾ | ಜಿಲ್ಲಾ |
| ೯೬ | ೧೦ | ಬರೆಗಲ್ಲಿಗೆ | ಒರೆಗಲ್ಲಿಗೆ |
| ೯೯ | ೨೨ | ಕೊಯುದ್ದು | ಕೊಯ್ದು |
| ೧೦೨ | ೭ | ಕೊರಿಸಿದ್ದಾರೆ | ಕೊನರಿಸಿದ್ದಾರೆ |
| ,, | ೧೮ | ಪ್ರಸಂಗಕ್ಕೆ | ವ್ಯಾಸಂಗಕ್ಕೆ |
| ೧೦೩ | ೧೮ | ಯಾವ ಸಮಾಜಕ್ಕೇ ಬುದ್ಧ ಹೇಳಹೋಗುವುದು ಅತಿ ಪ್ರಸಂಗವೆನಿಸುಒಡಿಲ್ಲವೇ ? ಆ ಸಮಾಜಕ್ಕೆ | ಯಾವ ಸಮಾಜದಲ್ಲಿದೆಯೋ ಆ ಸಮಾಜಕ್ಕೆ |
| | ೧೯ | ಕೇಳಬೇಕಾಗಿದ್ದಿತು | ಹೇಳಬೇಕಾಗಿದ್ದಿತು |

| | | | |
|---|---|---|---|
| ೧೦೫ | ೮ | ವಿಷಯು | (ಬಿಡಬೇಕು) |
| ೧೦೭ | ೧೮ | ಹೆರವರ | ಹೆರವರು |
| ೧೧೭ | ೨ | ಸ್ವಲ | ಸ್ವಲ್ಪ |
| ,, | ೧೧ | ವಸ್ತೂ | ವಸ್ತು |
| ೧೨೮ | ೧೫ | ವಿಪರೀತಸಲ್ಲ ದುಂತ ನಗೆಂದು | ವಿಪರೀತಸಲ್ಲದುಂ ತನಗೆಂದು |
| ,, | ಕೊನೆ | ಮರುಳಾರಾಧ್ಯ | ಮರುಳಾರಾಧ್ಯಃ |
| ೧೧೯ | ೧ | ಆದಿಮರುಳಸಿದ್ಧ | ಆಧಿಮರುಳಸಿದ್ಧ, |
| ,, | ೫ | ಮಲ್ಲಾರ್ಯರ್ನವ | ಮಲ್ಲಾರ್ಯರ್ನರ |
| ೧೨೦ | ೪ | ತ್ರೀ | ಶ್ರೀ |
| ೧೨೧ | ೧೦ | ಸೀವೆ | ಸೇನೆ |
| ೧೨೩ | ೧೯ | ರಾಜಾಗ್ರಯವು | ರಾಜಾಶ್ರಯವು |
| ,, | ೨೧ | ೧೮೪೦ | ೧೮೪೦. |
| ೧[illegible]೯ | ೨ | ಸುರು | ಗುರು |
| ೧೪೦ | ೧೮ | ಹರಗನ | ಹರಪನ |
| ೧೪೧ | ೨೧ | ಅವತಾರವರಾಗಿ | ಅವತಾರವಾಗಿ |
| ೧೪೨ | ೧೯ | ಮತ್ತ್ಯಾದಿ | ಮರ್ತ್ಯಾದಿ |
| ,, | ೨೩ | ಸಂಕ್ಷಿಪ | ಸಂಕ್ಷಿಪ್ತ |
| ೧೪೩ | ೧೫ | ಶೀರ್ಘ | ಶೀಘ್ರ |
| ೧೪೭ | ,, | ಇತ್ತು | ಇತ್ತ |
| ೧೪೫ | ೪ | ಶಿವಸಾಯುಜ | ಶಿವಸಾಯುಜ್ಯ |
| ೧೪೮ | ೨೦ | ಕಾಂಕಇತ್ವಾ | ಕಾಂಕ್ಷಯುತ್ವಾ |
| ೧೫೩ | ೧ | ಚತುರ್ದಿಕ್ಕ್ಯಗಳೆಲ್ಲಾ ಹ್ವಾಸಿಸಿ | ಚತುರ್ದಿಕ್ಕುಗಳೆಲ್ಲಾ ಹ್ವಾಸಿಸಿ |
| ೧೫೪ | ೨೯ | ಹಸ್ತತ್ವಪಲ್ಲಿರಿಸಿ, ಲಿಂಗಾಗ | ಹಸ್ತಪಲ್ಲೀಸಿ, ಲಿಂಗಾಂಗ |
| ೧೫೭ | ೯ | ವಸ್ತುಸ್ಥಿತಿಯು | ವಸ್ತುಸ್ಥಿತಿಯು |
| ,, | ೩೧ | ಪಂಡಿತರಾಧ್ಯ | ಪಂಡಿತಾರಾಧ್ಯ |
| ೧೫೮ | ೧ | ಪ್ರಭುಭುಘನುತಂ | ಪ್ರಭುಂ ಬುಧನುತಂ |
| ೧೫೯ | ೭ | ಎಂಟ | ಎಂಬ |
| ೧೬೦ | ೩ | ಎನೊಂದೂ | ಏನೊಂದೂ |
| ,, | ೬ | ಶಾಪಾನುನುಗ್ರಹ | ಶಾಪಾನುಗ್ರಹ |
| ೧೬೨ | ೫ | ವಿರೂಪಳಾದ | ವಿರೂಪಳಾದ |
| ,, | ೧೧ | ಉಪದೇಶವಂದೆ | ಉಪದೇಶದಂತೆ |
| ೧೬೪ | ೨೦ | ಬ್ರಹ್ಮ | ಬ್ರಹ್ಮ |
| ೧೬೭ | ೫ | ನೇಮ | ನೆಯು |
| ,, | ೧೭ | ರಾಜ್ಯನೇ | ರಾಜ್ಯವೇ |
| ೧೬೯ | ೧೮ | ಸ್ತುತ್ವೋವಾಚ್ | ಸ್ತುತ್ವೋವಾಚ |

| | | | |
|---|---|---|---|
| ೧೭೨ | ೪ | ಒಂದನೇ | ಬಂದನೇ |
| ೧೭೭ | ೨೨ | ಗಭರ್ | ಗರ್ವ |
| ೧೭೯ | ೧೭ | ಕಾದ್ಯ | ಕಾವ್ಯ |
| ,, | ೧೮ | ಸುಪ್ರಬೋಧಗವುದ | ಸುಪ್ರಭೋಧಾಗವುದ |
| ,, | ೨೨ | ವಳವೃಕ್ಷ | ವಟವೃಕ್ಷ |
| ೧೮೧ | ೨೪ | ಸಭೆಯ್ನ್ ಲಂಕರಿಸಿದ್ದಳು | ಸಭೆಯನ್ನಲಂಕರಿಸಿದ್ದಿಳು |
| ೧೮೨ | ೨೪ | ವಗಿತೆಯರ | ವಸಿತೆಯರ |
| ,, | ,, | ನಾರ | ನಾಶ |
| ೧೮೪ | ೯ | ಮತೋದ್ಧರಕ್ಕಾಗಿ | ಮತೋದ್ಧಾರಕ್ಕಾಗಿ |
| ,, | ೧೪ | ಮೊಗಲು | ಮೊದಲು |
| ೧೮೫ | ೬ | ಜನಾರೇರ್ಣ | ಜನಾಕೀರ್ಣ |
| ೧೯೦ | ೨೨ | ಮೋಕಕ್ಷ | ಮೋಕ್ಷ |
| ೧೯೬ | ೫ | ಪತುವಧೆ | ಪಶುವಧೆ |
| ೨೧೦ | ೨೪ | ಸಹವಾಸ | ಸಾಹಸ |
| ೨೨೪ | ೧೧ | ಪ್ರಾ[illegible]ೋಭಯ | ಪ್ರಾಕೃಪೋಭಯ |

---

ವಿ. ಸೂ: ಅನರ್ಥ——ಅಪಾರ್ಥಗಳಾಗುವಂತಿರುವ ಎಲ್ಲಕಡೆಗಳಲ್ಲಿಯೂ ಬಹುಶಃ ತಿದ್ದಲಾಗಿದೆ. ಸಹಜವಾಗಿ ತಿಳಿಯುವಂತಿರುವ ಮತ್ತು ಅಲ್ಲೊಂದಿಲ್ಲೊಂದು ಉಳಿದಿರಬಹುದಾದ ಅಶುದ್ಧಗಳನ್ನು ತಿದ್ದಿಕೊಳ್ಳುವುದಾಗಬೇಕು. ಸಂ.

